# ಭಾರತದ ಮಹಾಪುರುಷರು

ಆರ್ಯಾಂಬ ಪಟ್ಟಾಭಿ

ಪ್ರಕಾಶ ಸಾಹಿತ್ಯ
ತಲಕಾಡು ಸುಬ್ಬರಾವ್ ಗಲ್ಲಿ, ಅರಳೇಪೇಟೆ
ಬೆಂಗಳೂರು-೨

# ಭಾರತದ ಮಹಾಪುರುಷರು

ಆರ್ಯಾಂಬ ಪಟ್ಟಾಭಿ

ಪ್ರಕಾಶಕರು
ಪ್ರಕಾಶ ಸಾಹಿತ್ಯ
ತಲಕಾಡು ಸುಬ್ಬರಾವ್ ಗಲ್ಲಿ, ಅರಳೇಪೇಟೆ
ಬೆಂಗಳೂರು-೨

ಮೊದಲ ಮುದ್ರಣ ೧೯೭೫



ಸಮಾಜದ ಚಿರನೂತನ ಸಚೇತನ ಶಕ್ತಿಯಾದ ಯುವಜನಾಂಗಕ್ಕೆ
ಈ ಕೃತಿ ಅರ್ಪಿತ

**ಆರ್ಯಾಂಬ ಪಟ್ಟಾಭಿ**

ಜಿ. ಎಚ್. ರಾಮರಾವ್
ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್
ಮೈಸೂರು

# ಮುನ್ನುಡಿ

ದೊಡ್ಡವರ ಬದುಕು ಯಾವಾಗಲೂ ವಿಶಿಷ್ಟರೀತಿಯದಾಗಿರುತ್ತದೆ; ಅದು ಸಾಮಾನ್ಯವಾಗಿ ಲೋಕರೂಢಿಗೆ ಭಿನ್ನವಾಗಿ ತನ್ನತನದಿಂದ ವಿಜೃಂಭಿಸುತ್ತದೆ; ಇತರರಿಗೆ ದಾರಿದೀಪವಾಗಿ ಆದರ್ಶವಾಗುತ್ತದೆ; ಅವರ ನಡೆ ಸದಾ ಅವರ ನುಡಿಯನ್ನು ಸಮರ್ಥಿಸುತ್ತದೆ. ನಿಃಸ್ವಾರ್ಥ ಪರವಾದ ಅವರ ಬಾಳ್ವೆ ಲೋಕಕ್ಕೆ ಕಲ್ಯಾಣಕಾರಿಯಾಗುತ್ತದೆ. ತಮ್ಮ ವ್ಯಕ್ತಿತ್ವದ ಅಂತಃಸತ್ವದಿಂದ ಇಡೀ ಜನ ಸಮುದಾಯವನ್ನೇ ಬಡಿದೆಬ್ಬಿಸಿ, ಪ್ರಭಾವಿಸಿ, ತನ್ಮೂಲಕ ಲೋಕಹಿತ ಸಾಧಿತ ವಾಗುವಂತೆ ಮಾಡುತ್ತಾರೆ. ಈ ಕಾರಣಗಳಿಂದಲೇ ಜನರು ಮಹಾಪುರುಷ ರನ್ನು ಭಗವಂತನ ಅವತಾರ ಎಂದು ಪರಿಭಾವಿಸುವುದು. ಲೋಕಕಲ್ಯಾಣ ಯಾರಲ್ಲಿಯೋ ಕಾಣಲಿ ಜನತೆ ಅವರಿಗೆ ದೈವಾಂಶಶಕ್ತಿಯನ್ನು ಆರೋಪಿಸಿ, ಗೌರವಿಸಿ, ಆರಾಧಿಸುತ್ತಾರೆ. ಇಂಥ ಆರಾಧಕರಲ್ಲಿ ಇಬ್ಬಗೆಯ ಜನರನ್ನು ಕಾಣ ಬಹುದು. ತಾವು ಮೆಚ್ಚಿದ ಮಹಾತ್ಮರನ್ನು ಫಲಾಪೇಕ್ಷೆಯ ದೃಷ್ಟಿಯಿಂದ ಆರಾಧಿಸುವ ಮಂದಿ ಒಂದು ಕಡೆ; ಮಹಾತ್ಮರ ನಡೆ ನುಡಿಗಳನ್ನು ತಮ್ಮ ಶಕ್ತ್ಯನುಸಾರ ಜೀವನದಲ್ಲೂ ಅನುಸರಿಸಿ ಅವರಂತೆಯೇ ಬದುಕಲು ಪ್ರಾಮಾ ಣಿಕವಾಗಿ ಪ್ರಯತ್ನಿಸುವ ಮಂದಿ ಮತ್ತೊಂದು ಕಡೆ.

ವೈಜ್ಞಾನಿಕ ಹಾಗೂ ಕೈಗಾರಿಕಾ ಸಂಸ್ಕೃತಿಯ ಪರಿಣಾಮವಾಗಿ ಜೀವನ ಮೌಲ್ಯಗಳೆಲ್ಲ ಮಾರ್ಪಾಡಾಗುತ್ತಿವೆ. ಹೀಗಾಗಿ ಇಂದಿನ ಯುವಕರ ಮನಸ್ಸಿ ನಲ್ಲಿ ನಿರಾಶೆ ಗೊಂದಲಗಳು ತುಂಬಿಕೊಂಡಿವೆ. ಅವರು ಬಿರುಗಾಳಿಗೆ ಸಿಕ್ಕಿದ ಹಡಗಿನಂತಿದ್ದಾರೆ. ಅವರಿಗೊಂದು ಆದರ್ಶವಿಲ್ಲ. ವಿವೇಕಾನಂದರಂಥ ಮಹಾ ವ್ಯಕ್ತಿಗಳ ಆದರ್ಶ ಈಗವರಿಗೆ ಅವಶ್ಯಕವಾಗಿದೆ. ಈ ಮಹಾಪುರುಷರು ಬೋಧಿಸಿದ ತತ್ತ್ವಗಳ ಅಧ್ಯಯನಕ್ಕೆ ಕೊಡುವಷ್ಟೇ ಪ್ರಧಾನತೆಯನ್ನು ಅವರ ಬದುಕಿನ ಹಿನ್ನೆಲೆಗೂ ಕೊಡಬೇಕಾಗುತ್ತದೆ. ಮಹಾವ್ಯಕ್ತಿಯೊಬ್ಬ ಪರಿಸರ ದಿಂದ ಎಷ್ಟರಮಟ್ಟಿಗೆ ಪ್ರಭಾವಿತನಾಗಿರುತ್ತಾನೆ. ಪರಿಸರದಿಂದ ಸಿಡಿದೆದ್ದು ಹೇಗೆ ಬೇರೆಯಾಗುತ್ತಾನೆ, ಅವರ ವ್ಯಕ್ತಿತ್ವದ ವಿಕಾಸಕ್ಕೆ ಪೂರಕ ಪೋಷಕ ಅಂಶಗಳಾವುವು ?—ಮುಂತಾದ ವಿಷಯಗಳತ್ತ ಗಮನ ಹರಿಸಬೇಕಾಗುತ್ತದೆ.

ಮಾನವನ ಎತ್ತರದ ವ್ಯಕ್ತಿತ್ವಕ್ಕೆ ಚಿಂತನ ಮಂಥನಗಳೇ ಮುಖ್ಯ. ವ್ಯಕ್ತಿ ಎಷ್ಟೇ ದೊಡ್ಡವನಿರಲಿ ಅವನ ತತ್ತ್ವಗಳನ್ನು ಕುರುಡು ಕುರುಡಾಗಿ ಅನುಸರಿಸಿ ನಡೆಯುವಂಥ ಅಪಾಯ ಮತ್ತೊಂದಿಲ್ಲ. ದಾರಿ ಮಟ್ಟವಾಗಿದೆ ಎಂದು ಕಣ್ಕಟ್ಟಿ ಕೊಂಡು ನಡೆಯಬಾರದು. ಮಟ್ಟದಾರಿಯಲ್ಲಿ ಹಳ್ಳದಿಣ್ಣೆಗಳಲ್ಲದಿರಬಹುದು; ಆದರೆ ನಾಗರ, ಚೇಳು, ಹಲ್ಲಿಗಳು ಅಲ್ಲಿ ಹರಿದಾಡಬಾರದೆಂದಿಲ್ಲ. ಯುಗ ಧರ್ಮದ ಹಿನ್ನೆಲೆಯಲ್ಲಿ ಮಹಾತ್ಮರ ತತ್ತ್ವಗಳನ್ನು ಒರೆಗೆಹಚ್ಚಿ, ಉಚಿತಾನುಚಿತ ಒಳಿತು ಕೆಡಕುಗಳನ್ನು ಪರಿಶೀಲಿಸಿ, ಬೇಕು ಬೇಡಗಳನ್ನು ಬೇರ್ಪಡಿಸಿ, ಆರೋಗ್ಯದಾಯಕ ಅಂಶಗಳನ್ನು ಆಯ್ಕೆ ಮಾಡಬೇಕಾಗುತ್ತದೆ. ಏಕೆಂದರೆ ಜಗತ್ತಿನಲ್ಲಿ ಯಾವೊಬ್ಬ ವ್ಯಕ್ತಿಯೂ ಪರಿಪೂರ್ಣನಲ್ಲ. ಎಲ್ಲರಲ್ಲಿರುವ ಒಳಿತನ್ನು ಆರಿಸಿ ಕೊಂಡು ತನ್ನದನ್ನಾಗಿ ಮಾಡಿಕೊಂಡು ತನ್ನ ವ್ಯಕ್ತಿತ್ವವನ್ನು ತಿದ್ದಿಕೊಳ್ಳುವವನೇ ನಿಜವಾದ ಜೀವನ ರೂವಾರಿ. ಇಂತಹ ಜೀವನ ರೂವಾರಿಗಳಿಗೆ ಶ್ರೀಮತಿ ಆರ್ಯಾಂಬ ಪಟ್ಟಾಭಿ "ಭಾರತದ ಮಹಾಪುರುಷರು" ಗ್ರಂಥದಲ್ಲಿ ಸಾಕಷ್ಟು ಪೌಷ್ಟಿಕ ಸಾಮಗ್ರಿ ದೊರೆಯುತ್ತದೆ ಎನ್ನುವುದರಲ್ಲಿ ಯಾವ ಸಂಶಯವೂ ಇಲ್ಲ.

ಇದೊಂದು ವಿಶಿಷ್ಟಬಗೆಯ ಕೃತಿ. ಇದರಲ್ಲಿ ಏಳನೆಯ ಶತಮಾನದಿಂದ ಹಿಡಿದು ಇಪ್ಪತ್ತನೆಯ ಶತಮಾನದವರೆಗಿನ, ದಕ್ಷಿಣದಿಂದ ಉತ್ತರದವರೆಗಿನ ವ್ಯಾಪ್ತಿಯಲ್ಲಿ ಕಂಡುಬರುವ ಭಾರತದ ಏಳು ಜನ ಮಹಾಪುರುಷರ ಜೀವನ ಚಿತ್ರಗಳು ಕುಂಚಗೊಂಡಿವೆ. ವೈವಿಧ್ಯಮಯವಾದ ಈ ಚಿತ್ರಗಳಲ್ಲಿ ಜಗತ್ತನ್ನೇ ಬೆರುಗುಗೊಳಿಸಿದ ಅಸಾಧಾರಣ ವ್ಯಕ್ತಿಗಳ ಧ್ಯೇಯ ಧೋರಣೆ ಸಾಧನೆ ಸಿದ್ಧಿಗಳ ಸಂಕ್ಷಿಪ್ತ ಇತಿಹಾಸ ತುಂಬ ಅಚ್ಚುಕಟ್ಟನಿಂದ ರೂಪಿತವಾಗಿದೆ.

ಒಂದು ದೃಷ್ಟಿಯಲ್ಲಿ ಇದು ಭಾರತೀಯ ಸಂಸ್ಕೃತಿಯಇತಿ ಹಾಸವಾಗಿದೆ. ಸಕಲ ಶಾಸ್ತ್ರಪಾರಂಗತರೂ, ಅದ್ವೈತ ಸಿದ್ಧಾಂತಿಗಳೂ ಹಿಂದೂಧರ್ಮ ಪ್ರತಿಷ್ಠಾಪನಾಚಾರ್ಯರಲ್ಲೊಬ್ಬರೂ ಆದ ಶ್ರೀ ಶಂಕರಾಚಾರ್ಯರ ಧಾರ್ಮಿಕ ಸಾಧನೆ; ನಡೆನುಡಿಗಳಲ್ಲಿ ಸಮನ್ವಯವನ್ನು ಸಾಧಿಸಿ, ಲೋಕದ ಕೊಳೆಯನ್ನು ತೊಳೆಯಲೋಸುಗ ತನ್ನನ್ನೇ ಆಹುತಿ ಕೊಟ್ಟುಕೊಂಡ ಮಹಾಸಮಾಜ ಸುಧಾರಕ ಬಸವಣ್ಣನವರ ಹೋರಾಟದ ಬದುಕು; ಅನುಪಮ ಆಧ್ಯಾತ್ಮಿಕ ಶಕ್ತಿಸಂಪನ್ನರೂ ಸರ್ವಧರ್ಮಸಮನ್ವಯಾಚಾರ್ಯರೂ, ಋಷಿಗಳೂ ಆದ ಶ್ರೀರಾಮಕೃಷ್ಣ

ಪರಮಹಂಸರ ತಪಸ್ವೀ ಜೀವನ ; ಭಾರತೀಯ ಸನಾತನ ಸಂಸ್ಕೃತಿಯ ಮಹತ್ತನ್ನು ಜಗತ್ತಿಗೆ ಸಾರಿ ತನ್ಮೂಲಕ ಹಿಂದೂಧರ್ಮದ ತತ್ತ್ವಗಳನ್ನು ವಿಶ್ವವೇದಿಕೆಗೆ ಕೊಂಡೊಯ್ದ ಮಾನವತಾಪ್ರೇಮಿ ವೀರಸನ್ಯಾಸಿ, ವಾಸ್ತವವಾದಿ, ಶ್ರೀ ಸ್ವಾಮಿ ವಿವೇಕಾನಂದರ ದೊಡ್ಡ ಬದುಕು; ವೈವಿಧ್ಯಮಯವಾದ ಭಾರತೀಯ ಸಂಸ್ಕೃತಿಗೆ ಸಾಹಿತ್ಯದಲ್ಲಿ ಆಕರವನ್ನೊದಗಿಸಿ, ಅಭಿವ್ಯಕ್ತಿಸಿ ಅದಕ್ಕೆ ಅಂತರ ರಾಷ್ಟ್ರೀಯ ಮನ್ನಣೆಯನ್ನು ಒದಗಿಸಿಕೊಟ್ಟ ಗುರುದೇವ ರವೀಂದ್ರನಾಥ ಠಾಕೂರರ ಜೀವನಚಿತ್ರ; ಭಾರತೀಯರ ನರನಾಡಿಗಳಲ್ಲಿ ಸ್ವಾತಂತ್ರ್ಯದ ಕಿಚ್ಚೆಬ್ಬಿಸಿ ಜನತೆಗೆ ಅಹಿಂಸೆಯ ದೀಕ್ಷೆಕೊಟ್ಟು, ಜಗತ್ತಿಗೆ ಶಾಂತಿಯ ಸಂದೇಶವನ್ನು ಸಾರಿದ ಮಹಾತ್ಮ ಗಾಂಧೀಜಿ ನಡೆದ ದಾರಿ ; ಮಹಾಯೋಗಿ, ಸ್ವಾತಂತ್ರ್ಯ ಹೋರಾಟಗಾರ ಅರವಿಂದರು ಎತ್ತಿ ಹಿಡಿದ ಆದರ್ಶಗಳು—ಇವೆಲ್ಲ ಆಕರ್ಷವಾಗಿ ನಿರೂಪಣೆಗೊಂಡಿವೆ.

ಮೇಲಿನ ಎಲ್ಲ ಮಹಾಪುರುಷಲ್ಲಿ ಮೂಲತಃ ಸಾಧಾರಣಾಮನೋಭಾವ ಕಂಡುಬರುತ್ತದೆ. ಸಮಾಜದಿಂದ ನೋಯದವರಾರೂ ಸಮಾಜ ಸುಧಾರಕರಾಗಲು ಸಾಧ್ಯವಿಲ್ಲ. ಇದರ ಸತ್ಯ ಮಹಾಪುರುಷರ ಜೀವನಚಿತ್ರಗಳಲ್ಲಿ ಸ್ಪಷ್ಟವಾಗುತ್ತದೆ. ನಿದರ್ಶನಕ್ಕೆ ಬಸವಣ್ಣನವರ ಬದುಕನ್ನೆ ತೆಗೆದುಕೊಳ್ಳಬಹುದು. ಬಸವಣ್ಣನವರು ಸುತ್ತಮುತ್ತಲ ಸಮಾಜದ ಅನೀತಿ, ಅಧರ್ಮ, ಕುರುಡುನಂಬಿಕೆ, ಕಂದಾಚಾರ, ಹಿಂಸಾಚಾರ, ಶುಷ್ಕವ್ರತಾಚಾರ, ಢಂಬಾಚಾರ, ಧರ್ಮದ ತಪ್ಪುಕಲ್ಪನೆ, ಜಾತಿಮತಗಳ ದಬ್ಬಾಳಿಕೆ, ಅಜ್ಞಾನ, ಅವಿವೇಕ ಮುಂತಾದವುಗಳನ್ನು ಕಂಡು ಕಡುನೊಂದು ರೋಸಿ, ಹೇಸಿ ಆ ಸಮಾಜವನ್ನು ತಿದ್ದಿ ಹಸನುಮಾಡಲು ಟೊಂಕಕಟ್ಟಿದರು. ಧರ್ಮಕ್ಕೆ ಹೊಸ ವ್ಯಾಖ್ಯಾನ ಮಾಡಿದರು, ಬದುಕಿಗೆ ಹೊಸ ಮೌಲ್ಯಗಳನ್ನು ತಂದರು. ತಾವು ಜನಿಸಿಬಂದ ಜಾತಿ ಸಮಾಜದ ಕಣ್ಣಿನಲ್ಲಿ ಅತ್ಯುತ್ತಮನೆಸಿದ್ದರೂ ಅದನ್ನು ಧಿಕ್ಕರಿಸಿ ಹೊರಕ್ಕೆ ಬಂದರು. ಕಾಯಕಕ್ಕೆ ಪ್ರಾಧಾನ್ಯವನ್ನು ಕೊಟ್ಟು, ಮೇಲು ಕೀಳುಗಳನ್ನು ತೊಡೆದು, ಸರ್ವಮತಗಳನ್ನು ಸಂಗಮಗೊಳಿಸಿದರು. ಸಾಮಾನ್ಯರ ಉದ್ಧಾರಕ್ಕಾಗಿ ಬಸವಣ್ಣನವರಷ್ಟು ಕಾಳಜಿ ವಹಿಸಿದ ವ್ಯಕ್ತಿ—ಬುದ್ಧನನ್ನುಳಿದರೆ ಇಡೀ ಭಾರತೀಯ ಇತಿಹಾಸದಲ್ಲಿ ದೊರೆಯುವುದು ಅಪರೂಪ. ಸಾಹಿತ್ಯವನ್ನು ಶ್ರೀಸಾಮಾನ್ಯನ ಸ್ವತ್ತಾಗಿಸಿದ ಮೊದಲು ವ್ಯಕ್ತಿ ಬಸವಣ್ಣನವರು. ಜನ

ಭಾಷೆಯನ್ನು ಸಾಹಿತ್ಯದ ಗದ್ದುಗೆಗೇರಿಸಿದ ಪವಾಡಪುರುಷರು. ಧಾರ್ಮಿಕ ವಾಗಿ, ಸಾಹಿತ್ಯಿಕವಾಗಿ, ರಾಜಕೀಯವಾಗಿ. ಶೈಕ್ಷಣಿಕವಾಗಿ ಅವರು ಪೂರ್ಣ ಕ್ರಾಂತಿಯನ್ನು ನಡೆಸಿದರು. ಸ್ತ್ರೀಸ್ವಾತಂತ್ರ್ಯಕ್ಕೆ, ಸ್ತ್ರೀಸಮಾನತೆಗೆ ವೇದಿಕೆ ಯನ್ನು ಒದಗಿಸಿದ ಮೊದಲು ವ್ಯಕ್ತಿ ಅವರು. ಕ್ರಾಂತಿಯ ಎಲ್ಲ ಮುಖಗಳನ್ನು ಒದಗಿಸಿ ಅವರ ಜೀವಿತ ಒಳಗೊಂಡಿತು. ಕರ್ಣಾಟಕದ ಇತಿಹಾಸದಲ್ಲೇಕೆ ಭಾರತದ ಇತಿಹಾಸದಲ್ಲಿಯೇ ಅವರನ್ನು ಮೀರಿಸಿದ ಕ್ರಾಂತಿಕಾರಿ ಅಪರೂಪ. ಕಾಲಾತೀತರಾಗಿ, ಲೋಕಾತೀತರಾಗಿ ಉಳಿದ ಅವರು ಮಹಾಪುರುಷಮಾತ್ರ ವಲ್ಲ, ಮಹಾಕವಿ ಕೂಡ. ಅದೇ ಪರಂಪರೆಗೆ ಸೇರಿದವರು ಸ್ವಾಮಿ ವಿವೇಕಾ ನಂದರು, ಮಹಾತ್ಮ ಗಾಂಧೀಜಿಯವರು ; ಲೌಕಿಕಾಧ್ಯಾತ್ಮಿಕ ಕ್ಷೇತ್ರಗಳನ್ನು ಸಮನ್ವಯಗೊಳಿಸಿದ ಕವಿ, ಕ್ರಾಂತದರ್ಶಿ, ಲೋಕಹಿತೈಷಿ ಎಂದು ತೋರಿಸಿ ಕೊಟ್ಟವರು ಟಾಗೋರು.

ಭಾರತೀಯರ ಅಧ್ಯಾತ್ಮಸಿದ್ಧಿ, ಯೋಗಮಹಿಮೆ, ಪುರಾಣಪ್ರಜ್ಞೆ, ಸ್ವಾತಂತ್ರ್ಯಪ್ರೇಮ, ಸಾಹಿತ್ಯಸಾಧನೆ, ಕಲಾರಾಧನೆ, ಜೀವನಪಾವಿತ್ರ್ಯ, ತ್ಯಾಗಬುದ್ಧಿ, ಉದಾರತೆ, ಸುಧಾರಣಾಪ್ರವೃತ್ತಿ, ಇಹಪರಗಳ ನಂಟು ಮುಂತಾದ ನಾನಾ ವಿಷಯಗಳ ಸಾಂಸ್ಕೃತಿಕ ಪರಂಪರೆಯತ್ತ ಇಲ್ಲಿಯ ಸರಳ ಸುಂದರ ಬರಹಗಳು ಬೆರಳುಮಾಡುತ್ತವೆ, ಪರೋಕ್ಷವಾಗಿ. ಈ ಜೀವನಚಿತ್ರ ಗಳು ತುಂಬಾ ಸಂಕ್ಷಿಪ್ತವಾಗಿವೆ, ಅಂದರೆ ಅವು ಅಪೂರ್ಣವಲ್ಲ ಅಸಮರ್ಪಕ ವಲ್ಲ. ಆದರೂ ಈ ಮಹಾಪುರುಷರ ಜೀವನ ಸಾಧನೆಗಳ ಅರ್ಥಪೂರ್ಣವೂ, ಆಳವೂ ಆದ ಅಧ್ಯಯನಕ್ಕೆ ಈ ಚಿತ್ರಗಳು ತೀವ್ರರೀತಿಯಲ್ಲಿ ಪ್ರಚೋದನೆ ನೀಡುತ್ತವಲ್ಲದೆ ಓದುಗರ ಮನಸ್ಸಿನ ಮೇಲೆ ಸತ್ಪ್ರಭಾವವನ್ನು ಬೀರುತ್ತವೆ. ಈ ವಾಙ್ಮಯ ಶರೀರಗಳ ಸಂಪರ್ಕದಿಂದಾಗಿ ಅವರ ಚೇತನ ಹಿರಿದಾಗುತ್ತದೆ.

ಶ್ರೀಮತಿ ಆರ್ಯಾಂಬ ಪಟ್ಟಾಭಿ ಅವರು ಈಗಾಗಲೇ ಕನ್ನಡ ಸಾಹಿತ್ಯಕ್ಷೇತ್ರ ದಲ್ಲಿ ಶಾಶ್ವತವಾದ ಸ್ಥಾನವನ್ನು ಸಂಪಾದಿಸಿಕೊಂಡಿದ್ದಾರೆ ; ಅವರ ಹೆಸರನ್ನು ಕೇಳದ ಕನ್ನಡಿಗರಿಲ್ಲ, ಅವರ ಕೃತಿಗಳನ್ನು ಓದದ ಸಹೃದಯರಿಲ್ಲ. ಆದ್ದರಿಂದ ಅವರನ್ನು ನಾನು ಈ ಮೂಲಕ ಹೊಸದಾಗಿ ಪರಿಚಯಿಸಿ ಕೊಡಬೇಕಾಗಿಲ್ಲ. ಅವರ ಬರಹಗಳಲ್ಲಿ ಮಗುವಿನ ನಿಷ್ಕಳಂಕ ಮಂದಹಾಸವನ್ನು, ತಾಯಿಯ ಮಾರ್ದವತೆಯನ್ನು, ಬಯಲು ಸೀಮೆಯ ನದಿಯ ಗಾಂಭೀರ್ಯವನ್ನು ಕಾಣು

ತ್ತೇವೆ. ಸಿದ್ಧಾಂತಗಳನ್ನೂ, ಅತಿಗಹನವಾದ ತಾತ್ತ್ವಿಕ ವಿಷಯಗಳನ್ನು ಹೇಳುವಾಗ ಕೂಡ ಅವರ ಶೈಲಿ ಸರಸವಾಗಿ ಸಲೀಲವಾಗಿ ಹರಿಯುತ್ತದೆ. ಅವರು ಒಳ್ಳೆಯ ಕಾದಂಬರಿಕಾರ್ತಿಯಾಗಿ, ಕತೆಗಾರ್ತಿಯಾಗಿ ಹೆಸರು ಪಡೆದಿದ್ದಾರೆ. ಅವರ ಕಾದಂಬರಿಗಳು ಚಿತ್ರೀಕರಣಗೊಂಡು ಆಬಾಲವೃದ್ಧರನ್ನು ಆಕರ್ಷಿಸಿವೆ. ಪ್ರಕೃತ ಕೃತಿಗೆ ಮುನ್ನುಡಿ ಬರೆಯುವ ನೆಪದಿಂದ ಅವರು ಈಗಾಗಲೇ ಪಡೆದಿರುವ ಸಿದ್ಧಿಗಾಗಿ ಅವರನ್ನು ಅಭಿನಂದಿಸುವ, ಅವರ ಸಾಹಿತ್ಯಜೀವನದ ಭವಿಷ್ಯ ಬಹೂಜ್ವಲವಾಗಿ ಬೆಳಗಲೆಂದು ಹಾರೈಸುವ ಅವಕಾಶ ದೊರೆತುದಕ್ಕಾಗಿ ಸಂತೋಷಿಸುತ್ತ, ಈ ಎರಡು ಮಾತುಗಳನ್ನು ಮುಗಿಸುತ್ತೇನೆ.

18–5–1975,
ಕುಲಪತಿ ಭವನ,
ಮೈಸೂರು.

ದೇಜಗೌ.

# ಅ ರಿ ಕೆ

ಒಂದು ದೇಶದ ಸಂಸ್ಕೃತಿ, ಪರಂಪರೆ, ಸಮಾಜ ಬೆಳೆಯಬೇಕಾದರೆ ಅದರ ಅಂಗವಾದ ವ್ಯಕ್ತಿಗಳು, ಅವರ ಜೀವನ ಹಾಗೂ ವಿಚಾರಧಾರೆಗಳು ಉದಾತ್ತವಾಗಿರಬೇಕು. ಅಂತಹ ಹಲವಾರು ವ್ಯಕ್ತಿಗಳು ನಮ್ಮ ದೇಶದಲ್ಲಿ ಅಂದಿನಿಂದ ಇಂದಿನವರೆಗೂ ಕಣ್ಮುಂದೆ ಬಂದಿದ್ದಾರೆ. ಇಂತಹ ವ್ಯಕ್ತಿಗಳನ್ನು 'ಮಹಾಪುರುಷರು' ಎನ್ನುತ್ತೇವೆ. ಭಾರತದ ಮಹಾಪುರುಷರು ಒಬ್ಬಿಬ್ಬರಲ್ಲ, ಹಲವಾರು ಮಂದಿ. ಅವರಲ್ಲಿ ಕೆಲವರು ಯೋಗಿಗಳು, ತತ್ವಜ್ಞಾನಿಗಳು, ಧರ್ಮಸಂಸ್ಥಾಪಕರು, ಸಮಾಜ ಸುಧಾರಕರು. ಈ ಪುಸ್ತಕದಲ್ಲಿ ಏಳು ಜನ ಮಹಾಪುರುಷರ ಜೀವನ ಮತ್ತು ಸಂದೇಶವನ್ನು ಸಂಕ್ಷೇಪಿಸಿ ಬರೆದಿದ್ದೇನೆ.

ಪರಮ ಶ್ರೇಷ್ಠವಾದ ಅದ್ವೈತ ತತ್ವಾಮೃತವನ್ನು ಬೋಧಿಸಿ ಜನರ ಹೃದಯಾಂಧಕಾರವನ್ನು ಪರಿಹರಿಸಿದ ಜಗದ್ಗುರು ಶಂಕರಾಚಾರ್ಯರು, ಅಗ್ರಗಣ್ಯ ಧರ್ಮಸಂಸ್ಥಾಪಕ, ಕನ್ನಡ ಕುಲದ ಕ್ರಾಂತಿಪುರುಷರಾಗಿ ಸಮತೆ ಮತ್ತು ಕಾಯಕ ತತ್ವವನ್ನು ಎತ್ತಿ ಹಿಡಿದ ಬಸವಣ್ಣನವರು, ಆಧ್ಯಾತ್ಮಿಕ ಪ್ರಪಂಚದಲ್ಲಿ ಹೆಸರಾಂತ ರಾಮಕೃಷ್ಣರು, ಭಾರತದ ಪವಿತ್ರ ಸಂಸ್ಕೃತಿಯನ್ನು ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಬೆಳಗಿದ ವಿವೇಕಾನಂದರು, ತಮ್ಮ ಕವಿತ್ವ, ಪಾಂಡಿತ್ಯ ದಿಂದ ಇಡೀ ಜಗತ್ತನ್ನೇ ಮುಗ್ಧಗೊಳಿಸಿದ ಕವಿಸಾರ್ವಭೌಮ ರವೀಂದ್ರನಾಥ ಠಾಕೂರರು ಭಾರತೀಯರಲ್ಲಿ ಸ್ವಾತಂತ್ರ್ಯದ ಕಿಚ್ಚೆಬ್ಬಿಸಿ ಅಹಿಂಸೆ, ಸತ್ಯ, ಧರ್ಮದ ಸಂದೇಶ ಸಾರಿದ ಮಹಾತ್ಮ ಗಾಂಧೀಜಿ ಮತ್ತು ಸಾಹಿತ್ಯ, ಕಲೆ, ಆರ್ಥಿಕ ಹಾಗೂ ಆಧ್ಯಾತ್ಮಿಕ, ರಾಜಕೀಯ ವಿಚಾರಗಳಲ್ಲಿ ಪ್ರಖ್ಯಾತಿ ಪಡೆದ ಅರವಿಂದರು, ಇವರೆಲ್ಲರ ಜೀವನ, ಸಂದೇಶ, ತತ್ತ್ವ, ವಿಚಾರಗಳಿಂದ ಹಿಂದೂ ಧರ್ಮದ ವೈಶಾಲ್ಯ ಮತ್ತು ವೇದಾಂತ ತತ್ತ್ವದ ಗಂಭೀರತೆಯ ಪರಿಚಯ ವಾಗುತ್ತದೆ.

ಕನ್ನಡ ಸಾಹಿತ್ಯದಲ್ಲಿ ಜೀವನಚರಿತ್ರೆಗಳಿರುವುದೇ ಕಡಿಮೆ. ಅಲ್ಲೊಂದು, ಇಲ್ಲೊಂದು—ಹೀಗೆ ಯಾರ್ಯಾರ ಬಗ್ಗೆ ಎಷ್ಟೆಷ್ಟು ಪುಸ್ತಕಗಳು ಬಂದಿವೆ ಎನ್ನುವುದೂ ಓದುಗರಿಗೆ ತಿಳಿಯದು. ಆದರೆ ವಾಸ್ತವವಾಗಿ ಈ ಮಹಾಪುರುಷ ರನ್ನು ಕುರಿತು ಲೇಖಕರು ಅನೇಕ ಪುಸ್ತಕಗಳನ್ನು ರಚಿಸಿದ್ದಾರೆ. ಇವರಲ್ಲಿ

ಒಬ್ಬೊಬ್ಬರ ಮೇಲೂ ಹಲವಾರು ಬೃಹದ್ಗ್ರಂಥಗಳು ಹುಟ್ಟಿಕೊಂಡಿವೆ. ಇಡೀ ವಿಶ್ವಜನಾಂಗದ ಕಲ್ಯಾಣವನ್ನೇ ತಮ್ಮ ಮುಖ್ಯ ಧ್ಯೇಯವನ್ನಾಗಿಟ್ಟು ಕೊಂಡಿದ್ದ ಈ ಮಹಾವ್ಯಕ್ತಿಗಳ ಜೀವನಚರಿತ್ರೆಯನ್ನು ತಿಳಿದು, ಅವರ ಜೀವನಮಾರ್ಗವನ್ನೂ, ಅವರು ಸಾಧಿಸಿದ ಮಹತ್ಕಾರ್ಯಗಳನ್ನೂ ತದೇಕ ಚಿತ್ತದಿಂದ ವ್ಯಾಸಂಗ ಮಾಡುವುದು ಇಂದಿನ ಯುವಜನಾಂಗದ ಕರ್ತವ್ಯ ವಾಗಿದೆ. ಆದರೆ ಇಂದಿನ ವಿದ್ಯಾರ್ಥಿಗಳಿಗೆ ಈ ಮಹಾಪುರುಷರ ಬೃಹದ್ಗ್ರಂಥ ಗಳನ್ನು ಓದುವುದಕ್ಕೆ ಕಾಲಾವಕಾಶವಾಗಲಿ, ತಾಳ್ಮೆಯಾಗಲಿ ಇಲ್ಲ. ಆದ್ದರಿಂದ ಏಳು ಜನ ಮಹಾಪುರುಷರ ಜೀವನ ಮತ್ತು ಸಂದೇಶವನ್ನು ಈ ಒಂದು ಪುಸ್ತಕದಲ್ಲಿ ಸಂಕ್ಷೇಪಿಸಿ ಬರೆದು ಈ ಕೊರತೆಯನ್ನು ಹೋಗಲಾಡಿಸಲು ನಾನು ಪ್ರಯತ್ನಿಸಿದ್ದೇನೆ.

ಇಂದು ನಮ್ಮ ದೇಶವನ್ನು ಸುತ್ತುವರಿದಿರುವ ಜಾತಿ, ಕುಲ, ಭಾಷೆ ಪ್ರಾಂತ ಭಾವನೆಗಳನ್ನು ತೊರೆದು ಇಡೀ ಭಾರತದ ಚಿಂತೆ ಮಾಡುವ ಹಾಗೂ ನಮ್ಮ ಸಂಸ್ಕೃತಿಯನ್ನು ಅರಿಯುವಂತಹ ನಮ್ಮ ತರುಣ ತರುಣಿಯರ ಮನ ತಿರುಗಿ ಸುವ ಕಾರ್ಯಗಳಿಗೆ ಹೆಚ್ಚಿನ ಆದ್ಯತೆ ನೀಡಬೇಕಾಗಿದೆ. ಈ ಮಹಾಪುರುಷರ ಆದರ್ಶಗಳಾದ ದೇಹ, ನೈತಿಕ ಹಾಗೂ ಆಧ್ಯಾತ್ಮಿಕ ಸಂಪತ್ತಿನ ಬೆಳವಣಿಗೆಗೆ ವಿದ್ಯಾರ್ಥಿವೃಂದ ಗಮನ ನೀಡಬೇಕಾಗಿದೆ.

ಈ ಮಹಾಪುರುಷರ ಜೀವನಚರಿತ್ರೆಯನ್ನು ಅಭ್ಯಾಸ ಮಾಡಿ, ಅವರ ಉಪದೇಶವನ್ನು ಪರಿಶೀಲಿಸಿ, ಅವರ ನಡೆನುಡಿಗಳಿಂದ ಸ್ಫೂರ್ತಿ ಮತ್ತು ಮಾರ್ಗದರ್ಶನ ಪಡೆಯುವುದು ಇಂದಿನ ಯುವಜನಾಂಗದ ಕರ್ತವ್ಯವಾಗಿದೆ. ಇವರ ಸಂದೇಶ, ವಿಚಾರ ನಮ್ಮ ನಡೆ ನುಡಿಗಳಲ್ಲಿ ಮೂಡಿಬಂದರೆ ನಮ್ಮ ಜೀವನ ನಿರ್ಮಲವಾಗುತ್ತದೆ, ಮುಂದೆ ಕೈಗೊಳ್ಳುವ ಮಹತ್ಕಾರ್ಯಗಳಿಗೆ ತುಂಬ ಸಹಾಯವಾಗುವುದು.

ಈ ಗ್ರಂಥ ರಚನೆ ಮಾಡುವುದರಲ್ಲಿ ಹಲವಾರು ಪುಸ್ತಕಗಳನ್ನು ಓದಿ, ವಿಷಯ ಸಂಗ್ರಹಿಸಿ ವಿಚಾರ ತೆಗೆದುಕೊಂಡಿದ್ದೇನೆ. ಆ ಪುಸ್ತಕಗಳ ಗ್ರಂಥ ಕರ್ತರಿಗೆಲ್ಲ ನಾನು ಸಂಪೂರ್ಣ ಕೃತಜ್ಞಳಾಗಿದ್ದೇನೆ.

ಕೇಳಿದ ಕೂಡಲೆ ಸಂತೋಷದಿಂದ ಒಪ್ಪಿಕೊಂಡು ಬಿಡುವಿಲ್ಲದಿದ್ದರೂ ಸಮಯ ಮಾಡಿಕೊಂಡು ಈ ಕೃತಿಗೆ ಸೊಗಸಾದ ಮುನ್ನುಡಿ ಬರೆದುಕೊಟ್ಟು

ಕಿರಿಯ ಲೇಖಕಳಾದ ನನ್ನನ್ನು ಪ್ರೋತ್ಸಾಹಿಸಿದ ಕನ್ನಡ ಭಾಷೆಯ ಪ್ರಗತಿಗೆ ತಮ್ಮ ತನುಮನವನ್ನೇ ಮುಡುಪಾಗಿಟ್ಟಿರುವ ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳೂ, ವಿದ್ವಾಂಸರೂ, ಪ್ರತಿಭಾವಂತ ಲೇಖಕರೂ, ನನ್ನ ಗುರುಗಳೂ ಆದ ಶ್ರೀಮಾನ್ ದೇ. ಜವರೇಗೌಡರಿಗೆ ನಾನು ಚಿರಋಣಿಯಾಗಿದ್ದೇನೆ.

ಈ ಗ್ರಂಥದ ಪ್ರಕಾಶಕರಾದ ಪ್ರಕಾಶ ಸಾಹಿತ್ಯದವರಿಗೂ ಹಾಗೂ ಇದರ ಪ್ರಕಟಣೆಗೆ ಕಾರಣರಾದ ಜಿ. ಎಸ್. ಪ್ರಭಾಕರ್‌ರವರಿಗೂ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳು.

ಸಮರ್ಥ ಮುದ್ರಣದಲ್ಲಿ, ಅಚ್ಚುಕಟ್ಟಾದ ಕೆಲಸದಲ್ಲಿ ದಕ್ಷರಾದ 'ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್'ನ ಜಿ. ಎಚ್. ರಾಮರಾವ್‌ರವರಿಗೂ ನನ್ನ ಅನಂತ ವಂದನೆಗಳು.

ಓದುಗರ ವಿಮರ್ಶೆಗೆ ಹಾರ್ದಿಕ ಸ್ವಾಗತ.

ಆರ್ಯಾಂಬ ಪಟ್ಟಾಭಿ

೧೨೩೪, ಕೃಷ್ಣಮೂರ್ತಿಪುರಂ
ಮೈಸೂರು—೪

*

# ವಿಷಯಾನುಕ್ರಮಣಿಕೆ

# ಜಗದ್ಗುರು ಶಂಕರಾಚಾರ್ಯರು

## ಏಳನೆಯ ಶತಮಾನ

ಹೊಸ ಯುಗವೊಂದನ್ನು ನಿರ್ಮಿಸಿ, ಹಿಂದೂಧರ್ಮ ಪ್ರತಿಷ್ಠಾಪನೆ ಮಾಡಿ, ಭಾರತದ ಕೀರ್ತಿ ಕಲಶವನ್ನು ಬೆಳಗಿದ ಮಹಾಪುರುಷರತ್ನಗಳ ಮಾಲಿಕೆಯಲ್ಲಿ ಶಂಕರಾಚಾರ್ಯರ ಹೆಸರು ಚೂಡಾಮಣಿಯಂತೆ ಶೋಭಿಸುತ್ತದೆ. ಪ್ರಪಂಚದ ಶ್ರೇಷ್ಠ ಉಪದೇಶಕರಲ್ಲಿ, ಪ್ರಕಾಂಡ ಪಂಡಿತರಲ್ಲಿ, ಪ್ರಸಿದ್ಧ ಧರ್ಮಸಂಸ್ಥಾಪಕರಲ್ಲಿ ಅವರಿಗೆ ವಿಶಿಷ್ಟ ಸ್ಥಾನವಿದೆ. ವಿಭೂತಿ ಪುರುಷರೂ, ಪ್ರಾಮಾಣಿಕರೂ, ಪ್ರೌಢ ಅದ್ವೈತ ವೇದಾಂತದ ವ್ಯಾಖ್ಯಾನಕಾರರೂ ಆದ ಶಂಕರರನ್ನು ವೇದಾಂತ ಅಧ್ಯಾತ್ಮ ಶಾಸ್ತ್ರದ ಮಕುಟಮಣಿಗಳೆನ್ನಬಹುದು. ಅಸಾಮಾನ್ಯ ಪಂಡಿತರೂ, ಮಹಾನ್ ವ್ಯಕ್ತಿಗಳೂ, ಆಧ್ಯಾತ್ಮ ಜ್ಞಾನಿಗಳೂ, ಸಿದ್ಧಪುರುಷರೂ ಆದ ಈ ಮಹಾಪುರುಷರನ್ನು ಭಗವಾನ್ ಶಂಕರನ ಅವತಾರವೆಂದೇ ಹಿಂದೂಗಳು ತಿಳಿದಿದ್ದಾರೆ.

ಶಂಕರಾಚಾರ್ಯರ ಜನನಕಾಲದಲ್ಲಿ ಸರ್ವಧರ್ಮ ಸಮನ್ವಯ, ಸರ್ವಧರ್ಮ ಸಹಿಷ್ಣುತೆ, ಸರ್ವಜೀವ ಸಮತೆಗಳೇ ಆಧಾರವಾಗಿರುವ ಭಾರತೀಯ ಸಂಸ್ಕೃತಿಯನ್ನು ಅಡಗಿಸಿಟ್ಟಿರುವ ಸನಾತನ ಧರ್ಮ ಅವಸಾನಕಾಲದಲ್ಲಿತ್ತು. ಬೌದ್ಧ ಧರ್ಮವು ಶುಷ್ಕ ಆಚಾರದಿಂದ ಆವರಿಸಲ್ಪಟ್ಟು, ಇಸ್ಲಾಂಮತದ ಪ್ರಚಾರ ಬಿರುಸಿನಿಂದ ನಡೆಯುತ್ತಿತ್ತು. ಶಾಕ್ತರು, ಕಾಪಾಲಿಕರು, ಬೌದ್ಧರು, ಚಾರ್ವಾಕರು, ವಾಮಾಚಾರದವರು ವೈದಿಕಧರ್ಮವನ್ನು ಖಂಡಿಸಿ ಅನೇಕ ದುರಾಚಾರಗಳಲ್ಲಿ ತೊಡಗಿದ್ದರು. ಧಾರ್ಮಿಕತೆಯ ನಂದಾದೀಪ ಸಂಪೂರ್ಣವಾಗಿ ನಂದಿಹೋಗುವ ಸಮಯದಲ್ಲಿ ಶಂಕರರು ಜನಿಸಿ ಭಾರತದ ಧಾರ್ಮಿಕ ಪುನರುಜ್ಜೀವನಕ್ಕೆ ಕಾರಣರಾದರು.

ಶಂಕರಾಚಾರ್ಯರ ಜನ್ಮಸ್ಥಳ ಹಾಗೂ ಜನನಕಾಲವನ್ನು ನಿರ್ಣಯಿಸಲು ಪಂಡಿತರು ಅನೇಕ ಪ್ರಯತ್ನಗಳನ್ನು ಮಾಡುತ್ತಿದ್ದರೂ ಅವುಗಳ ಬಗ್ಗೆ ಸಾಕಷ್ಟು ಭಿನ್ನಾಭಿಪ್ರಾಯಗಳಿವೆ. ಹಲವಾರು ಕಾರಣಗಳಿಂದ ಪ್ರಕೃತಿ ಸೌಂದರ್ಯಕ್ಕೆ ಹೆಸರುವಾಸಿಯಾದ ಕೇರಳಪ್ರಾಂತ್ಯದ ಕಾಲಟಿ ಗ್ರಾಮದಲ್ಲಿ

ನಂಬೂದರೀ ಬ್ರಾಹ್ಮಣ ವಂಶದಲ್ಲಿ ಸುಮಾರು ಏಳನೆಯ ಶತಮಾನದ ಅಂತ್ಯದಲ್ಲಿ ಶಂಕರರು ಜನಿಸಿದರೆಂಬ ನಿರ್ಣಯವನ್ನು ಅಂಗೀಕರಿಸಲಾಗಿದೆ.

ಆಚಾರ್ಯ ಶಂಕರರ ತಂದೆಯ ಹೆಸರು ಶಿವಗುರು. ಅವರು ಚಿಕ್ಕಂದಿನಿಂದ ವೈರಾಗ್ಯದಲ್ಲಿ ಆಸಕ್ತರಾಗಿ, ವೈದಿಕ ಕರ್ಮಕಾಂಡದಲ್ಲಿ ವಿಶೇಷ ಶ್ರದ್ಧೆಯುಳ್ಳ ಸದಾಚಾರ ಸಂಪನ್ನರು, ಮತ್ತು ತಪೋನಿಷ್ಠರಾಗಿದ್ದರು. ಬಹಳ ವರ್ಷ ಮಕ್ಕಳಾಗದೆ ಆತನ ಪತ್ನಿ ಆರ್ಯಾಂಬೆ ಮಗುವಿಗಾಗಿ ಹಂಬಲಿಸಿ, ಪುತ್ರನನ್ನು ಪಡೆಯಬೇಕೆಂಬ ಆಸೆಯಿಂದ ಈಶ್ವರನ ಪೂಜೆ ಮಾಡಿದಳು. ಈಶ್ವರನ ಅನುಗ್ರಹದಿಂದ ವೈಶಾಖ ಶುಕ್ಲ ಪಂಚಮಿಯ ದಿನ ಆಕೆಯ ಗರ್ಭದಲ್ಲಿ ಶಂಕರನ ಜನನವಾಯಿತು. ಬಾಲ್ಯದಿಂದ ವಿಲಕ್ಷಣ ಪ್ರತಿಭೆಯನ್ನು ಪಡೆದಿದ್ದ ಶಂಕರ ಮೂರು ವರ್ಷ ತುಂಬುವುದರೊಳಗೆ ಮಾತೃಭಾಷೆಯಾದ ಮಲೆಯಾಳಂ ಭಾಷೆಯನ್ನು ಕಲಿತುಕೊಂಡ. ಮಗನಿಗೆ ಉಪನಯನ ಮಾಡಬೇಕೆಂದಿದ್ದಾಗ ತಂದೆ ಮೃತರಾದರು. ವಿಧವೆಯಾದ ತಾಯಿಗೆ 'ಹುಟ್ಟುವುದು, ಸಾಯುವುದು, ಇದೆಲ್ಲಾ ಮಾಯೆ. ಹುಟ್ಟಿದವನಿಗೆ ಸಾವು ತಪ್ಪಿದ್ದಲ್ಲ, ಹುಟ್ಟು, ಸಾವು, ಲಾಭ, ನಷ್ಟ, ಸುಖ, ದುಃಖ ಇವುಗಳನ್ನು ಲಕ್ಷ್ಯಮಾಡದೆ ಶಿವನನ್ನು ಧ್ಯಾನಿಸಿ ಮನಶ್ಶಾಂತಿ, ಸಮಾಧಾನ ತಂದುಕೊಳ್ಳುವುದು ವಿವೇಕ' ಎಂದು ಶಂಕರ ಆ ಎಳೆವಯಸ್ಸಿನಲ್ಲೇ ವೈರಾಗ್ಯದ ಮಾತುಗಳನ್ನಾಡಿ, ಆಕೆಯ ದುಃಖ ನಿವಾರಣೆಗೆ ಪ್ರಯತ್ನಿಸಿದ. ಐದನೆಯ ವಯಸ್ಸಿನಲ್ಲಿ ಉಪನಯನವಾಗಿ ಶಂಕರ ವೇದಶಾಸ್ತ್ರದ ಅಧ್ಯಯನಕ್ಕಾಗಿ ಗುರುಗಳ ಬಳಿಗೆ ಹೋದ. ಗುರು-ಕುಲವಾಸದಲ್ಲಿದ್ದಾಗ ಶಂಕರ ತನ್ನ ತೀಕ್ಷ್ಣಬುದ್ಧಿ ಸಾಮರ್ಥ್ಯ, ಅಲೌಕಿಕ ಪ್ರತಿಭೆ ಮತ್ತು ಗ್ರಹಣಶಕ್ತಿಗಳಿಂದ ಗುರುಗಳ ಮೆಚ್ಚುಗೆ ಸಂಪಾದಿಸಿದ. ಅವನ ವಿದ್ಯೆ ವಿವೇಕ, ಪ್ರತಿಭೆ, ಮಹಿಮೆ, ಕೀರ್ತಿ ದೇಶದಲ್ಲೆಲ್ಲಾ ಹರಡಿತು. ಎಳನೆಯ ವಯಸ್ಸಿನಲ್ಲೇ ಅವನು ಶ್ರೇಷ್ಠವಾದ ವೇದಾಂತ ರಹಸ್ಯಗಳನ್ನು ಶಿಷ್ಯ ಸಮೂಹಕ್ಕೆ ಬೋಧಿಸಿದ. ಶಂಕರನ ವಿದ್ವತ್ತು, ಪ್ರತಿಭೆಯ ಸಮಾಚಾರ ಕೇಳಿದ ಕೇರಳದ ರಾಜ ಅವನನ್ನು ತನ್ನ ಆಸ್ಥಾನಕ್ಕೆ ಆದರಪೂರ್ವಕವಾಗಿ ಆಹ್ವಾನಿಸಿದ. ಆದರೆ ತ್ಯಾಗ, ವೈರಾಗ್ಯದ ಸಂಗಮಕ್ಷೇತ್ರವಾಗಿದ್ದ ಶಂಕರ ರಾಜನ ಆಮಂತ್ರಣವನ್ನು ಸ್ವೀಕರಿಸದಿದ್ದಾಗ ರಾಜನೆ ಕಾಲಟಿಗೆ ಬಂದು ಆತನ ದರ್ಶನ ಮಾಡಿ ಕೃತಾರ್ಥನಾದ.

ಚಿಕ್ಕಂದಿನಿಂದ ವೈರಾಗ್ಯಮನೋಧರ್ಮವುಳ್ಳವನಾದ ಶಂಕರ ಜ್ಯೋತಿಷ್ಯದಿಂದ ತಾನು ಅಲ್ಪಾಯುಃ ಎನ್ನುವ ವಿಷಯ ತಿಳಿದಮೇಲಂತೂ ಮತ್ತಷ್ಟು ವಿರಕ್ತನಾದ. ಧರ್ಮಸಂಸ್ಥಾಪನೆ ಹಾಗೂ ಲೋಕೋದ್ಧಾರಕ್ಕಾಗಿ ಸಂನ್ಯಾಸವನ್ನು ಸ್ವೀಕರಿಸಲು ಅವನು ತೀರ್ಮಾನಿಸಿದ. ಈ ನಿರ್ಧಾರವನ್ನು ಅವನು ಬಹಳ ದಿವಸ ತಾಯಿಯಿಂದ ಮುಚ್ಚಿಟ್ಟ. ವಿಶೇಷ ಮಾತೃಭಕ್ತಿಯುಳ್ಳವನಾದ ಶಂಕರನಿಗೆ ತಾಯಿಯ ಮನಸ್ಸನ್ನು ನೋಯಿಸುವುದು ಬೇಕಿರಲಿಲ್ಲ. ಒಬ್ಬನೇ ಮಗನಿಗೆ ಆದಷ್ಟು ಜಾಗ್ರತೆ ಮದುವೆಮಾಡಿ, ಮನೆಗೆ ಸೊಸೆ ಬರಮಾಡಿಕೊಳ್ಳುವ ಸಂಭ್ರಮದಲ್ಲಿದ್ದ ತಾಯಿಗೆ ಒಂದು ದಿನ ಮಗನ ಸಂಕಲ್ಪ ತಿಳಿಯಿತು. ಗಂಡನಿಂದ ಅಗಲಿದ ಆರ್ಯಾಂಬೆ ಮಗನ ನಿರ್ಧಾರ ತಿಳಿದು ಗಾಬರಿಗೊಂಡು ಮತ್ತಷ್ಟು ದುಃಖಿತಳಾಗಿ, ಸಂನ್ಯಾಸಿಯಾಗುವುದು ಬೇಡವೆಂದಳು. ಆದರೆ ಒಂದು ವಿಚಿತ್ರ ಘಟನೆ ನಡೆದು ಶಂಕರನ ಅಭಿಲಾಷೆ ನೆರವೇರಿತು. ಎಂಟನೆಯ ವಯಸ್ಸಿನಲ್ಲಿದ್ದಾಗ ಒಂದು ದಿನ ಶಂಕರ ನದಿಯಲ್ಲಿ ಸ್ನಾನಮಾಡುತ್ತಿದ್ದ. ಅದೇ ತಾನೆ ಸ್ನಾನಮುಗಿಸಿದ ತಾಯಿ ದಡದಲ್ಲಿ ನಿಂತಿದ್ದಳು. ಬಲಿಷ್ಠವಾದ ಮೊಸಳೆಯೊಂದು ಶಂಕರನ ಕಾಲು ಹಿಡಿಯಿತು. ಎಷ್ಟೇ ಪ್ರಯತ್ನಿಸಿದರೂ ಅದರ ಹಿಡಿತದಿಂದ ಬಿಡಿಸಿಕೊಳ್ಳುವುದು ಶಂಕರನಿಗೆ ಸಾಧ್ಯವಾಗಲಿಲ್ಲ. 'ನಾನು ಸಾಯುತ್ತಿದ್ದೇನೆ, ಸಂನ್ಯಾಸ ಸ್ವೀಕಾರ ಮಾಡಿ ಮೋಕ್ಷಕ್ಕೆ ಅಧಿಕಾರಿಯಾಗಲು ಅಪ್ಪಣೆಕೊಡಿ' ಎಂದು ಅವನು ಕೂಗಿ ಹೇಳಿ ತಾಯಿಯ ಅನುಮತಿ ಪಡೆದುಕೊಂಡ ಕೂಡಲೆ ಮೊಸಳೆಯು ಅವನ ಕಾಲು ಬಿಟ್ಟಿತು.

ಹನ್ನೊಂದನೆಯ ವಯಸ್ಸಿನಲ್ಲಿ ಶಂಕರ ತಾಯಿಯ ರಕ್ಷಣೆಯ ಭಾರವನ್ನು, ಆಸ್ತಿಯನ್ನೂ ಬಂಧುಗಳಿಗೆ ಒಪ್ಪಿಸಿ ಮನೆಯನ್ನು ಬಿಟ್ಟು ಹೊರಟ. ಹೋಗುವಾಗ ತಾಯಿಯ ಅಪ್ಪಣೆಯಂತೆ ಆಕೆಯ ಅಂತ್ಯಕಾಲದಲ್ಲಿ ಬಂದು ದಹನ ಸಂಸ್ಕಾರವನ್ನು ಸ್ವಹಸ್ತದಿಂದಲೇ ಮಾಡುವುದಾಗಿ ಅವನು ಮಾತುಕೊಟ್ಟ. ನಂತರ ಒಂದು ಅಜ್ಞಾತ ಗುಹೆಯಲ್ಲಿ ಅಖಂಡ ಸಮಾಧಿಯಲ್ಲಿರುವ ಗೋವಿಂದ ಭಗವತ್ಪಾದರ ಬಳಿಗೆ ಶಂಕರ ಹೋದ. ಅವರಿಂದ ಶಂಕರರು ಅದ್ವೈತ ವೇದಾಂತದ ಉಪದೇಶವನ್ನು ಗ್ರಹಿಸಿ ಕಾಷಾಯವಸ್ತ್ರ ದಂಡ ಕಮಂಡಲಗಳನ್ನು ಪಡೆದು, ಸಂನ್ಯಾಸದೀಕ್ಷೆ ತೆಗೆದುಕೊಂಡು 'ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಶ್ರೀ ಶಂಕರ ಭಗವತ್ಪೂಜ್ಯಪಾದ' ಎನ್ನಿಸಿಕೊಂಡರು. ಕಲಿ

ಯುಗದಲ್ಲಿ ಸಂನ್ಯಾಸ ಸ್ವೀಕಾರಮಾಡುವುದು ನಿಷಿದ್ಧ ಎಂದು ಅನೇಕರು ಅವರನ್ನು ಆಕ್ಷೇಪಿಸಿದರು. ಆಗ ಶಂಕರರು ಸಂನ್ಯಾಸವನ್ನು ಸಮರ್ಥಿಸಿ 'ಸಂನ್ಯಾಸ ಪ್ರತಿಷ್ಠಾಪನಾ' ಎಂಬ ಗ್ರಂಥವನ್ನು ಬರೆದು ಸನ್ಯಾಸಿಯ ಕರ್ತವ್ಯವನ್ನು ಕಾರ್ಯದಲ್ಲಿ ತೋರಿಸಿ 'ಸಂನ್ಯಾಸ ಪ್ರತಿಷ್ಠಾಪನಾಚಾರ್ಯ' ಎಂಬ ಕೀರ್ತಿಗಳಿಸಿದರು. ಸಂನ್ಯಾಸ ಸ್ವೀಕಾರಮಾಡಿದ ಶಂಕರರ ದೃಷ್ಟಿಯಲ್ಲಿ ಭಿಕ್ಷೆ ನೀಡಿದವರೆಲ್ಲ ತಾಯಂದಿರು, ಗುರುಹಿರಿಯರು, ತಂದೆಯರು, ಶಿಷ್ಯರೇ ಮಕ್ಕಳು ಮತ್ತು ಏಕಾಂತವಾಸದಲ್ಲಿ ಲಭಿಸುವ ಶಾಂತಿಯೇ ಪತ್ನಿ.

ಗೋವಿಂದ ಭಗವತ್ಪಾದರ ಬಳಿ ಶಂಕರರು ಮೂರು ವರ್ಷಗಳ ಕಾಲ ಅದ್ವೈತ ಸಿದ್ಧಾಂತವನ್ನು ಸಾಧನೆಮಾಡಿದರು. ವಿಶೇಷವಾಗಿ ಅವರು ಉಪನಿಷತ್ತು, ಬ್ರಹ್ಮಸೂತ್ರಗಳ ಅಧ್ಯಯನ ನಡೆಸಿ ಅದ್ವೈತ ತತ್ತ್ವದಲ್ಲಿ ಪ್ರವೀಣರಾದರು. ಸಮಗ್ರಶಾಸ್ತ್ರಗಳ ಮತ್ತು ಯೋಗಶಿಕ್ಷಣದ ಅಧ್ಯಯನವನ್ನೂ ಮಾಡಿ ಗುರುಗಳ ಆಶೀರ್ವಾದ ಪಡೆದುಕೊಂಡ ಶಂಕರರು ಪವಿತ್ರಪೂರ್ಣ ತ್ಯಾಗಮಯ ಜೀವನ ನಡೆಸುವ ಪ್ರತಿಜ್ಞೆಮಾಡಿ ತೀರ್ಥಯಾತ್ರೆ ಕೈಗೊಂಡರು. ಬ್ರಹ್ಮಸೂತ್ರಗಳ ಮೇಲೆ ಭಾಷ್ಯರಚನೆ ಮಾಡಬೇಕೆಂದು ನಿರ್ಧರಿಸಿ ಅವರು ಶಿಷ್ಯರೊಡನೆ ಬದರಿಕಾಶ್ರಮಕ್ಕೆ ಪ್ರಯಾಣ ಬೆಳೆಸಿದರು. ಹನ್ನೆರಡು ವರ್ಷದ ಈ ಬಾಲ ಸಂನ್ಯಾಸಿಗೆ ಅನೇಕ ಯುವಕರು, ಮುದುಕರು, ಸಂನ್ಯಾಸಿಗಳು, ಬ್ರಹ್ಮಚಾರಿಗಳು ಶಿಷ್ಯರಾದರು. ಮಹಾಭಾರತವನ್ನು ರಚಿಸಿದ ವ್ಯಾಸರ ಆಶ್ರಮದ ಬಳಿಯಿದ್ದ ಗುಹೆಯಲ್ಲಿ ವಾಸಮಾಡುತ್ತಾ ಶಂಕರಾಚಾರ್ಯರು ಬ್ರಹ್ಮಸೂತ್ರ, ಭಗವದ್ಗೀತಾ, ಮತ್ತು ಉಪನಿಷತ್ತುಗಳ ಮೇಲೆ ವ್ಯಾಖ್ಯಾನಗಳನ್ನು ರಚಿಸಿದರು. ಹದಿನಾರನೆಯ ವಯಸ್ಸಿನಲ್ಲಿ ಮಹತ್ವಪೂರ್ಣವಾದ ವೈದಿಕಧರ್ಮದ ರಹಸ್ಯವನ್ನು ತಿಳಿಸುವ ಭಾಷ್ಯಗ್ರಂಥಗಳನ್ನು ಅವರು ಬರೆದು ಪ್ರಖ್ಯಾತರಾದರು. ಶಿಷ್ಯರಿಗೆ ಭಾಷ್ಯದ ಉಪದೇಶವನ್ನೂ ಮಾಡಿದರು. 'ವೇದಗಳಲ್ಲಿ ಬ್ರಹ್ಮನಿಗೂ, ವೇದಾಂಗಗಳಲ್ಲಿ ಗಾರ್ಗ್ಯನಿಗೂ, ಅವುಗಳ ತಾತ್ಪರ್ಯ ವಿವೇಚನೆಯಲ್ಲಿ ಬೃಹಸ್ಪತಿಗೂ, ವೇದಗಳಲ್ಲಿರುವ ಕರ್ಮ ಪ್ರಕಾರಗಳನ್ನು ವಿವರಿಸುವುದರಲ್ಲಿ ಜೈಮಿನ್ಯಾಚಾರ್ಯರಿಗೂ, ಅವುಗಳ ತತ್ತ್ವ ನಿರೂಪಣೆಯಲ್ಲಿ ವೇದವ್ಯಾಸರಿಗೂ' ಸಮಾನರೆನಿಸಿದ ಆಚಾರ್ಯರು ಅದ್ಭುತ ಪಾಂಡಿತ್ಯ ಪಡೆದು ಸರ್ವರ ಪ್ರಶಂಸೆಗೆ ಕಾರಣರಾದರು.

ಶಿಷ್ಯಸಮೂಹದೊಂದಿಗೆ ಶಂಕರರು ಅಯೋಧ್ಯ, ಹರಿದ್ವಾರ, ಅಹೋಬಲ, ಇಂದ್ರಪ್ರಸ್ಥಪುರಿ, ಕರ್ನಾಟಕ, ಕಾಂಚೀ, ಕಾಮರೂಪ, ಕುರು, ಗಯಾ, ಗಣವರ, ಗೋಕರ್ಣ, ಚಿದಂಬರ, ಜಗನ್ನಾಥ ಮುಂತಾದ ಕಡೆಗಳಲ್ಲಿ ಸಂಚಾರ ಮಾಡಿ 'ಏಕಮಾತ್ರ ಸನಾತನ ವೈದಿಕ ಧರ್ಮವೇ ಸಾರ್ವಭೌಮಧರ್ಮ' ಎಂದು ಘಂಟಾಘೋಷವಾಗಿ ಸಾರಿದರು. ಅನೇಕರೊಡನೆ ಅವರು ಚರ್ಚಿಸಿ, ಶಾಸ್ತ್ರೀಯ ಆಧಾರಗಳನ್ನು ನೀಡಿ ತಮ್ಮ ಪ್ರತಿಭೆಯಿಂದ ಪ್ರತಿವಾದಿಗಳ ಬಾಯಿ ಮುಚ್ಚಿಸಿ ಜಯಭೇರಿ ಹೊಡೆದರು. ಹೋದ ಕಡೆಗಳಲ್ಲೆಲ್ಲಾ ಅವರು ವಿರೋಧ ಮತದವರನ್ನು ಖಂಡಿಸುತ್ತಾ ವೈದಿಕ ಮತದ ದೀಕ್ಷೆಯನ್ನು ಕೊಟ್ಟರು. ಭಾರತ ದಲ್ಲಿ ಹಲವಾರು ಬಾರಿ ಸಂಚರಿಸಿದ ಆಚಾರ್ಯರು ತಮ್ಮ ಪಾಂಡಿತ್ಯದ ಮತ್ತು ಸನಾತನಧರ್ಮದ ಧ್ವಜವನ್ನು ಹಾರಿಸಿದರು. ತಮ್ಮ ದಿಗ್ವಿಜಯ ಸ್ಥಿರಸ್ಥಾಯಿ ಯಾಗಿ ಉಳಿಯುವಂತೆ ಮಾಡಲು ಜನ್ಮಭೂಮಿ ಭಾರತದ ನಾಲ್ಕು ದಿಕ್ಕು ಗಳಲ್ಲಿರುವ ಪ್ರಮುಖ ಕ್ಷೇತ್ರಗಳಾದ ಪೂರಿಜಗನ್ನಾಥ, ದ್ವಾರಕ, ಶೃಂಗೇರಿ ಮತ್ತು ಬದರಿಯಲ್ಲಿ ಆಚಾರ್ಯರು ಮಠಗಳನ್ನು ಸ್ಥಾಪಿಸಿದರು. ಶೃಂಗೇರಿ ಮಠ ಅವರಿಂದ ಸ್ಥಾಪಿತವಾದ ಮಠಗಳಲ್ಲೆಲ್ಲಾ ಮೊದಲನೆಯದು. ಆಚಾ ರ್ಯರೇ ಪ್ರತಿಷ್ಠಾಪನೆಮಾಡಿದ 'ಶಾರದಾಂಬ' ದೇವಿಯ ಸುವರ್ಣ ಪ್ರತಿಮೆ ಈಗಲೂ ಮಠದಲ್ಲಿದೆ. ಈ ದೇವಿ ಅವರ ಉಪಾಸ್ಯದೇವತೆ. ಈಗಲೂ ಶೃಂಗೇರಿ ಪೀಠವು ವೈದಿಕ ಸಂಸ್ಕೃತಿಯ ಕೇಂದ್ರವಾಗಿ, ಧರ್ಮದ ಸಂಕೇತವಾಗಿ ಮತ್ತು ಅದ್ವೈತ ವೇದಾಂತದ ಉತ್ಕೃಷ್ಟ ಪೀಠವಾಗಿದೆ. ಸಂಸ್ಕೃತ, ವ್ಯಾಕರಣ, ವೇದಾಂತ ಮುಂತಾದ ವಿಷಯಗಳ ಅಧ್ಯಯನಕ್ಕೆ ಅವಕಾಶವಿರುವ ಪಾಠ ಶಾಲೆಗಳನ್ನು ಈ ಮಠ ನಡೆಸುತ್ತಿದೆ.

ಶಂಕರಾಚಾರ್ಯರ ಶಿಷ್ಯರಲ್ಲಿ ಪದ್ಮಪಾದಾಚಾರ್ಯ, ಸುರೇಶ್ವರಾಚಾರ್ಯ, ಹಸ್ತಾಮಲಕಾಚಾರ್ಯ ಮತ್ತು ತೋಟಕಾಚಾರ್ಯರೆಂಬ ನಾಲ್ವರು ಅಗ್ರ ಗಣ್ಯರು. ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥ ಗಳೂ, ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯಗಳೆಂಬ ಮೋಕ್ಷದ ನಾಲ್ಕು ರೂಪಗಳೂ, ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣ ಗಳೆಂಬ ನಾಲ್ಕು ವೇದಗಳೇ ಈ ನಾಲ್ವರು ಶಿಷ್ಯರ ಆಕೃತಿಯಲ್ಲಿ ಜಗದ್ಗುರು ಗಳನ್ನು ಆರಾಧಿಸುತ್ತಿವೆಯೇನೋ ಎನ್ನುವಂತೆ ಶಿಷ್ಯರು ಕಾಣಿಸುತ್ತಿದ್ದರು.

ಆಚಾರ್ಯರ ಪ್ರಧಾನ ಶಿಷ್ಯರೆಲ್ಲರೂ ಸಂನ್ಯಾಸಿಗಳಾಗಿದ್ದು ಅಲೌಕಿಕ ಶಕ್ತಿಯುಳ್ಳವರು ಮತ್ತು ದೇವಿಯ ಉಪಾಸಕರಾಗಿದ್ದರು. ಅವರು ಸ್ಥಾಪಿಸಿದ ನಾಲ್ಕು ಮಠಗಳಿಗೂ ಈ ನಾಲ್ವರು ಶಿಷ್ಯರನ್ನು ಶಂಕರರು ಪೀಠಾಧಿಪತಿಗಳನ್ನಾಗಿ ಮಾಡಿದರು.

ಆರ್ಯಧರ್ಮವನ್ನು ಈ ದೇಶದಲ್ಲಿ ಪುನಃ ಪ್ರತಿಷ್ಠಾಪನೆ ಮಾಡಿ, ಧನ ಧಾನ್ಯ ಸಂಪತ್ತಿನಿಂದ ಕೂಡಿ ಗೃಹಸ್ಥರಾಗಿದ್ದ ಕುಮಾರಿಲರನ್ನು ಶಂಕರಾಚಾರ್ಯರು ಭೇಟಿಯಾದದ್ದು ಭಾರತದ ಸಂಸ್ಕೃತಿಯ ಇತಿಹಾಸದಲ್ಲೇ ಬಂದು ವಿಶೇಷವಾದ ಘಟನೆ. ವೈದಿಕಧರ್ಮದ ಪುನರುತ್ಥಾನದ ಕಾರ್ಯ ನಡೆಸಿದ ಕುಮಾರಿಲರು ವೈದಿಕಧರ್ಮದ ಕಾರ್ಯಕ್ಕೆ ಶಂಕರರಿಗೆ ದಾರಿ ಸುಗಮ ಮಾಡಿದರು. ಕುಮಾರಿಲರ ಪಾಂಡಿತ್ಯದ ಲಾಭವನ್ನು ಪಡೆಯಲು, ಅವರ ಅನುಭವದ ಸಂಪೂರ್ಣ ಉಪಯೋಗ ಹೊಂದಲು ಶಂಕರರು ಅವರನ್ನು ಭೇಟಿಯಾಗಿ ಬ್ರಹ್ಮಸೂತ್ರಗಳ ಮೇಲೆ ತಾವು ರಚಿಸಿದ ಭಾಷ್ಯಗಳನ್ನೆಲ್ಲ ತೋರಿಸಿ ಅವರ ಮೆಚ್ಚುಗೆ ಸಂಪಾದಿಸಿ ಸಂತುಷ್ಟರಾದರು. ನಂತರ ಶಂಕರರು ಅದ್ವೈತ ಭಿನ್ನಮತಾವಲಂಬಿಗಳ ನಾಯಕರು ಮತ್ತು ಪ್ರಬಲ ಪಕ್ಷಪಾತಿಗಳಾದ ಮಂಡನಮಿಶ್ರರನ್ನು ಭೇಟಿಯಾದರು. ಅದ್ವೈತ ಪ್ರತಿಪಾದಕರಾದ ಶಂಕರಾಚಾರ್ಯರು ಮೀಮಾಂಸಾಶಾಸ್ತ್ರದ ಅನುಯಾಯಿಗಳೂ, ಹಾಗೂ ದ್ವೈತವಾದಿಗಳಾದ ಮಂಡನಮಿಶ್ರರನ್ನು ಶಾಸ್ತ್ರಾರ್ಥದಲ್ಲಿ ಗೆದ್ದರು. ಮಂಡನಮಿಶ್ರರ ಪತ್ನಿ ಭಾರತಿ ಶಾಸ್ತ್ರಾರ್ಥದಲ್ಲಿ ನಿಪುಣೆ, ಘನಪಂಡಿತೆ ಮತ್ತು ಶಾರದ ಎನ್ನುವ ಹೆಸರಿನಿಂದ ಪ್ರಸಿದ್ಧಳಾಗಿದ್ದಳು. ಗಂಡ ಪರಾಜಯ ಹೊಂದಿದ ಮೇಲೆ ಈಕೆ ಆಚಾರ್ಯರನ್ನು ಶಾಸ್ತ್ರಾರ್ಥಕ್ಕೆ ಆಹ್ವಾನಿಸಿದಳು. ಅವಳು ಅರ್ಥಶಾಸ್ತ್ರ, ಧರ್ಮಶಾಸ್ತ್ರ, ಮೋಕ್ಷ ಶಾಸ್ತ್ರದ ಬಗ್ಗೆ ಕೇಳಿದ ಪ್ರಶ್ನೆಗಳಿಗೆಲ್ಲಾ ಆಚಾರ್ಯರು ಸಮಂಜಸವಾದ ಉತ್ತರಗಳನ್ನು ಕೊಟ್ಟರು. ಕಾಮಶಾಸ್ತ್ರದ ಬಗ್ಗೆ ಸಂನ್ಯಾಸಿ ಶಂಕರರನ್ನು ಆಕೆ ಪ್ರಶ್ನಿಸಿದಾಗ ಅದಕ್ಕೂ ಅವರು ಹೆದರದೆ ಈ ಶಾಸ್ತ್ರದಲ್ಲೂ ಪಾರಂಗತರಾಗಿ ಬಂದು ಪ್ರಶ್ನೆಗಳಿಗೆಲ್ಲಾ ಉತ್ತರಕೊಟ್ಟು ಆಕೆಯನ್ನೇ ನಿರುತ್ತರಳನ್ನಾಗಿ ಮಾಡಿದರು.

ಕೊಟ್ಟ ಮಾತಿನಂತೆ ನಡೆಯಲು ಆಚಾರ್ಯರು ತಾಯಿಯ ಮೃತ್ಯು ಸಮಯಕ್ಕೆ ಕಾಲಟಿಗೆ ಬಂದರು. ಅವರು ಈಶ್ವರನ ಉಪದೇಶವನ್ನು ತಾಯಿ

ಗಿತ್ತು, ಶರೀರೂತ್ಯಾಗ ಪಡಿದ ಆಕೆಯ ದಹನ ಸಂಸ್ಕಾರವನ್ನು ಸ್ವಹಸ್ತದಿಂದಲೇ ಮಾಡಲು ತೀರ್ಮಾನಿಸಿದರು. ಹಟವಾದಿಗಳೂ, ಅಸೂಯಾಪರರೂ ಆದ ಅವರ ದಾಯಾದಿಗಳು ಸಂನ್ಯಾಸಿಯಾದ ಶಂಕರರು ದಹನ ಸಂಸ್ಕಾರವನ್ನು ಮಾಡುವುದು ಶಾಸ್ತ್ರವಿರುದ್ಧವೆಂದು ಕೋಪದಿಂದ ಕೂಗಾಡಿದರು. ದಹನ ಸಂಸ್ಕಾರದಲ್ಲಿ ಅವರು ಆಚಾರ್ಯರೊಂದಿಗೆ ಸ್ವಲ್ಪವೂ ಸಹಕರಿಸದೆ ಬೆಂಕಿಯನ್ನು ಕೊಡುವುದಕ್ಕೂ ನಿರಾಕರಿಸಿದರು. ಆದರೂ ಧೈರ್ಯಗುಂದದೆ ಶಂಕರರು ಚರಿತ್ರೆಯಲ್ಲೇ ಚಿರಸ್ಮರಣೀಯವಾಗುವಂತೆ ಮನೆಯ ಮುಂದು ಗಡೆಯಲ್ಲೇ ತಾಯಿಯ ಶವದಹನ ಮಾಡಿ, ಅನುಪಮ ಮಾತೃಭಕ್ತಿಯನ್ನು ಹೊಂದಿದ್ದ ಅವರು ತಾಯಿಯ ಕೊನೆಯಾಸೆಯನ್ನು ನಡೆಸಿಕೊಡಲು, ಕೊಟ್ಟ ಮಾತಿನಂತೆ ನಡೆಯಲು ಸಂಬಂಧಿಕರ ತಿರಸ್ಕಾರ, ಅವಹೇಳನವನ್ನು ಅನುಭವಿಸಿದರು. ತಾಯಿಯ ಸೇವೆ ವಾತ್ಸಲ್ಯಕ್ಕಿಂತ ಪ್ರಪಂಚದಲ್ಲಿ ಮಿಗಿಲಾದದ್ದು ಮತ್ತೊಂದಿಲ್ಲ ಎನ್ನುವುದನ್ನು ಅವರು ಜಗತ್ತಿಗೇ ತೋರಿಸಿಕೊಟ್ಟರು.

ಅದ್ವೈತ ತತ್ತ್ವವನ್ನು ಖಂಡಿಸಲು ಪ್ರಯತ್ನಿಸಿದ ಅನೇಕ ಪಂಡಿತರು ಆಚಾರ್ಯರಿಂದ ಪರಾಜಯಹೊಂದಿದರು. ಶಂಕರರು ಅವೈದಿಕ ಮತಗಳನ್ನು ಖಂಡಿಸಿ, ಅವುಗಳ ನಿರ್ಜೀವತ್ವವನ್ನು ಜನತೆಗೆ ತೋರಿಸಿಕೊಟ್ಟು ಅದ್ವೈತ ಮತಸ್ಥಾಪನೆಗಾಗಿ ತಮ್ಮ ಜೀವಿತವನ್ನೇ ಮುಡಿಪಾಗಿಟ್ಟರು. ಬೌದ್ಧಮತದಲ್ಲಿ ಉತ್ತಮವಾಗಿರುವುದನ್ನೆಲ್ಲ ತಮ್ಮ ತತ್ತ್ವಗಳಲ್ಲಿ ಅವರು ಅಳವಡಿಸಿಕೊಂಡು, ಕೆಲಸಕ್ಕೆ ಬಾರದ ನಿಸ್ಸತ್ತ್ವಸಿದ್ಧಾಂತಗಳನ್ನು ಅನುಸರಿಸುತ್ತಿದ್ದವರೊಡನೆ ವಾದಮಾಡಿ ಸೋಲಿಸಿದರು. ದುರ್ಗಮವಾದ ಮಾರ್ಗದಲ್ಲಿ ಹೆಜ್ಜೆಯಿಡುತ್ತಿದ್ದ ಜನರನ್ನು ಸಹಾನುಭೂತಿಯಿಂದ ನೋಡಿ ಅವರಿಗೆ ಮಾರ್ಗದರ್ಶನ ನೀಡಿದರು. ಶಿಷ್ಯಮಂಡಲಿಯೊಂದಿಗೆ ಅವರು ಅನೇಕ ಧರ್ಮಕ್ಷೇತ್ರಗಳನ್ನು ಸಂದರ್ಶಿಸಿದರು. ಅವರು ಮಾಡಿದ ತೀರ್ಥಯಾತ್ರೆಯು 'ಶಂಕರರ ದಿಗ್ವಿಜಯ ಯಾತ್ರೆ' ಎಂದು ಪ್ರಸಿದ್ಧಿಪಡೆದಿದೆ. ಇನ್ನೂರು ಇಪ್ಪತ್ತು ವಿಮತಗಳನ್ನು ಖಂಡಿಸಿದ ಶಂಕರರು ದುರಾಚಾರಗಳನ್ನು ನಿರ್ಮೂಲಮಾಡಿ ಷಣ್ಮತಗಳಲ್ಲಿದ್ದ ಅಶುದ್ಧಿಯನ್ನು ತೊಡೆದು 'ಷಣ್ಮತಸ್ಥಾಪನಾಚಾರ್ಯ'ರೆಂಬ ಬಿರುದನ್ನು ಪಡೆದುಕೊಂಡರು. ಜ್ಞಾನ, ಭಕ್ತಿ, ಕರ್ಮಮಾರ್ಗಗಳಿಗೆ ಆಧಾರವಾಗಿರುವ ಉಪನಿಷತ್, ಗೀತ, ಬ್ರಹ್ಮಸೂತ್ರಗಳಿಗೂ ಅವರು ಸಮನ್ವಯವುಂಟುಮಾಡಿ 'ಸಮನ್ವಯಾ

ಚಾರ್ಯ'ರೆನಿಸಿಕೊಂಡರು.

ಆಚಾರ್ಯ ಶಂಕರರು ಇನ್ನೂರಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ಗ್ರಂಥಗಳನ್ನು ರಚಿಸಿದ್ದಾರೆ. ಅವರಿಂದ ರಚಿತವಾದ ಗ್ರಂಥಗಳನ್ನು ೧. ಭಾಷ್ಯಗಳು ೨. ಸ್ತೋತ್ರಗಳು ಮತ್ತು ೩. ಪ್ರಕರಣ ಗ್ರಂಥಗಳೆಂದು ಮೂರು ವಿಧವಾಗಿ ವಿಂಗಡಿಸಬಹುದು. ಅವರು ರಚಿಸಿದ ಭಾಷ್ಯಗಳು ಪ್ರೌಢವಾಗಿ, ಪಾಂಡಿತ್ಯ ಪೂರ್ಣವಾಗಿವೆ. ಭಾಷ್ಯಗ್ರಂಥಗಳನ್ನು ಪ್ರಸ್ಥಾನತ್ರಯೀ ಭಾಷ್ಯ, ಇತರ ಗ್ರಂಥಗಳ ಭಾಷ್ಯ ಎಂದು ಎರಡು ಭಾಗವಾಗಿ ವಿಂಗಡಿಸಬಹುದು. ಶಿವ, ವಿಷ್ಣು, ಗಣೇಶ, ಶಕ್ತಿ, ಇತ್ಯಾದಿ ದೇವತೆಗಳನ್ನು ಕುರಿತು ಸುಂದರವಾದ ಸ್ತೋತ್ರಗಳನ್ನು ಅವರು ರಚಿಸಿದ್ದಾರೆ. ವೇದಾಂತ ತತ್ತ್ವದ ಬಗ್ಗೆ ಸರಳ ಸುಂದರವಾದ ಭಾಷೆಯಲ್ಲಿ ಅವರು ಬರೆದಿರುವ ಚಿಕ್ಕ ಚಿಕ್ಕ ಗ್ರಂಥಗಳೇ 'ಪ್ರಕರಣ ಗ್ರಂಥ'ಗಳೆನಿಸಿಕೊಂಡಿವೆ. ಜನಸಾಮಾನ್ಯರಿಗೂ ಅರ್ಥವಾಗುವಂತೆ ಅದ್ವೈತದ ಮೂಲ ಸಿದ್ಧಾಂತಗಳ ಸ್ಪಷ್ಟ ನಿರೂಪಣೆ ಈ ಗ್ರಂಥಗಳಲ್ಲಿದೆ. ಪ್ರಸಿದ್ಧವಾಗಿರುವ ಪ್ರಕರಣ ಗ್ರಂಥಗಳಲ್ಲಿ ಅದ್ವೈತ ಪ್ರತಿಪಾದನೆ, ಅಪರೋಕ್ಷಾನುಭವದ ಸಾಧನೆ, ಆತ್ಮಸ್ವರೂಪ, ವೇದಾಂತಾಚರಣೆ, ಪರಮಜ್ಯೋತಿಯ ವರ್ಣನೆ, ವೇದಾಂತ ತತ್ತ್ವಗಳ ಸಂಕ್ಷಿಪ್ತ ವಿವರಣೆ, ಬ್ರಹ್ಮಜ್ಞಾನ, ಶುದ್ಧ ಆತ್ಮ, ಪರಮ ತತ್ತ್ವದ ವಿವರಣೆ, ತತ್ತ್ವ ಮಸಿ ಮುಂತಾದ ವಿಷಯಗಳನ್ನು ಕುರಿತು ಶಂಕರಾಚಾರ್ಯರು ಶ್ಲೋಕಗಳನ್ನು ಬರೆದಿದ್ದಾರೆ.

ಶಂಕರಾಚಾರ್ಯರು ಕೇವಲ ಧರ್ಮೋಪದೇಶಕರಲ್ಲದೆ ವಿಚಾರವಂತ ಉತ್ತಮ ಲೇಖಕರೂ ಆಗಿದ್ದರು. ಸಂನ್ಯಾಸಿಗಳಾಗಿದ್ದರೂ ಕವಿಸಹಜವಾದ ರಸಿಕತೆ ಅವರಲ್ಲಿತ್ತು ಎನ್ನುವುದಕ್ಕೆ ಅವರು ರಚಿಸಿದ ಸ್ತೋತ್ರಗಳೇ ಸಾಕ್ಷಿ. ಅವರಿಂದ ವಿರಚಿತವಾದ ಗ್ರಂಥಗಳಲ್ಲಿ 'ಸೌಂದರ್ಯಲಹರಿ', 'ವಿವೇಕ ಚೂಡಾಮಣಿ', 'ಉಪದೇಶ ಸಾಹಸ್ರಿ', 'ದಕ್ಷಿಣಾಮೂರ್ತಿ ಸ್ತೋತ್ರ' ಮುಂತಾದವು ಪ್ರಸಿದ್ಧಿ ಪಡೆದಿವೆ. ಪದಸಂಯೋಜನೆ, ಅರ್ಥಚಮತ್ಕಾರ, ಕವಿತಾಶಕ್ತಿ, ಕಲ್ಪನಾಸಾಮರ್ಥ್ಯ, ಲೋಕಾನುಭವ, ನೀತಿ, ಮತ್ತು ಕವಿತಾಪ್ರತಿಭೆ ಮುಂತಾದ ಲಕ್ಷಣಗಳೆಲ್ಲ ಈ ಸ್ತೋತ್ರಗಳಲ್ಲಿ ಸ್ಪಷ್ಟವಾಗಿವೆ. ರಸಭಾವದಿಂದ, ಅದ್ಭುತವಾದ ಮೋಹಕತೆಯಿಂದ ಕೂಡಿದ ಅವರ ಕವಿತೆಗಳನ್ನು ಓದಿದರೆ ಮನಸ್ಸಿಗೆ ಸಂತೋಷವುಂಟಾಗುವುದು. ಭೌತಿಕ ಜಗತ್ತಿನಿಂದ ಓದು

ಗರನ್ನು ಅವು ಕೊಂಡೊಯ್ದು ಅಲೌಕಿಕ ಜಗತ್ತಿನಲ್ಲಿ ಬಿಟ್ಟು ಆತ್ಮಾನಂದ ನೀಡುವುವು. ಅವರ ಶಿಷ್ಯರೂ ಅನೇಕ ಪ್ರಸಿದ್ಧ ವೇದಾಂತ ಗ್ರಂಥಗಳನ್ನು ಬರೆದಿದ್ದಾರೆ. ಸರಳವಾದ ಭಾಷೆಯಲ್ಲಿ ಆಚಾರ್ಯರು ಬ್ರಹ್ಮಸೂತ್ರ, ಗೀತೆಗಳ ಮೇಲೆ ಭಾಷ್ಯಗಳನ್ನು ಬರೆದಿದ್ದಾರೆ. ಅದ್ವೈತ ತತ್ತ್ವದ ಜೊತೆಗೆ ಸಂನ್ಯಾಸಿ ನಿಷ್ಠೆಯ ವಿದ್ಯಮಾನವನ್ನೂ ಕುರಿತು ಅವರು ಪ್ರಸ್ತಾಪಿಸಿದ್ದಾರೆ.

ಮಹಾಭೈರವನ ಉಪಾಸಕರಾಗಿದ್ದ ಕಾಪಾಲಿಕರು ಆಚಾರ್ಯರ ಕಾಲದಲ್ಲಿ ತುಂಬಾ ಪ್ರಭಾವಿತರಾಗಿದ್ದರು. ಉಗ್ರರೂಪದಲ್ಲಿ ಅವರು ಪೂಜಿಸುತ್ತಾ, ಮದ್ಯ, ಮಾಂಸ ಸೇವಿಸುತ್ತಿದ್ದರು. ಅಗ್ನಿಗೆ ಮನುಷ್ಯರ ಮಾಂಸವನ್ನು ಆಹುತಿಯಾಗಿ ಕೊಡುತ್ತಿದ್ದರು. ಶಂಕರರ ಉಪದೇಶವನ್ನು ಕೇಳಿದಮೇಲೆ ಕಾಪಾಲಿಕರೆಲ್ಲ ತಮ್ಮ ಮತವನ್ನು ತ್ಯಜಿಸಿ ವೈದಿಕಮಾರ್ಗವನ್ನು ಹಿಡಿದರು. ವಿದ್ಯಾವೈಭವಕ್ಕೆ ಹೆಸರುವಾಸಿಯಾಗಿದ್ದ, ಸಾಹಿತ್ಯ, ತಂತ್ರ, ವ್ಯಾಕರಣಕ್ಕೆ ಕೇಂದ್ರವಾಗಿದ್ದ ಕಾಶ್ಮೀರದ ಶಾರದಾದೇವಿಯ ಮಂದಿರ ಈಗಲೂ ಪ್ರಸಿದ್ಧಿ ಪಡೆದಿದೆ. ಈ ಮಂದಿರದಲ್ಲಿ ಹಿಂದೆ ಒಂದು ಸರ್ವಜ್ಞ ಪೀಠವಿತ್ತು. ಸಮಸ್ತ ವಿದ್ಯಾ, ಜ್ಞಾನ, ಶಾಸ್ತ್ರಗಳಲ್ಲಿ ಪಾಂಡಿತ್ಯ ಗಳಿಸಿದವನಿಗೆ ಮಾತ್ರ ಆ ಪೀಠ ಹತ್ತುವ ಅರ್ಹತೆಯಿತ್ತು. ಸರ್ವಜ್ಞರ್‍ಯಾರೂ ಇಲ್ಲದಿದ್ದ ಕಾರಣ ಆ ಮಂದಿರದ ನಾಲ್ಕು ಬಾಗಿಲುಗಳನ್ನೂ ಸದಾ ಕಾಲ ಮುಚ್ಚಿರುತ್ತಿದ್ದರು. ಈ ವಿಷಯ ಕೇಳಿದ ಶಂಕರರು ಶಿಷ್ಯರ ಸಂಗಡ ಕಾಶ್ಮೀರಕ್ಕೆ ಪ್ರಯಾಣಮಾಡಿದರು. ಪಂಡಿತ ಮಂಡಲಿ ಶಂಕರರ ಸರ್ವಜ್ಞತ್ವದ ಪರೀಕ್ಷೆ ನಡೆಸಿತು. ಪಂಡಿತರು ಕೇಳಿದ ಪ್ರಶ್ನೆಗಳಿಗೆಲ್ಲಾ ಅವರು ಉತ್ತರಕೊಟ್ಟು ಎಲ್ಲರನ್ನೂ ಆಶ್ಚರ್ಯಗೊಳಿಸಿದರು. ಶಾಸ್ತ್ರಗಳ ಬಗ್ಗೆ ಕೇಳಿದ ಕಠಿಣ ಪ್ರಶ್ನೆಗಳಿಗೆಲ್ಲ ಆಚಾರ್ಯರು ಉತ್ತರ ಹೇಳಿ ಪರೀಕ್ಷೆಯಲ್ಲಿ ಜಯಭೇರಿ ಹೊಡೆದು. ಮಂದಿರವನ್ನು ಪ್ರವೇಶಿಸಿ ಸರ್ವಜ್ಞ ಪೀಠವನ್ನು ಹತ್ತಿದರು.

ಸಾಧನ ಸಾಮ್ರಾಜ್ಯದ ಸಾಮ್ರಾಟರು, ಭಗವತೀ ತ್ರಿಪುರಸುಂದರಿಯ ಉಪಾಸಕರೂ ಆಗಿದ್ದ ಶಂಕರಾಚಾರ್ಯರು ಮಂತ್ರಶಾಸ್ತ್ರದಲ್ಲಿ ದೊಡ್ಡ ವಿದ್ವಾಂಸರಾಗಿದ್ದರು. ಸಾತ್ತ್ವಿಕ ಮಾರ್ಗದ ಉಪಾಸನೆಯ ನಿಷ್ಠಭಕ್ತರಾಗಿ ಅವರು ಜಗತ್ತಿನ ಸತ್ತ್ವವನ್ನು ಪ್ರತಿಪಾದಿಸುತ್ತಿದ್ದರು. ಅವರು ಹಿಮಾಲಯ ಪರ್ವತದ ಎದೆಯ ಮೇಲೆ ಜ್ಯೋತಿರ್ಮಠವನ್ನು ಸ್ಥಾಪಿಸಿದರು. ಜಗತ್ತಿನ

ಇತಿಹಾಸದಲ್ಲೇ ಮೊಟ್ಟಮೊದಲು ಸರ್ವಜ್ಞರೆನಿಸಿ ಜ್ಞಾನದಾನಮಾಡಿದ ಶಂಕರ ಜಗದ್ಗುರುಗಳು ಕಾಶ್ಮೀರದಲ್ಲಿ ವಾಸಿಸುತ್ತಿದ್ದ ಬೆಟ್ಟವು ಇಂದಿಗೂ 'ಜಗದ್ಗುರು ಶಂಕರಾಚಾರ್ಯರ ಬೆಟ್ಟ'ವೆಂದು ಕೀರ್ತಿ ಪಡೆದಿದೆ. ಆ ಬೆಟ್ಟದ ಮೇಲೆ ನಿಂತು ನೋಡಿದರೆ ಕಾಶ್ಮೀರದ ಪ್ರಕೃತಿಸೌಂದರ್ಯ ಕಣ್ತುಂಬ ನೋಡಿ ಆನಂದಿಸ ಬಹುದು.

ಪುಣ್ಯಭೂಮಿ, ಕರ್ಮಭೂಮಿ ಭಾರತದೇಶದ ಸಂಸ್ಕೃತಿ ಹಾಗೂ ಆಧ್ಯಾತ್ಮಿಕ ಐಕ್ಯತೆಯನ್ನು ರಕ್ಷಿಸಿ ಲೋಕ ಕಲ್ಯಾಣದ ದೃಷ್ಟಿಯಿಂದ ಹೆಚ್ಚಿನ ಕಾರ್ಯಗಳನ್ನು ಶ್ರದ್ಧೆಯಿಂದ ನಿರ್ವಹಿಸಬೇಕೆಂದು ಶಂಕರಾಚಾರ್ಯರು ಶಿಷ್ಯ ರಿಗೆ ಉಪದೇಶಿಸಿ ಕೈಲಾಸಪರ್ವತದ ಕಡೆಗೆ ಪ್ರಯಾಣಮಾಡಿದರು. ಅವರು ತಮ್ಮ ಮೂವತ್ತೆರಡನೆಯ ವಯಸ್ಸಿನಲ್ಲಿ ಕೀರ್ತಿಶೇಷರಾದರು.

ಅತಿ ಸರಳವೂ, ಪ್ರಾಚೀನವೂ, ಸಜೀವವೂ, ಸತ್ತ್ವಶಾಲಿಯೂ, ಸರ್ವ ಶ್ರೇಷ್ಠವೂ, ವಿಶ್ವಧರ್ಮವಾಗುವ ಅರ್ಹತೆ ಪಡೆದುಕೊಂಡಿರುವ, ಮತ್ತು ಜಗತ್ತಿನ ಅವನತಿಗೆ ಏಕಮಾತ್ರ ಚಿಕಿತ್ಸೆಯಾದ ಅದ್ವೈತ ಸಿದ್ಧಾಂತವನ್ನು ಜಗದ್ಗುರು ಶಂಕರಾಚಾರ್ಯರು ಮಂಡಿಸಿದರು. ಈ ಸಿದ್ಧಾಂತ ಅತ್ಯಂತ ಪ್ರಾಚೀನವಾದದ್ದು. ಉಪನಿಷತ್ತು, ಮಹಾಭಾರತ, ಗೀತೆ ಮತ್ತು ವೇದಾಂತ ಸೂತ್ರಕಾರರಲ್ಲಿ ಅದ್ವೈತದ ಪರಿಚಯು ನಮಗೆ ಕಂಡುಬರುತ್ತದೆ. ಈ ತತ್ತ್ವ ವನ್ನು ಪ್ರತಿಪಾದನೆಮಾಡಲು ಅವರು ವಿದ್ವತ್ಪೂರ್ಣವಾದ ಭಾಷ್ಯಗಳನ್ನು ರಚಿಸಿದರು. ಅದ್ವೈತಸಿದ್ಧಾಂತದ ಮೂಲಮಂತ್ರ "ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ" || ಶ್ಲೋಕರೂಪದಲ್ಲಿದೆ. ೧. ಬ್ರಹ್ಮವೊಂದೇ ಸತ್ಯ, ೨. ಜಗತ್ತು ಮಿಥ್ಯಾರೂಪವಾದದ್ದು, ೩. ಜೀವನು ಬ್ರಹ್ಮನೇ, ೪. ಜೀವ ಬ್ರಹ್ಮನಿಂದ ಬೇರೆ ಅಲ್ಲ. ಇದು ಈ ಶ್ಲೋಕದ ಸಾರಾಂಶ. ಈ ನಾಲ್ಕು ಸಿದ್ಧಾಂತಗಳೇ ಅದ್ವೈತ ವೇದಾಂತದ ಆಧಾರ.

"ಅದ್ವೈತ ಪದದ ಅರ್ಥ ಒಂದೇ, ಎರಡಲ್ಲ. ಆ ಒಂದೇ ಒಂದು ಇರತಕ್ಕ ಪರಮ ಸತ್ಯವಾದ ವಸ್ತುವೇ 'ಬ್ರಹ್ಮ' ಎಂದು ಶಂಕರರು ಸ್ಪಷ್ಟಪಡಿಸಿದರು. ನಿರ್ಗುಣ, ನಿರಾಕಾರ, ನಾಮರೂಪಗಳಿಲ್ಲದ, ಅಗ್ರಾಹ್ಯವೂ ಅಲಕ್ಷಣವೂ, ಅಚಿಂತ್ಯವೂ, ಅಖಂಡ ಜ್ಞಾನಸ್ವರೂಪವೂ, ಅನಿರ್ವಚನೀಯವೂ, ಅಪ್ರ ಮೇಯವೂ, ಪ್ರಮಾಣಾತೀತವೂ, ನಿರುಪಾಧಿಕವೂ ಆದ ಬ್ರಹ್ಮವೊಂದೇ

ಸತ್ಯ. ಈ ಕಾರಣದಿಂದಲೇ ನಿಶ್ಚಿತವಾದ ಸ್ವರೂಪ ಹೊಂದಿದ ಬ್ರಹ್ಮನನ್ನು "ಸತ್ಯಂ, ಜ್ಞಾನಂ, ಅನಂತಂ ಬ್ರಹ್ಮ" ಎಂದು ಉಪನಿಷತ್ತು ಹೇಳುವುದು. ಬ್ರಹ್ಮ ಸೃಷ್ಟಿಕರ್ತ ಮಾತ್ರವಲ್ಲ, ಸೃಷ್ಟಿಯಾದವನೂ ಅವನೇ. ಬ್ರಹ್ಮನೇ ಜಗತ್ತು. ಈ ಜಗತ್ತಿನಲ್ಲಿ ಸತ್, ಚಿತ್, ಆನಂದ ಇರುವುದೆಲ್ಲ ಬ್ರಹ್ಮನಲ್ಲೇ, ಅವನನ್ನು ಸೇರುವುದೇ ಮಾನವನ ಗುರಿಯಾಗಬೇಕು. ಅದ್ವೈತ ರೀತಿಯಲ್ಲಿ ಆತ್ಮಕ್ಕೆ ಹುಟ್ಟಿಲ್ಲ, ಸಾವಿಲ್ಲ, ಅದು ಹೋಗುವುದಿಲ್ಲ, ಬರುವುದೂ ಇಲ್ಲ. ಆತ್ಮ ನನ್ನಲ್ಲಿ, ನಿನ್ನಲ್ಲಿ ಎಲ್ಲರಲ್ಲಿರುವುದು. ನಾನು, ನೀನು ಎಂಬ ದ್ವೈತ ಭಾವನೆ ಅಸತ್ಯ. ನಮ್ಮ ಆತ್ಮದ ಸಾರ, ಅಹಂಕಾರದ ಮೂಲ ಆ ಬ್ರಹ್ಮನೇ. ಒಂದು ಬೆಂಕಿ ಪ್ರಪಂಚದಲ್ಲಿ ಹಲವು ರೂಪದಲ್ಲಿ ವ್ಯಕ್ತವಾಗುವಂತೆ ಒಂದೇ ಆತ್ಮ ಹಲವು ಜೀವಿಗಳಲ್ಲಿ ವ್ಯಕ್ತವಾಗಿದೆ. ಪರಮಾತ್ಮ, ಜೀವಾತ್ಮ ಬೇರೆಯೆಂದು ಭಾವಿಸುವುದು ತಪ್ಪು. ಪರಬ್ರಹ್ಮ, ಆತ್ಮ ವಿಭಿನ್ನ. ಜೀವನು ಬ್ರಹ್ಮನಲ್ಲದೆ ಬೇರೆಯಲ್ಲ. ನಾನು, ನೀನು ಎನ್ನುವುದು ಇಲ್ಲ. ಎಲ್ಲ ಅಖಂಡ ಏಕ. ಆತ್ಮ ಪರಮಾತ್ಮಗಳ ಏಕತೆಯನ್ನು ಅನುಭವಿಸಿದರೆ ಸಾಕ್ಷಾತ್ಕಾರವಾಗುವುದು, ಮೋಕ್ಷ ಲಭಿಸುವುದು. ಜೀವನು ಈಶ್ವರನೊಂದಿಗೆ ಐಕ್ಯವಾಗುವುದೇ ಅದ್ವೈತದ ಭಾವ. ಜೀವನು ಬಾಹ್ಯ ವಸ್ತುಗಳಿಂದ ಮುಕ್ತನಾಗಿ, ಜನ್ಮ ಮರಣಗಳಿಂದ ಬಿಡುಗಡೆ ಹೊಂದಿ, ಬೇರೆ ವಸ್ತುವಾಗಿರದೆ ಸಾಕ್ಷಾತ್ ಈಶ್ವರನೇ ಆಗಿರುತ್ತಾನೆ ಎಂದು ಶಂಕರರು ಅದ್ವೈತ ಸಿದ್ಧಾಂತವನ್ನು ವಿಶ್ಲೇಷಿಸಿದರು.

ಪರಬ್ರಹ್ಮ ಸತ್ಯವೆಂದು ಸಿದ್ಧವಾದಮೇಲೆ ನಾನಾತ್ವದಿಂದ ಕೂಡಿದ, ಅಂದರೆ ದ್ವೈತಮಯವಾದ ಈ ಜಗತ್ತು ಮಿಥ್ಯೆ. ಈ ಜಗತ್ತು ಎಂದರೆ ಇಂದ್ರಿಯಗಳ ಅನುಭವಕ್ಕೆ ಸಿಕ್ಕುವುದೆಲ್ಲ ಮಿಥ್ಯೆ. ಮಿಥ್ಯೆ ಎಂದರೆ ಶೂನ್ಯವೆಂಬ ಅರ್ಥವಲ್ಲ, ಪರಬ್ರಹ್ಮನಂತೆ ಪರಮ ಸತ್ಯವೂ ಅಲ್ಲ. ಈ ಪ್ರಪಂಚವು ವ್ಯಾವಹಾರಿಕವಾಗಿ ಸತ್ಯವಾಗಿದೆ, ಪಾರಮಾರ್ಥಿಕವಾಗಿ ಮಿಥ್ಯೆಯಾಗಿದೆ. ಕತ್ತಲಿನಲ್ಲಿ ಹೋಗುತ್ತಿರುವ ವ್ಯಕ್ತಿ ದಾರಿಯಲ್ಲಿ ಬಿದ್ದಿರುವ ಹಗ್ಗವೊಂದನ್ನು ಹಾವು ಎಂದು ಭ್ರಮಿಸಿ ಹೆದರುವಂತೆ ಅಜ್ಞಾನಿ ನಿತ್ಯವೂ, ಸತ್ಯವೂ, ಶುದ್ಧವೂ ಆದ ಬ್ರಹ್ಮನನ್ನು ಜಗತ್ತೆಂದು ಭಾವಿಸಿ ಕಷ್ಟ, ಸುಖ, ಹಗಲು, ರಾತ್ರಿ ಮುಂತಾದ ದ್ವಂದ್ವ ಭಾವನೆಗಳಲ್ಲಿ ಸಿಲುಕಿ ತೊಳಲುತ್ತಾನೆ. ಹಾವು ಎಂಬ ಭಯ ಬೆಳಕಿನ ಸಹಾಯದಿಂದ ಹಗ್ಗ ಎಂಬ ಅರಿವಿನಿಂದ ಹೇಗೆ ನಿರ್ಮೂಲ

ವಾಗುವುದೋ ಹಾಗೆ ಈ ಜಗತ್ತು ಎಂಬ ಭಯವನ್ನು ಜೀವಿಯು ವಿವೇಕವೆಂಬ ಬೆಳಕಿನಿಂದ ನಾಶಮಾಡಿ ಜಗತ್ತು ಬ್ರಹ್ಮನೇ ಎಂದು ತಿಳಿಯುತ್ತಾನೆ. ಹಗ್ಗದಲ್ಲಿ ಹಾವನ್ನು ಕಂಡಂತೆ ನಿರ್ಗುಣ ಪರಬ್ರಹ್ಮನಲ್ಲಿ ಈ ಜಗತ್ತು ಕಾಣುತ್ತಾನೆ. ಹೇಗೆ ಹಗ್ಗ ಹಾವಲ್ಲವೋ ಹಾಗೆ ಬ್ರಹ್ಮನೇ ಈ ಪ್ರಪಂಚವಾಗಿಲ್ಲ. ಹಾವಿನ ಅನುಭವಕ್ಕೆ ಹೇಗೆ ಹಗ್ಗ ಕಾರಣವೋ ಅಂತೆಯೇ ಈ ಪ್ರಪಂಚಕ್ಕೆ ಪರಬ್ರಹ್ಮನೇ ಮೂಲ.

ಜೀವನೂ, ಬ್ರಹ್ಮನೂ ಬೇರೆಯಲ್ಲ, ಹಾಗೆ ಕಲ್ಪಿಸುವುದು ಅಜ್ಞಾನಿಗಳು, ಅವಿವೇಕಿಗಳು. ಸೂರ್ಯನ ನೆರಳು ನೀರಿನಲ್ಲಿ ಕಂಡ ಮಾತ್ರಕ್ಕೆ ಈ ಜಗತ್ತಿನಲ್ಲಿ ಇಬ್ಬರು ಸೂರ್ಯರಿದ್ದಾರೆ ಎಂದು ಹೇಳುವುದು ತಪ್ಪು. ಇಂತಹ ಅರಿವಿನಿಂದ ಮುಕ್ತಿ ಪ್ರಾಪ್ತಿಯಾಗುವುದಿಲ್ಲ. ಈ ಅಜ್ಞಾನವು ನಾಶವಾದರೆ ಆತ್ಮ ಅಭಿನ್ನನಾಗಿ ವಿರಾಜಿಸುವನು. ಜೀವ, ಬ್ರಹ್ಮ ಒಂದೇ ಎನ್ನುವ ಜ್ಞಾನದಿಂದ ಪರಬ್ರಹ್ಮ ಸ್ವರೂಪದ ದರ್ಶನವಾಗುವುದು. ಈ ಪರಬ್ರಹ್ಮ ವಸ್ತುವಿಗೆ ದೇಹವಿಲ್ಲ. ಅನಂತಾನಂತ ರೂಪಗಳಿಂದ ವಿರಾಜಿಸುತ್ತಿರುವ ಒಂದೇ ಆನಂದಸ್ವರೂಪ ಪರಮಾತ್ಮ. ಈ ಪರಮವಸ್ತುವಿಗೆ ಆದಿಯಿಲ್ಲ, ಮಧ್ಯವಿಲ್ಲ, ಅಂತ್ಯವಿಲ್ಲ, ಕಾಲಮತ ಭೇದಗಳಿಲ್ಲ, ಲಿಂಗಭೇದಗಳಿಲ್ಲ, ಆಕಾರಭೇದವಿಲ್ಲ, ಪುಣ್ಯಪಾಪಗಳ ಲೇಪವಿಲ್ಲ. ಸರ್ವೋತ್ಕೃಷ್ಟವಾದ ಪರಬ್ರಹ್ಮವಸ್ತು ಶಾಶ್ವತವಾದದ್ದು. ಅದನ್ನು ಸುಖವಾಗಲಿ, ದುಃಖವಾಗಲೀ ಸ್ಪರ್ಶಿಸಲಾರದು. ಸಕಲ ವಿಧವಾದ ಸಂಸಾರ ಪಾಶಬಂಧನಗಳಿಂದ ಮುಕ್ತಿ ಹೊಂದಿ ಬ್ರಹ್ಮನನ್ನು ತಿಳಿಯುವ ವಿಜ್ಞಾನದಿಂದ ಮೋಕ್ಷ ಸಾಧ್ಯ.

ದೇಹಾಭಿಮಾನದ ಆಸೆಯನ್ನು ತೊರೆದು ಬ್ರಹ್ಮನಲ್ಲಿ ಐಕ್ಯ ಹೊಂದುವುದೇ 'ಅಹಂ ಬ್ರಹ್ಮಾಸ್ಮಿ'. ಪರಬ್ರಹ್ಮವಸ್ತುವೇ ನಾನಾಗಿರುವೆ ಎಂದು ತಿಳಿದ ಅದ್ವೈತ ಸಿದ್ಧಾಂತಿಯನ್ನು ಕರ್ಮಗಳ ಫಲವು ಪೀಡಿಸುವುದಿಲ್ಲ. ಅದ್ವೈತದಲ್ಲಿ ಜ್ಞಾನವೇ ಮುಖ್ಯವಾದದ್ದು, ಯಾಕೆಂದರೆ ಜ್ಞಾನವೇ ಮೋಕ್ಷಕ್ಕೆ ಕಾರಣವಾಗಿದೆ. ಭಕ್ತಿ, ನಿಷ್ಕಾಮಕರ್ಮಗಳು ಜ್ಞಾನಕ್ಕೆ ಸಾಧನಗಳಾಗಿವೆ. ಜೀವನ್ಮುಕ್ತಿಯು ಅದ್ವೈತದ ವೈಶಿಷ್ಟ್ಯವಾಗಿದೆ. ಅದ್ವೈತ ತತ್ತ್ವಾಮೃತದಿಂದ ಶಂಕರರು ಜನರ ಅನೇಕ ತಾಪತ್ರಯಗಳನ್ನು ಪರಿಹರಿಸಿದರು. ಮಾನವ ಜನಾಂಗವನ್ನು ಉದ್ಧರಿಸಲು, ಮೋಕ್ಷನೀಡಲು ಈ ತತ್ತ್ವಜ್ಞಾನ ಸಮರ್ಥವಾಗಿದೆ. ಈ ವೇದಾಂತವು ಇಹ

ಜೀವನದಲ್ಲೇ ಜೀವಿಗೆ ಮುಕ್ತಿಯನ್ನು ತಂದುಕೊಡುವ ಶ್ರೇಷ್ಠ ತತ್ತ್ವಜ್ಞಾನವೂ, ಸತ್ತ್ವಜ್ಞಾನವೂ ಆಗಿದೆ. ವ್ಯಾವಹಾರಿಕವಾದ ಅದ್ವೈತ ವೇದಾಂತವನ್ನು ತಿಳಿದುಕೊಂಡರೆ ಸಾಮಾನ್ಯ ಮನುಷ್ಯರ ಅಭೀಷ್ಟಗಳೂ ಪೂರ್ಣ ಹೊಂದಿ ಸಂಸಾರದ ಸಮಸ್ತಪ್ರಾಣಿಗಳೂ ಸುಖಿಗಳಾಗಬಹುದು. ಶಂಕರರ ಉಪದೇಶಾಮೃತವನ್ನು ಪಾನಮಾಡಿ, ಅವರ ಸಿದ್ಧಾಂತವನ್ನು ಸ್ವಾನುಭವಕ್ಕೆ ತಂದುಕೊಂಡ ಅನೇಕ ಮಹನೀಯರು ಅದ್ವೈತ ಗ್ರಂಥಗಳನ್ನು ಅನೇಕ ಭಾಷೆಗಳಲ್ಲಿ ಬರೆದಿದ್ದಾರೆ. ಮುಕ್ತಿಸಾಧನೆಗೆ ರಾಜಮಾರ್ಗವೆಂದರೆ ಅದ್ವೈತ ಸಿದ್ಧಾಂತವೇ ಎಂದು ಘಂಟಾಘೋಷವಾಗಿ ಹೇಳಬಹುದು. ವೇದಾಂತ ವಿಚಾರದಲ್ಲೇ ಅವರು ಒಂದು ಮಹಾಕ್ರಾಂತಿಯನ್ನುಂಟುಮಾಡಿ, ಅನುಭವಕ್ಕೆ ಹೆಚ್ಚಿನ ಮಹತ್ತ್ವವನ್ನು ನೀಡಿ, ವೈಶಾಲ್ಯವನ್ನು ಹೊಂದಿರುವ ಈ ಅಮೋಘ ತತ್ತ್ವವನ್ನು ವೇದಾಂತವನ್ನು ಅರ್ಥಮಾಡಿಕೊಳ್ಳದೆ ತೊಳಲಾಡುತ್ತಿದ್ದ ಜಿಜ್ಞಾಸುಗಳಿಗೆ ಕೊಟ್ಟರು.

ಶಂಕರಾಚಾರ್ಯರು ಉಪನಿಷತ್ತುಗಳನ್ನು, ಭಗವದ್ಗೀತೆಯನ್ನು, ಬ್ರಹ್ಮಸೂತ್ರಗಳನ್ನೂ ರಕ್ಷಿಸಿದರು. ಇತರರಿಗಿಂತಲೂ ಅವರು ಉಪನಿಷತ್ತುಗಳ ಸಾರವನ್ನು ಸ್ಪಷ್ಟವಾಗಿ ವಿವರಿಸಿದರು. ಅವರು ಬೋಧಿಸಿದ 'ತತ್ತ್ವಮಸಿ'ಯ ತಾತ್ಪರ್ಯ 'ಜೀವನು ಬ್ರಹ್ಮನೇ' ಎಂಬುದಾಗಿದೆ. ಇದು ಅದ್ವೈತದ ಮೂಲ ಮಂತ್ರ. 'ಸ್ವಾರ್ಥವನ್ನು ತ್ಯಜಿಸಿ ನೆರೆಹೊರೆಯುವರಿಗೆ ನೆರವು ನೀಡಿದರೆ ನಮಗೆ ಸಹಾಯಮಾಡಿಕೊಂಡಂತಾಗುವುದು' ಎನ್ನುವ ಅವರ ಸಂದೇಶವನ್ನು ಇಂದಿನ ಜನಾಂಗ ಅನುಸರಿಸಿದರೆ ಜಗತ್ತಿನ ಅನೇಕ ಸಮಸ್ಯೆಗಳು ಪರಿಹಾರವಾಗುವುದು. ಲೋಕೋತ್ತರ ಪ್ರತಿಭಾಶಾಲಿಗಳಾದ ಶಂಕರರು ಆತ್ಮದರ್ಶನ ಮಾಡುವುದಕ್ಕೆ ಮನಸ್ಸೇ ಸಾಧನ, ಚಿತ್ತಶುದ್ಧಿಯಾಗದೆ ತತ್ತ್ವಜ್ಞಾನ ಲಭಿಸುವುದಿಲ್ಲವೆಂದು ಉಪದೇಶಿಸಿ, ತಮ್ಮ ಅಲ್ಪ ಜೀವಮಾನಕಾಲದಲ್ಲಿ ಉತ್ತಮೋತ್ತಮ ಮನುಷ್ಯನ ಲಕ್ಷಣಗಳಾದ ಪಾಂಡಿತ್ಯ, ಮಹಿಮೆ, ಜ್ಞಾನ ಮತ್ತು ಕಾರುಣ್ಯಗಳನ್ನು ಸಾಧಿಸಿದರು. ಮೂವತ್ತೆರಡು ವರ್ಷಗಳಲ್ಲಿ ಅವರು ಸರ್ವಶಾಸ್ತ್ರಗಳನ್ನು ಸಂಪೂರ್ಣವಾಗಿ ಅಭ್ಯಾಸಮಾಡಿ ಅನೇಕ ಗ್ರಂಥಗಳನ್ನು ರಚಿಸಿದರು.

ಜಗದ್ಗುರು ಶಂಕರರು ಸಂಘರೂಪದಲ್ಲಿ ಸಂನ್ಯಾಸಿಗಳನ್ನೆಲ್ಲ ಒಟ್ಟುಗೂಡಿಸಿ ಅವರಿಂದ ದೇಶದಾದ್ಯಂತ ವೈದಿಕ ಧರ್ಮದ ಪ್ರಚಾರಕಾರ್ಯ ಮಾಡಿಸಿದರು.

ಅನುಭವದ ದೃಢ ಆಧಾರದ ಮೇಲೆ ನಿಂತಿರುವ ಅವರ ಉಪದೇಶಗಳು, ಸಂದೇಶ ಗಳು, ತತ್ತ್ವಗಳು ಅತ್ಯಂತ ಮಹತ್ತ್ವವುಳ್ಳದ್ದಾಗಿವೆ. ಸರ್ವಸ್ವತಂತ್ರನಾದ ಸರ್ವಧರ್ಮಗಳ ಸಾರವನ್ನು ಸಂಗ್ರಹಿಸುವ ಮತ್ತು ಸಾಕ್ಷಾತ್ಕಾರಕ್ಕೆ ತನ್ನ ಜೀವವನ್ನೇ ಮುಡಿಪಾಗಿಡುವ ಸನ್ಯಾಸಿ ಯಾವ ಧರ್ಮವನ್ನೂ ಸೇರಲಾರ. ಸ್ವಾರ್ಥತೆಯನ್ನು ತುಳಿದು ಹಾಕಿ, ಕಾಮ ಕಾಂಚನವನ್ನು ತ್ಯಾಗಮಾಡಿ ಜಗ ತ್ತಿನ ಹಿತ, ಮತ್ತು ಮೋಕ್ಷ ಸಂಪಾದಿಸುವುದೇ ಸಂನ್ಯಾಸಿಯ ಗುರಿಯಾಗ ಬೇಕು. ಸಾಕ್ಷಾತ್ಕಾರ ಪಡೆಯಲು ಸಂನ್ಯಾಸಧರ್ಮ ಸ್ವೀಕರಿಸುವುದೇ ಸುಲಭ ಮಾರ್ಗವೆಂದು ಅವರು ಅಭಿಪ್ರಾಯಪಟ್ಟರು.

ದಿವ್ಯವಾದ ವೇದಾಂತ ಮತವನ್ನು ಉದ್ಧರಿಸಿ, ಸೂರ್ಯ ಚಂದ್ರರಿರುವತನಕ ವೈದಿಕ ಧರ್ಮವು ಶಾಶ್ವತವಾಗಿ ನಿಲ್ಲುವಂತೆ ಮಾಡಿದ ಶಂಕರರು ಕಲೆಯನ್ನು ಕುರಿತು ಮನೋಜ್ಞವಾದ ವಿವರಣೆಯನ್ನು ನೀಡಿದ್ದಾರೆ. ಪರಮ ಉಪಾಸಕರೂ, ಜ್ಞಾನ ಮಹಿಮೆಯ ಪ್ರತಿಪಾದಕರೂ, ಶ್ರೇಷ್ಠ ಸಂನ್ಯಾಸಿಗಳೂ, ವ್ಯವಹಾರ ಕುಶಲಪಂಡಿತರೂ ಆದ ಜಗದ್ಗುರುಗಳು ತಮ್ಮ ಕವಿತೆಗಳ ಮೂಲಕ ರಸಿಕರ ಹೃದಯಗಳಲ್ಲಿ ಆನಂದದ ಬುಗ್ಗೆ ಚಿಮ್ಮಿಸಿದ್ದಾರೆ. ಅವರು ಶ್ರೇಷ್ಠಮಟ್ಟದ ದಾರ್ಶನಿಕರೆಂದು ಅವರ ಗ್ರಂಥಗಳಿಂದ ಸರ್ವರಿಗೂ ತಿಳಿಯುತ್ತದೆ. ಸಾಮಾನ್ಯ ರಿಗೂ ಅರ್ಥವಾಗುವಂತೆ ಸರಳ ಹಾಗೂ ಗಂಭೀರ ಶೈಲಿಯಲ್ಲಿ ಅವರು ವ್ಯಾಖ್ಯಾನಗಳನ್ನೂ, ಭಾಷ್ಯಗಳನ್ನೂ ರಚಿಸಿದ್ದಾರೆ. ಪಾಂಡಿತ್ಯ ಮತ್ತು ಕವಿತ್ವದ ಅನುಪಮ ಸಮ್ಮೇಳನ ಅವರಲ್ಲಿತ್ತು. ಧರ್ಮಗ್ರಂಥಗಳನ್ನೆಲ್ಲ ಸಮಗ್ರವಾಗಿ ಅಧ್ಯಯನ ಮಾಡಿದ ಶಂಕರರಿಗೆ ಎಲ್ಲ ಮತಗಳ ಸಂಪೂರ್ಣ ಪರಿಚಯವಿತ್ತು.

ಸಾವಿರ ವರ್ಷಗಳ ಹಿಂದೆ ಶಂಕರಾಚಾರ್ಯರು ಜೀವಿಸಿದ್ದವರಾದರೂ ಎಲ್ಲ ಕ್ಷೇತ್ರಗಳಲ್ಲೂ ಅತ್ಯಾಧುನಿಕವಾದ ಮನೋಧರ್ಮ ಮತ್ತು ದೃಷ್ಟಿವೈಶಾಲ್ಯ ವನ್ನು ಅವರು ವ್ಯಕ್ತಪಡಿಸುತ್ತಿದ್ದರು. 'ಜ್ಞಾನಿ ಚಂಡಾಲನಾಗಿರಲಿ, ಬ್ರಾಹ್ಮಣ ನಾಗಿರಲಿ ಅವನು ನನ್ನ ಗುರುಸಮಾನ' ಎಂದು ಹೇಳುವಷ್ಟು ದೃಷ್ಟಿವೈಶಾಲ್ಯ ಅವರಲ್ಲಿತ್ತು. ಪ್ರಪಂಚದಲ್ಲಿ ತಾಯಿಗಿಂತ ಮಿಗಿಲಾದ ದೇವರಿಲ್ಲ ಎನ್ನುವುದನ್ನು ಅವರು ಲೋಕಕ್ಕೇ ತೋರಿಸಿಕೊಟ್ಟರು. ಅಲಕನಂದಾ ನದಿಯ ಸಮೀಪದಲ್ಲಿ ಬಹುಕಾಲದಿಂದ ರೂಢಿಯಲ್ಲಿದ್ದ ನರಬಲಿಪದ್ಧತಿಯನ್ನು ಅವರು ನಿಲ್ಲಿಸಿದರು.

ಚಿತ್ತಶುದ್ಧಿ, ಜ್ಞಾನದಿಂದ ಮೋಕ್ಷ ಸಾಧಿಸುವುದೇ ಮಾನವನ ಗುರಿಯಾಗ ಬೇಕೆಂದು ಅವರು ಉಪದೇಶಿಸಿದರು. ಆಧ್ಯಾತ್ಮಿಕ ಚಿಂತನೆಯ ಜೊತೆಗೆ ಅನೇಕ ಮಹತ್ಕಾರ್ಯಗಳನ್ನು ಸಾಧಿಸಿ, ದೇಶವನ್ನು ಆವರಿಸಿದ್ದ ಅಶಾಂತಿ, ಧಾರ್ಮಿಕ ಕ್ಷೋಭೆಗಳಿಂದ ಬಿಡುಗಡೆಮಾಡಿ ಎಲ್ಲೆಲ್ಲೂ ಸುಖಶಾಂತಿಗಳನ್ನು ನೆಲೆಗೊಳಿಸಿದ ಶಂಕರಾಚಾರ್ಯರು ಸಮಾಜ ಸುಧಾರಕರಾಗಿ, ಗ್ರಂಥ ನಿರ್ಮಾಪಕರಾಗಿ ಅದ್ಭುತ ಸಾಮರ್ಥ್ಯವನ್ನು ಪ್ರದರ್ಶಿಸಿದರು.

ಜಗದ್ಗುರು ಶಂಕರರು ಕರ್ಮಭೂಮಿಯನ್ನು ಜ್ಞಾನಮಯವನ್ನಾಗಿ ಮಾಡಿ, ಜನತೆಗೆ ನಿಷ್ಕಾಮ ಕರ್ಮವನ್ನು ಬೋಧಿಸಿ, ಭಕ್ತಿಯ ಪರಾಕಾಷ್ಠತೆಯನ್ನು ತೋರಿಸಿ, ಅಹಿಂಸೆ, ಸತ್ಯ, ಶಮ, ದಮ, ದಯಾದಿ ಗುಣಗಳ ವೃದ್ಧಿಗೆ ಪ್ರೋತ್ಸಾಹಿಸಿ, ಶುದ್ಧ ಅದ್ವೈತ ಅನುಷ್ಠಾನ ಮಾಡಿದರು. ಅವೈದಿಕ ಮತ್ತು ಅರ್ಧವೈದಿಕ ಸಿದ್ಧಾಂತಗಳನ್ನು ಅವರು ನಿರ್ಮೂಲ ಮಾಡಿದ್ದಲ್ಲದೆ ವಿರುದ್ಧ ಮತವಾದಿಗಳ ಅಪಸಿದ್ಧಾಂತಗಳನ್ನು ಖಂಡನೆ ಮಾಡಿದರು. ಅವರು ಅನೇಕ ಪುಣ್ಯಕ್ಷೇತ್ರಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡು ಅವುಗಳ ಮಹತ್ವವನ್ನು ತಮ್ಮ ಪ್ರಭಾವದಿಂದ ಹೆಚ್ಚಿಸಿದರು. ಅದ್ವೈತ ಸಾಹಿತ್ಯ ಸೃಷ್ಟಿ ಮಾಡಿದ ಶಂಕರರು ದೇಶದ ಪ್ರಜೆಗಳೆಲ್ಲರಿಗೂ ತಾವು ಪ್ರಚಾರಮಾಡಿದ ಧರ್ಮರಹಸ್ಯ ತಿಳಿಯುವಂತೆ ಮತ್ತು ಈ ತತ್ತ್ವದ ಉಪದೇಶದಿಂದ ವಂಚಿತರಾಗದಿರುವಂತೆ ವ್ಯವಸ್ಥೆಗೊಳಿಸಿದರು.

ಶಂಕರಾಚಾರ್ಯರಿಗೆ ಅಪಾರವಾದ ದೇಶಭಕ್ತಿ, ಪ್ರಜಾವಾತ್ಸಲ್ಯವಿತ್ತು. ಎಲ್ಲರೂ ತಮ್ಮ ಮಕ್ಕಳೇ, ಅವರ ಸುಖಶಾಂತಿಗಳಿಗಾಗಿ ಜೀವಿಸುವುದೇ ತಮ್ಮ ಧ್ಯೇಯ, ಅದಕ್ಕಾಗಿ ಈ ಬದುಕು ಎನ್ನುವ ಗುರಿ ಇಟ್ಟುಕೊಂಡು ಅದರ ಸಾಧನೆಗಾಗಿ ಅವರು ದೇಶದಲ್ಲೆಲ್ಲಾ ಸಂಚರಿಸಿ ದೇಶದ ಅಶಾಂತಿ, ಧಾರ್ಮಿಕ ಕ್ಷೋಭೆಗಳನ್ನು ಕೊನೆಗಾಣಿಸಿದರು.

ಶಂಕರಾಚಾರ್ಯರ ಜೀವನ ಚರಿತ್ರೆಯನ್ನು ಸಮಗ್ರವಾಗಿ ಪರಿಶೀಲಿಸಿದರೆ ಅವರ ಜೀವನವು ಮಹಾನ್ ವ್ಯಕ್ತಿತ್ವ, ಉದಾತ್ತಚರಿತ, ಅಸಾಮಾನ್ಯ ಪಾಂಡಿತ್ಯ, ಅಪ್ರತಿಮಕಾವ್ಯ ಪ್ರತಿಭೆ ಮತ್ತು ಆದರ್ಶಗುಣಗಳಿಂದ ಪರಿಪೂರ್ಣವಾಗಿರುವುದು ಅಭಿವ್ಯಕ್ತವಾಗುವುದು. ತೀಕ್ಷ್ಣವಾದ ಮೇಧಾಶಕ್ತಿ, ಬುದ್ಧಿ ವಿಕಾಸದಿಂದ ಅವರಿಗೆ ಸಮಗ್ರ ವಿದ್ಯೆಗಳ ಅರಿವುಂಟಾಗಿತ್ತು. ಆತ್ಮನ ಅನೇಕತ್ವ

ವೆಂಬ ಅಜ್ಞಾನವನ್ನು ಶಂಕರರು ವಿವೇಕವೆಂಬ ಖಡ್ಗದಿಂದ ತುಂಡರಿಸಿ ಅದ್ವೈತ ವಿಜ್ಞಾನವೆಂಬ ಜ್ಯೋತಿಯನ್ನು ಬೆಳಗಿದರು. ಅವರು ಧರ್ಮದ್ರೋಹಿಗಳನ್ನು, ಸ್ವಾರ್ಥಿಗಳನ್ನು ವಾದದಲ್ಲಿ ಜಯಿಸಿ, ಅದ್ವೈತವೆಂಬ ದಿವ್ಯ ತೇಜಸ್ಸಿನಿಂದ ಜನತೆಯನ್ನು ಜನನ ಮರಣಗಳಿಂದ ಉಲ್ಲಾಸಗೊಳಿಸಿ ಉದ್ಧಾರಮಾಡಿದರು. ವೈದಿಕ ಧರ್ಮದ ಪುನರುದ್ಧಾರ ಹಾಗೂ ಅದರ ಪ್ರಚಾರ ಅವರ ಜೀವನದಲ್ಲಿ ಪ್ರಧಾನಕಾರ್ಯವೆಂದು ನಿಸ್ಸಂದೇಹವಾಗಿ ಹೇಳಬಹುದು. ಜಗದ್ಗುರುಗಳಿಂದ ಮಾನವ ಕುಲದ ಶಾಂತಿಗೆ, ಪಾರಲೌಕಿಕ ಸುಖಕ್ಕೆ ಒಂದು ವರಪ್ರದಾನ ಸಾಧನದಂತಿರುವ ಹಿಂದೂಧರ್ಮದ ರಕ್ಷಣೆಯಾಯಿತು, ವೈದಿಕ ಧರ್ಮದ ಶಂಖನಾದ ಉಚ್ಚಸ್ವರದಲ್ಲಿ ಮೊಳಗಿತು ಮತ್ತು ಉಪನಿಷತ್ತುಗಳ ದಿವ್ಯವಾಣಿ ದೇಶದಲ್ಲೆಲ್ಲಾ ಪ್ರತಿಧ್ವನಿಸಿತು.

ಆಚಾರ್ಯ ಶಂಕರರ ಅಪ್ರತಿಮ ಆತ್ಮಶಕ್ತಿ, ಭಾವದ ಶಾಂತತೆ, ವ್ಯಾಖ್ಯಾನ ವೈಖರಿ, ಬುದ್ಧಿಸಾಮರ್ಥ್ಯ, ಭೂತದಯೆ, ಆಧ್ಯಾತ್ಮಿಕ ಸಂಪತ್ತು ಮುಂತಾದ ಗುಣಗಳನ್ನು ಆರ್ಥರ್ ಐಸೆಬರ್ಗ್, ವಿಲ್‌ಡ್ಯೂರಾಂಟ್, ಸೋದರಿ ನಿವೇದಿತಾ, ಚಾರ್ಲೆಸ್ ಜಾನ್‌ಸ್ಟನ್ ಮೊದಲಾದ ಪಾಶ್ಚಾತ್ಯ ವಿದ್ವಾಂಸರು ಮುಕ್ತ ಕಂಠದಿಂದ ಹೊಗಳಿ ತಮ್ಮ ಗೌರವವನ್ನು ವ್ಯಕ್ತಪಡಿಸಿದ್ದಾರೆ. ಶ್ರೀನಗರದ ಸರ್ವಜ್ಞಪೀಠ ಹತ್ತಿ 'ಜಗದ್ಗುರು'ವಾಗಿ 'ಸತ್ಯಮದ್ವೈತಂ' ಎಂದು ಅವರು ಘೋಷಿಸಿದರು. ಅಂಧಾನುಕರಣೆ, ಅಶ್ರದ್ಧೆ, ಸಂಪ್ರದಾಯಗಳನ್ನು ಖಂಡಿಸಿದ ಶಂಕರರು ಸತ್ಯಕ್ಕೆ ಜ್ಞಾನಕ್ಕೆ ತುಂಬಾ ಮನ್ನಣೆ ನೀಡಿ, ಮೂರ್ಖರನ್ನು, ಅವಿವೇಕಿಗಳನ್ನು ತಿದ್ದಿ ಅವರಿಗೆಲ್ಲಾ ಋಜುಮಾರ್ಗ ತೋರಿಸಿದ ಋಷಿವರ್ಯರು. ಅವರು ಭಾರತಸೇವೆಯೇ ಭಗವತ್ಸೇವೆ ಎಂದು ಭಾವಿಸಿದ ಸಂನ್ಯಾಸಿ ಸಾಮ್ರಾಟರು.

ಜಗದ್ಗುರು ಶಂಕರರ ಸಾತ್ತ್ವಿಕ ಜೀವನ, ಉಪದೇಶಗಳು, ಗ್ರಂಥಗಳು, ಅನೇಕ ಶತಮಾನಗಳ ನಂತರವೂ ಏಕಪ್ರಕಾರವಾಗಿ ಬೆಳಗುತ್ತಾ ಇಂದಿನ ಜನಾಂಗಕ್ಕೆ ಆದರ್ಶಪೂರ್ಣವಾಗಿದೆ. ಅವರ ಜೀವನವನ್ನು ಅಧ್ಯಯನ ಮಾಡಿ ಜೀವನ ಪವಿತ್ರಮಾಡಿಕೊಳ್ಳುವುದು, ಅವರು ನೀಡಿದ ಉಪದೇಶಗಳನ್ನು ಅನುಸರಿಸಿ ಬದುಕನ್ನು ಸಫಲಮಾಡಿಕೊಳ್ಳುವುದು ನಮ್ಮೆಲ್ಲರ ಕರ್ತವ್ಯವಾಗಿದೆ.

# ಶ್ರೀ ಬಸವೇಶ್ವರರು

## ೧೧೩೧–೧೧೬೭

ಭಾರತ ದೇಶದ ಇತಿಹಾಸದಲ್ಲಿ ಜನ್ಮತಾಳಿ ಮಾನವರನ್ನು ಉದ್ಧಾರ ಮಾಡಿದ ಮಹಾಪುರುಷರಲ್ಲಿ ಬಸವೇಶ್ವರರು ತತ್ತ್ವಬೋಧಕರಾಗಿ, ಧರ್ಮಪ್ರಚಾರಕರಾಗಿ, ಸಮಾಜ ಸುಧಾರಕರಾಗಿ, ನಿಷ್ಠಾವಂತ ಸತ್ಯಾನ್ವೇಷಕರಾಗಿ, ಕನ್ನಡ ನಾಡು ನುಡಿಯ ಕ್ರಾಂತಿಪುರುಷರಾಗಿ ಉನ್ನತ ಸ್ಥಾನ ಗಳಿಸಿದ್ದಾರೆ. ಅಲೌಕಿಕ ಶಕ್ತಿಯನ್ನು ಪಡೆದ ಬಸವೇಶ್ವರರು ಸಮತಾವಾದದ ಮೂಲ ಪುರುಷರು, ದೇಶ ಭಕ್ತರು ಮತ್ತು ಮಾನವತಾವಾದಿಗಳು. ಕಾರ್ಯಚಟುವಟಿಕೆಗಳಿಂದ ಮಹಾಪುರುಷರೆನಿಸಿಕೊಂಡ ಅವರ ಜೀವನ ಮಾನವಕುಲಕ್ಕೇ ದಾರಿ ತೋರುವ ಜ್ಯೋತಿಯಂತೆ ಬೆಳಗುತ್ತಿದೆ. ಅವರು ನೀಡಿದ ಸಂದೇಶ ಸರ್ವರಿಗೂ ಸರ್ವಕಾಲಕ್ಕೂ ಸ್ಫೂರ್ತಿ ಕೊಡುತ್ತದೆ. ಅವರ ಜೀವನ ಚರಿತ್ರೆ ಪ್ರಪಂಚಕ್ಕೆ ಮಾದರಿಯಾಗಿದೆ ಮತ್ತು ಒಂದು ಆದರ್ಶಸಾಧನೆಗೆ ನಡೆಸಿದ ಹೋರಾಟ ಎನ್ನಬಹುದು. ಭಾರತದ ಸಂಸ್ಕೃತಿಯನ್ನು ರೂಪಿಸಿದ ಪ್ರಮುಖ ಮಹಾಶಿಲ್ಪಿಗಳಲ್ಲಿ ಬಸವಣ್ಣನವರೂ ಒಬ್ಬರು.

ಕ್ರಿ. ಶ. ೧೧೩೧ರಲ್ಲಿ ಬಿಜಾಪುರದ ಬಾಗೇವಾಡಿ ಗ್ರಾಮದಲ್ಲಿ ಬಸವೇಶ್ವರರು ಶೈವ ಬ್ರಾಹ್ಮಣರಾದ ಮಾದಿರಾಜ, ಮಾದಲಾಂಬೆಗೆ ಜನಿಸಿದರು. ಆ ಕಾಲದಲ್ಲಿ ವೈದಿಕ ಧರ್ಮ ಧಾರ್ಮಿಕ ತೇಜಸ್ಸನ್ನು ಕಳೆದುಕೊಂಡು ಸತ್ವಹೀನವಾಗಿತ್ತು. ವೈದಿಕ ಧರ್ಮವನ್ನು ಪ್ರತಿಭಟಿಸುತ್ತಿದ್ದ ಜೈನ, ಬೌದ್ಧ ಧರ್ಮಗಳೂ ತಮ್ಮ ಪ್ರಭಾವವನ್ನು ಕಳೆದುಕೊಂಡಿದ್ದವು. ಧರ್ಮದ ಹೆಸರಿನಲ್ಲಿ ಅನೇಕ ಅಂಧಶ್ರದ್ಧೆಗಳು, ಅನಾಚಾರ, ಹಿಂಸಾಚಾರ, ಮದ್ಯಪಾನ, ನರಬಲಿ ಮುಂತಾದ ದುರಾಚಾರಗಳು ನಡೆಯುತ್ತಿದ್ದವು. ಪ್ರಸಿದ್ಧ ಧರ್ಮಗಳು, ಮತಗಳು ತಮ್ಮ ಪಾವಿತ್ರ್ಯವನ್ನು ಕಳೆದುಕೊಂಡಿದ್ದವು. ಧಾರ್ಮಿಕ ಜಟಿಲತೆ, ಸಾಮಾಜಿಕ ವೈಷಮ್ಯ ರಾಜಕೀಯ ಅಸ್ಥಿರತೆ, ವ್ರತಾಚಾರಗಳ ಡಾಂಭಿಕತೆಯಿಂದ ಜನತೆ ಕಂಗೆಟ್ಟಿದ್ದ ಸಂದರ್ಭದಲ್ಲಿ ನಿಜಧರ್ಮದ ಸಂದೇಶವನ್ನು ನೀಡಲು, ದೇಶವನ್ನು ಉದ್ಧಾರ ಮಾಡಲು ಈ ಮಹಾಪುರುಷರು ಜನಿಸಿದರು.

ತಂದೆತಾಯಿಗಳ ಭಕ್ತಿ ಕರ್ಮಗಳ ನೆರಳಿನಲ್ಲಿ ಹುಟ್ಟಿ ಬೆಳೆದ ಬಸವ ಎಳೆತನದಲ್ಲಿ ತುಂಬ ತುಂಟ ಮತ್ತು ಚುರುಕು ಬುದ್ಧಿಯ ಹುಡುಗ. ಬಾಲ್ಯದಲ್ಲಿ ಅಂತರ್ಮುಖಿ, ಸ್ನೇಹಪರ ಹಾಗೂ ಮೃದು ಹೃದಯದ ಬಸವ ಶಿವಶರಣರ ಕಥೆಗಳನ್ನು ಕೇಳುತ್ತಾ ತನ್ನನ್ನು ತಾನೇ ಮರೆಯುತ್ತಿದ್ದ. ಚಿಕ್ಕಂದಿನಿಂದಲೇ ಭಗವಂತನ ಸೃಷ್ಟಿವಿಲಾಸ, ಜೀವನ ಸೌಂದರ್ಯ ಅವನನ್ನು ಆಕರ್ಷಿಸಿದವು. ಗೆಳೆಯರಿಗೆಲ್ಲಾ ಅಚ್ಚುಮೆಚ್ಚಾದ ಅವನ ರೂಪು, ಚಟುವಟಿಕೆ, ಗುಣಶೀಲಗಳನ್ನು ಗ್ರಾಮದವರೆಲ್ಲ ನೋಡಿ ಸಂತೋಷಪಡುತ್ತಿದ್ದರು. ಎಂಟನೆಯ ವಯಸ್ಸಿನಲ್ಲಿ ಅವನಿಗೆ ಉಪನಯನವಾಯಿತು. ತನಗೆ ಉಪನಯನದ ಸಂಸ್ಕಾರ ಬೇಡವೆಂದು ಬಸವ ವಿರೋಧಿಸಿದರೂ ಹಿರಿಯರ ಬಲವಂತಕ್ಕೆ ಕಟ್ಟುಬಿದ್ದು ಉಪನಯನಕ್ಕೆ ಸಮ್ಮತಿಸಿದನು. ಮೈಮೇಲಿನ ಕರ್ಮಲತೆಯಂತಿದ್ದ ಯಜ್ಞೋಪವೀತ ಅವನಿಗೆ ಅಸಹನೀಯವಾಗಿ ಪರಿಣಮಿಸಿತು. ಹದಿನಾರನೆಯ ವಯಸ್ಸಿನಲ್ಲಿ ಬಸವ ತಂದೆತಾಯಿಯರನ್ನು ಕಳೆದುಕೊಂಡು ಅನಾಥನಾದ. ಅವನು ಎಲ್ಲರೆದುರಿನಲ್ಲಿ ದೃಢಚಿತ್ತದಿಂದ ಜನಿವಾರವನ್ನು ತೆಗೆದು ಹಾಕಿ, ಲೌಕಿಕ ಬಂಧನಗಳಿಂದ ಬಿಡುಗಡೆ ಹೊಂದಿ, ಬಂಧು ಬಾಂಧವರ ಸಂಪರ್ಕ ಕಡಿದುಕೊಂಡು ಜಾತವೇದ ಮುನಿಯ ಬಳಿಗೆ ಹೋದನು. ಹತ್ತೊಂಬತ್ತು ವರ್ಷ ಆ ಮುನಿಯ ಗುರುಕುಲದಲ್ಲಿ ಅವನು ವೇದ, ವೇದಾಂತ, ಶ್ರುತಿ, ಸ್ಮೃತಿ, ಪುರಾಣಗಳನ್ನೆಲ್ಲ ವ್ಯಾಸಂಗ ಮಾಡಿದ. ಅವನು ತನ್ನ ತೀಕ್ಷ್ಣ ಬುದ್ಧಿ, ಪಾಂಡಿತ್ಯ, ಭಕ್ತಿ, ಗುಣಶೀಲಗಳಿಂದ ಗುರುಗಳ ವಿಶ್ವಾಸಕ್ಕೆ ಪಾತ್ರನಾದ. ಗುರುಕುಲಕ್ಕೆ ಬರುತ್ತಿದ್ದ ಪಂಡಿತರು, ಮೇಧಾವಿಗಳೊಡನೆ ಚರ್ಚಿಸುತ್ತ ಅವನು ಅನೇಕ ವಿಚಾರಗೋಷ್ಠಿಗಳಲ್ಲಿ ಭಾಗವಹಿಸುತ್ತಿದ್ದ. ಶಿವಧ್ಯಾನ ಮಾಡುತ್ತಾ, ಶಿವಪೂಜೆಯಲ್ಲಿ ಮಗ್ನನಾಗಿ, ತತ್ತ್ವಶಾಸ್ತ್ರ ಪುರಾಣಗಳನ್ನು ಅಧ್ಯಯನ ಮಾಡುವುದರಲ್ಲಿ ನಿರತನಾಗಿದ್ದ ಬಸವಣ್ಣನಿಗೆ ಕಲ್ಯಾಣದ ಮಂತ್ರಿಯೂ ಸೋದರಮಾವನೂ ಆದ ಬಲದೇವನ ಮಗಳು ಗಂಗಾಂಬಿಕೆಯನ್ನು ಕೊಟ್ಟು ವಿವಾಹವಾಯಿತು. ತನ್ನ ಆಧ್ಯಾತ್ಮಿಕ ಸಾಧನೆಗೆ ವಿವಾಹ ಅಡ್ಡಿಯಾಗಬಹುದೆಂದು ಹೆದರಿ ಬಸವಣ್ಣ ವಿವಾಹಕ್ಕೆ ಪ್ರತಿಭಟಿಸಿದನು. 'ನೀನು ಮದುವೆಯಾಗಿ ಮಾನವ ಲೋಕದ ಕಲ್ಯಾಣಕ್ಕಾಗಿ ದುಡಿ, ನಿನ್ನ ಸಹಧರ್ಮಿಣಿ ನಿನಗೆ ದಾರಿತೋರುವ ದೀಪ. ಮದುವೆ ನಿನ್ನ ಸಾಧನೆಗೆ ಅಡ್ಡಿ ಬರುವುದಿಲ್ಲ. ಅಜ್ಞಾನದಲ್ಲಿ ತೊಳಲುತ್ತಿರುವ ಜನತೆಯನ್ನು ಉದ್ಧರಿಸು,

ನೀನು ಕಾರಣಪುರುಷ' ಎಂದು ಗುರುಗಳು ಅಪ್ಪಣೆ ಕೊಡಿಸಿದ ಮೇಲೆ ಬಸವಣ್ಣ ಮದುವೆಯಾಗಲು ಸಮ್ಮತಿಸಿದ.

ಗೃಹಸ್ಥರಾದ ಬಸವಣ್ಣನವರು ಹಣದ ತಾಪತ್ರಯವಿಲ್ಲದಿದ್ದರೂ ಕುಳಿತು ತಿಂದು ಕಾಲಹಾಕುವ ಮನಸ್ಸಿಲ್ಲದೆ ಅರಮನೆಯಲ್ಲಿ ಕರಣಿಕನ ಕೆಲಸಕ್ಕೆ ಸೇರಿಕೊಂಡರು. ಶಿವಶರಣರ ಸಾಹಿತ್ಯದಲ್ಲಿ, ಪುರಾಣ ಇತಿಹಾಸಗಳಲ್ಲಿ ಅವರಿಗಿದ್ದ ಸಂಪೂರ್ಣ ಜ್ಞಾನ, ಆಧ್ಯಾತ್ಮಿಕ ತಿಳಿವು, ದೇಶಭಕ್ತಿ, ನಿರ್ಮಲ ಜೀವನವನ್ನು ಬಹಳವಾಗಿ ಮೆಚ್ಚಿಕೊಂಡ ಬಿಜ್ಜಳದ ಭೂಪಾಲ ಬಸವಣ್ಣನವರನ್ನು ತನ್ನ ಮುಖ್ಯಮಂತ್ರಿಯನ್ನಾಗಿ ನೇಮಿಸಿಕೊಂಡು ತನ್ನ ತಂಗಿಯಾದ ನೀಲಲೋಚನೆಯನ್ನು ಅವರಿಗೆ ಕೊಟ್ಟು ಮದುವೆ ಮಾಡಿದನು. ಅಧಿಕಾರದ ಮೇಲಿನ ವ್ಯಾಮೋಹದಿಂದ ಬಸವಣ್ಣನವರು ಮಹಾಮಂತ್ರಿ ಪದವಿಯನ್ನು ಸ್ವೀಕರಿಸಲಿಲ್ಲ. ಜನತಾಸೇವೆ ಮಾಡುವ ಸಲುವಾಗಿ, ರಾಜಕೀಯ ರಂಗವನ್ನು ಅಧ್ಯಾತ್ಮ ಭೂಮಿಕೆಯನ್ನಾಗಿ ಮಾರ್ಪಡಿಸುವ ಸದುದ್ದೇಶದಿಂದ ಅವರು ಸಂಸಾರ ಭಾರ ಹೊತ್ತುಕೊಂಡರೂ ತಮ್ಮ ಭಕ್ತಿಗೆ ಚ್ಯುತಿ ಬಾರದಂತೆ ಎಚ್ಚರಿಕೆ ವಹಿಸಿ ರಾಜಕೀಯ ಕೆಲಸಗಳನ್ನು ಯಶಸ್ವಿಯಾಗಿ ನಿರ್ವಹಿಸಿದರು. ಅವರ ಗ್ರಹಸ್ಥಾಶ್ರಮ ಸಂಯಮದಿಂದ ಕೂಡಿದ್ದು ಅವರ ಪತ್ನಿಯರು ಅವರ ಶಿಷ್ಯೆಯರಾಗಿ ಭಕ್ತಿ ಧ್ಯಾನದಲ್ಲಿ ನಿರತರಾಗಿದ್ದರು. ಆ ದಂಪತಿಗಳ ಪರಿಶುದ್ಧ ಪ್ರೇಮ, ಒಲವಿನ ದಾಂಪತ್ಯ ಪ್ರಪಂಚಕ್ಕೇ ಆದರ್ಶವಾಗಿತ್ತು. ಪಾಂಡಿತ್ಯ, ಪ್ರತಿಭೆ, ಅನುಭಾವಗಳನ್ನು ಅಗಾಧವಾಗಿ ಬೆಳೆಸಿಕೊಂಡಿದ್ದ ಬಸವಣ್ಣನವರು ಸಂಸಾರದಲ್ಲಿದ್ದುಕೊಂಡೇ ಸಂಸಾರದ ದುಃಖ ನಿವಾರಣೆಯ ಹಾದಿಯನ್ನು ಜನತೆಗೆ ಬೋಧಿಸಿದರು.

ಪ್ರಾಚೀನ ಹಾಗೂ ಪುರಾತನವಾದ ವೀರಶೈವ ಧರ್ಮವನ್ನು ಉದ್ಧರಿಸಿದ ಬಸವಣ್ಣನವರು ಸಂಗಮ ಕ್ಷೇತ್ರದಲ್ಲಿ ಒಂದು ಆಶ್ರಮವನ್ನು ಸ್ಥಾಪಿಸಿದರು. ಆಶ್ರಮವಾಸಿಗಳು ಗುರು ಸಾನ್ನಿಧ್ಯದಲ್ಲಿ ವೇದ, ವೇದಾಂತ, ಶಾಸ್ತ್ರ, ದರ್ಶನ ಪುರಾಣಗಳ ಅಧ್ಯಯನ ಮಾಡುತ್ತಿದ್ದರು. ಪ್ರತಿದಿನವೂ ತಪ್ಪದೆ ಪೂಜೆ, ಜಪ, ತಪ, ಧ್ಯಾನಗಳನ್ನು ಮಾಡುತ್ತಿದ್ದ ಆಶ್ರಮದ ವಿದ್ಯಾರ್ಥಿಗಳು ಗುಣ, ಭಕ್ತಿಗೆ ಮನ್ನಣೆ ಕೊಡುತ್ತಿದ್ದರು. ಈ ಆಶ್ರಮದಿಂದಲೇ ತೃಪ್ತಿಹೊಂದದ ಬಸವಣ್ಣನವರು ಜೀವನದಲ್ಲಿ ನಿರಾಶೆಹೊಂದಿ ತೊಳಲುತ್ತಿರುವವರಿಗೆ ಭಕ್ತಿಮಾರ್ಗ ತೋರಿ

ಸಲು, ಜನತೆಯು ಆಧ್ಯಾತ್ಮಿಕ ಜೀವನದ ಮೇಲೆ ಮುಚ್ಚಿಕೊಂಡಿದ್ದ ಅಜ್ಞಾನ ವೆಂಬ ಧೂಳನ್ನು ತೊಡೆದುಹಾಕಲು, ಸತ್ಯದ ನಿಜಸ್ವರೂಪವನ್ನು ಜನತೆಗೆ ತೋರಿಸಲು, ತಾವು ಬೋಧಿಸಿದ ವೀರಶೈವ ತತ್ತ್ವಗಳನ್ನೆಲ್ಲ ಚರ್ಚಿಸಿ ಗಟ್ಟಿಗೊಳಿಸಲು 'ಅನುಭವ ಮಂಟಪ' ಎನ್ನುವ ಗೋಷ್ಠಿಯನ್ನು ಸ್ಥಾಪಿಸಿದರು. ಜನಸಾಮಾನ್ಯರನ್ನು ಧರ್ಮದ ಕಡೆಗೆ ತಿರುಗಿಸುವುದು, ಆಧ್ಯಾತ್ಮಿಕ ಸಮಸ್ಯೆಗಳನ್ನು ಚರ್ಚಿಸಿ ವಿಚಾರ ವಿನಿಮಯ ಮಾಡುವುದು, ಜನರನ್ನು ಕರ್ಮಕಾಂಡದಿಂದ ವಿಮುಕ್ತರನ್ನಾಗಿ ಮಾಡುವುದು ಮುಂತಾದ ಆದರ್ಶಗಳು ಆಧ್ಯಾತ್ಮಿಕ ಸಂಶೋಧನಾಲಯದಂತಿದ್ದ ಈ ಗೋಷ್ಠಿಯು ತಳಹದಿಯಾದವು. ಗೋಷ್ಠಿಯಲ್ಲಿ ಭಾಗ ವಹಿಸುವವರೆಲ್ಲ ಸಮಾನರು, ಸರ್ವಸ್ವತಂತ್ರರು. ಅವರು ಮಾಡುವ ಕೆಲಸ, ಮಾತನಾಡುವ ವಿಷಯ ಸರ್ವಹಿತಕಾರಿಯಾಗಿರಬೇಕು ಎಂದು ಬಸವಣ್ಣನವರು ಸಾರಿ, ಅನುಭವ ಮಂಟಪದ ಘನತೆಯನ್ನು ಹೆಚ್ಚಿಸಿದರು.

ಅನುಭವ ಮಂಟಪದ ಗೋಷ್ಠಿಗಳಲ್ಲಿ ಭಾಗವಹಿಸಲು ದೇಶದ ಎಲ್ಲಾ ಕಡೆಗಳಿಂದ ವಿಜ್ಞಾನಿಗಳು, ತತ್ತ್ವಶಾಸ್ತ್ರಜ್ಞರು, ಪಂಡಿತರು, ಪಾಮರರು, ಸ್ತ್ರೀಯರು, ರಾಜರು, ವಿವಿಧ ವೃತ್ತಿಯವರು ಕಲ್ಯಾಣಕ್ಕೆ ಬಂದು ಬಸವಣ್ಣನವರ ಶಿಷ್ಯರಾದರು. ಪೂಜೆ, ಪುನಸ್ಕಾರ, ನೇಮ, ನಿಷ್ಠೆ, ತೀರ್ಥಯಾತ್ರೆ, ಸ್ನಾನಾದಿಗಳು, ಹೊರಗಿನ ಡಂಭಾಚಾರಗಳು, ಇವೆಲ್ಲ ಲೋಕದ ಕಣ್ಣಿಗೆ ಮಣ್ಣೆರಚುವ ಸಾಧನಗಳು. ಇವುಗಳಿಂದ ಸತ್ಯದ ಸ್ವರೂಪ ತಿಳಿಯುವುದು ಸಾಧ್ಯವಿಲ್ಲವೆಂದು ಬೋಧಿಸಿದ ಬಸವಣ್ಣನವರು ವೇದಗಳ ಕರ್ಮಕಾಂಡವನ್ನು ಖಂಡಿಸಿದರು. ಸಾಧಕರು, ಸಿದ್ಧರು, ಭಕ್ತರು, ಮುಕ್ತರು ಗೋಷ್ಠಿಗಳಲ್ಲಿ ಭಾಗ ವಹಿಸುತ್ತಿದ್ದರು. ಈ ಅನುಭವ ಮಂಟಪದ ಆಧ್ಯಾತ್ಮಿಕ ಶುದ್ಧ ಸಿದ್ಧಾಂತಗಳನ್ನು ಅವರು ಸಾರಿ ಜನರಲ್ಲಿ ಹೊಸ ನಿಷ್ಠೆ, ಶ್ರದ್ಧೆ, ಧೈರ್ಯಗಳನ್ನು ಹುಟ್ಟಿಸಿದರು. ಈ ಮಂಟಪ ವ್ಯಾಸಂಗ ಗೋಷ್ಠಿ ಮಾತ್ರವೇ ಅಲ್ಲ, ಸಮತೆ, ಸ್ತ್ರೀಸ್ವಾತಂತ್ರ್ಯ, ಸಹಭೋಜನ, ಅಂತರ್ವಿವಾಹ ಮುಂತಾದ ಸುಧಾರಣೆಗಳನ್ನು ಎತ್ತಿಹಿಡಿಯಿತು. ದೇವನೊಬ್ಬ ನಾಮ ಹಲವು, ದಯೆಯು ಧರ್ಮದ ಮೂಲ, ಕಾಯಕವೇ ಕೈಲಾಸ ಮುಂತಾದ ವಿಶ್ವಧರ್ಮದ ತಳಹದಿಯಾದ ತತ್ತ್ವಗಳನ್ನು ಈ ಮಂಟಪ ನೀಡಿತು. ಬಸವಣ್ಣನವರು ಉಪನಿಷತ್ತಿನ ದಿವ್ಯವಾಣಿಗೆ ಮನಸ್ಸುಕೊಟ್ಟು, ಪ್ರಚಾರ ಮಾಡಿದ ವೀರಶೈವ ಧರ್ಮದ ಸುಲಭವಾದ ಬೋಧೆ ಹಾಗೂ ಆಚರಣೆ

ವಿಶ್ವಧರ್ಮವಾಗುವಷ್ಟು ಪ್ರಭಾವ ಹೊಂದಿ ಜನಪ್ರಿಯವಾಯಿತು. ಅನೇಕ ಶರಣರು, ಶಿವಭಕ್ತರು ತಮ್ಮ ಗುಣ, ಬುದ್ಧಿಯನ್ನೆಲ್ಲ ಭಗವಂತನಿಗೆ ಅರ್ಪಿಸಿ ಅವರ ಬೋಧೆ, ಸಾಧನೆಗಳಿಂದ ಉತ್ಸಾಹಗೊಂಡು ಸತ್ಯದ ಬೆಳಕನ್ನು ಕಂಡುಕೊಂಡರು. ಬಸವಣ್ಣನವರು ಮಂಟಪದ ಜ್ಯೋತಿಯಾದರೆ, ವೀರಶೈವ ಧರ್ಮಕ್ಕೆ ಮೂರ್ತ ಸ್ವರೂಪ ಕೊಟ್ಟ ಅಲ್ಲಮಪ್ರಭು ಆ ಜ್ಯೋತಿಯ ಪ್ರಭೆ. ಮಂಟಪದ ಮೇಲ್ವಿಚಾರಣೆಯನ್ನೆಲ್ಲ ಚೆನ್ನಬಸವಣ್ಣ ನಡೆಸುತ್ತಿದ್ದರು. ಅನುಭವ ಮಂಟಪದ ತ್ರಿಮೂರ್ತಿಗಳಾದ ಈ ಮೂವರೂ ಇದರ ಯಶಸ್ಸಿಗೆ ಕಾರಣರಾದರು. ಲೋಕವನ್ನೇ ಶರಣರ ಅನುಭವ ಮಂಟಪವನ್ನಾಗಿ ಮಾಡಲು ಬಸವಣ್ಣನವರು ತ್ರಿಕರಣಪೂರ್ವಕವಾಗಿ ಶ್ರಮಿಸಿದರು.

ಅನುಭವ ಮಂಟಪದ ಅರಳಿದ ಸುಂದರ ಪುಷ್ಪದಂತಿದ್ದ ಅಕ್ಕಮಹಾದೇವಿ ವಿರಕ್ತಿಯಿಂದ ಬ್ರಹ್ಮಚಾರಿಣಿಯಾಗಿ, ಸ್ತ್ರೀಜಾತಿಗೇ ಆದರ್ಶಳಾಗಿ ಆಧ್ಯಾತ್ಮಿಕ ಗೋಷ್ಠಿಗಳಲ್ಲಿ ಭಾಗವಹಿಸುತ್ತಾ ತನ್ನ ನಡೆ ನುಡಿ ಗುಣ ಶೀಲತೆ, ದೈವ ಭಕ್ತಿ ಹಾಗೂ ವಿಚಾರಶಕ್ತಿಯಿಂದ ಬಸವಣ್ಣನವರ ಮೆಚ್ಚುಗೆ ಸಂಪಾದಿಸಿದಳು. ಈ ಅನುಭವ ಮಂಟಪದಿಂದ ವಚನ ಸಾಹಿತ್ಯ ವಿಪುಲವಾಗಿ ಸೃಷ್ಟಿಯಾಗಿ ಅನೇಕ ವಚನಕಾರರು ಬೆಳಕಿಗೆ ಬಂದು ಕನ್ನಡ ಭಾಷೆ ಉದ್ಧಾರವಾಯಿತು. ಶರಣರಿಂದ ಗೀತಸಾಹಿತ್ಯ, ವಚನಸಾಹಿತ್ಯ ಬರೆಯಲ್ಪಟ್ಟಿತು. ಮಂಟಪದಲ್ಲಿ ನಡೆಯುತ್ತಿದ್ದ ತತ್ತ್ವಗೋಷ್ಠಿ, ಸಾಹಿತ್ಯ ಗೋಷ್ಠಿಗಳಿಂದ ಅನೇಕ ಸಾಹಿತಿಗಳು ಪ್ರೋತ್ಸಾಹಗೊಂಡರು. ಗೋಷ್ಠಿಗಳನ್ನು ಆಗಾಗ್ಯೆ ನಡೆಸಲು, ತತ್ತ್ವಗಳನ್ನು ಕಾಲಕಾಲಕ್ಕೆ ಪ್ರಚಾರಮಾಡಲು ಬಸವಣ್ಣನವರು ಅನುಭವ ಮಂಟಪಕ್ಕೆ ಅಧ್ಯಕ್ಷ ಪೀಠವನ್ನು ನಿರ್ಮಿಸಿದರು. ಅವರು ಆಧ್ಯಾತ್ಮಿಕ ಸಾಧನೆಯನ್ನು ಮುಖ್ಯ ಗುರಿಯನ್ನಾಗಿಟ್ಟುಕೊಂಡರೂ ಲೌಕಿಕವನ್ನು ತ್ಯಜಿಸಲಿಲ್ಲ. ಲೌಕಿಕದ ಸಮಸ್ಯೆಗಳನ್ನೆದುರಿಸುತ್ತಾ ಅನೇಕ ಕಷ್ಟ ನಷ್ಟಗಳನ್ನು ಅನುಭವಿಸಿದರು.

ಆತ್ಮಜ್ಯೋತಿ ಬೆಳಗುತ್ತಿದ್ದ ಅನುಭವ ಮಂಟಪ ಜೀವಿಗಳಿಗೆಲ್ಲ ಕ್ಷೇಮವನ್ನೇ ಹಾರೈಸಿ ಶಿವಾಚಾರದ ಧ್ವಜವನ್ನೆತ್ತಿ ಹಿಡಿಯಿತು. ಬಸವಣ್ಣನವರ ಪಾಲಿಗೆ ಕೈಲಾಸವಾಗಿದ್ದ ಕಲ್ಯಾಣ ರಾಜಕೀಯ ಘರ್ಷಣೆಯಿಂದ ಯುದ್ಧರಂಗವಾಗಿ ಪರಿಣಮಿಸಿತು. ಅವರು ಕೈಯ್ಯಾರ ನಿರ್ಮಿಸಿದ್ದ ಕಲ್ಯಾಣ ಮಂಟಪ ಕ್ರಾಂತಿಯಿಂದ ನಾಶವಾಯಿತು. ಮೂವತ್ತಾರನೆಯ ವಯಸ್ಸಿನಲ್ಲಿ ಅವರು ಕಲ್ಯಾಣ

ಬಿಟ್ಟು ಕೂಡಲ ಸಂಗಮಕ್ಕೆ ಬಂದು ಸಂಗಯ್ಯನಲ್ಲಿ ಐಕ್ಯರಾದರು. ಲಿಂಗದಲ್ಲಿ ಅವರು ಸಮರಸರಾದರು. ಆ ದಿವ್ಯಜ್ಯೋತಿ ನಂದಿತಾದರೂ ಅದರ ಪ್ರಕಾಶ ಇಂದಿಗೂ ಜನತೆಗೆ ಬೆಳಕು ನೀಡುತ್ತಿದೆ.

ಬಸವಣ್ಣನವರು ನೀಡಿದ ಸಂದೇಶ ಮಾನವನಿಗೆ ಸ್ಫೂರ್ತಿ ನೀಡುವುದರಲ್ಲಿ ಸಂದೇಹವಿಲ್ಲ. ಸತ್ಯ ಶುದ್ಧ ಕಾಯಕದಿಂದ ಕೈಲಾಸವನ್ನು ಭಕ್ತ ಭೂಮಿಯ ಮೇಲೆ ಕಾಣುವುದು ಸಾಧ್ಯ ಎನ್ನುವುದಕ್ಕೆ ಅವರ ಬದುಕೇ ನಿದರ್ಶನವಾಗಿದೆ. ಶಿವಭಕ್ತರನ್ನು, ಶರಣರನ್ನು ಶಿವನೆಂದೇ ತಿಳಿದು ಅವರು ನೀಡಿದ ಸಂದೇಶದಲ್ಲಿ ಭಾರತೀಯ ವ್ಯಕ್ತಿತ್ವ ಸ್ಪಷ್ಟವಾಗಿ ಕಾಣುತ್ತದೆ. ಪ್ರೇಮ, ಸದ್ಗುಣಗಳನ್ನು ಬೆಳೆಸಿ ಸತ್ಯವನ್ನು ಸಂಪಾದಿಸಿ, ಕಾಮಕ್ರೋಧಾದಿಗಳನ್ನು ನಿಗ್ರಹಿಸಿ ವಿನಯ ಭಾವದಿಂದ ನಡೆದುಕೊಳ್ಳುವಂತೆ ಅವರು ಭಕ್ತರಿಗೆ ಬೋಧಿಸಿದರು. ಗುರು-ಲಿಂಗ-ಜಂಗಮರನ್ನು ತನು ಮನ ಧನಗಳಿಂದ ಆರಾಧಿಸಿದರೆ ಭಕ್ತಿ ಸಫಲವಾಗುವುದು. ಅಂತರಂಗ, ಬಹಿರಂಗ ಶುಚಿತ್ವದಿಂದ, ಛಲದಿಂದ ಭಕ್ತ ಕೆಲಸಮಾಡಿದರೆ ಅವನ ಪ್ರೀತಿ ಸಂಪಾದಿಸಲು ಸಾಧ್ಯ. ಭಾವಪೂರ್ಣತೆಯಿಂದ, ಆನಂದ ಒಲವು ತದೇಕಚಿತ್ತದಿಂದ, ಭಕ್ತ ಪೂಜಾಧ್ಯಾನ ಮಾಡಿದರೆ ಭಗವಂತನ ದಿವ್ಯಸ್ವರೂಪ ಕಾಣಲು ಸಾಧ್ಯ. ಭಗವಂತನಲ್ಲಿ ಒಂದಾಗಿ, ಬ್ರಹ್ಮಾನಂದವನ್ನು ಪಡೆದ ಶರಣ ಜೀವನ್ಮುಕ್ತ. ಶಿವಭಕ್ತರೆಲ್ಲಾ ಸಮಾನರು. ಅವರಲ್ಲಿ ವರ್ಣ, ಜಾತಿ ಹಾಗೂ ಲಿಂಗಭೇದವಿಲ್ಲ. ಭಕ್ತನ ನುಡಿಗಲ್ಲದೆ ಆತನ ಹೃದಯದ ಕಡೆಗೆ ಶಿವ ಹೆಚ್ಚಿನ ಗಮನ ಕೊಡುತ್ತಾನೆ ಎನ್ನುವ ಮಹಾತತ್ತ್ವವನ್ನು ಅವರು ಪ್ರತಿಪಾದಿಸಿದರು.

ಸಮಾಜದಲ್ಲಿ ಶಿವಭಕ್ತರು ಪ್ರೇಮದಿಂದ, ಸಮಾನತೆಯಿಂದ, ಸಹಕಾರದಿಂದ, ಮಹಾಪ್ರಾಮಾಣಿಕತೆಯಿಂದ ಬಾಳಬೇಕೆಂದು ಬಸವಣ್ಣನವರು ಉಪದೇಶಿಸಿದರು. ಮೋಸ, ದುರ್ವ್ಯಾಪಾರ, ಆತ್ಮವಂಚನೆ, ಲೋಕವಂಚನೆ, ಪರರ ನಿಂದನೆಗಳಿಂದ ದೂರವಾಗಿರಬೇಕು. ಶಿವಭಕ್ತರ ಸುಖವೇ ನನ್ನ ಸುಖ, ಅವರ ದುಃಖವೇ ನನ್ನ ದುಃಖ ಎನ್ನುವ ಮನೋಭಾವದಿಂದ ಎಲ್ಲ ವ್ಯಕ್ತಿಗಳೂ ನಡೆಯಬೇಕು. ನಿಶ್ಚಲತೆಯಿಲ್ಲದೆ ಲಿಂಗ ಪೂಜಿಸುವ, ಪರರನ್ನು ದೇವರ ಹೆಸರಿನಲ್ಲಿ ಸುಲಿಗೆ ಮಾಡುವ, ಅಹಂಕಾರದಿಂದ ಮೆರೆಯುವವರನ್ನು ಖಂಡಿಸಿದ ಬಸವೇಶ್ವರರು ಅಂಥ ಶ್ರದ್ಧೆಗಳಿಗೆ ಶಿವಭಕ್ತರು ಬೆಲೆ ಕೊಡಬಾರದೆಂದು ಎಚ್ಚರಿಸಿ

ದರು. ಧೀರ, ವೀರ ಶರಣ ಯಾರಿಗೂ ಹೆದರಬೇಕಾಗಿಲ್ಲ, ಶಿವಭಕ್ತಿಯಲ್ಲಿ ಹಿರಿಯರಾದವರೇ ಹಿರಿಯರು, ಶಿವಭಕ್ತಿಯಲ್ಲಿ ಕಿರಿಯರಾದವರು ಕಿರಿಯರು. ಅಹಿಂಸಾಯುಕ್ತವಾದ ಶಾಂತಿಮಯ ಭಕ್ತಿಮಾರ್ಗದಿಂದ ದೇವರನ್ನು ಒಲಿಸಿ ಕೊಳ್ಳಲು ಸಾಧ್ಯ ಎಂದು ಉಪದೇಶಿಸಿ ಅವರು ಕರ್ಮ, ಜ್ಞಾನಕ್ಕಿಂತ ಭಕ್ತಿಗೆ ಹೆಚ್ಚಿನ ಮಹತ್ವ ನೀಡಿದರು.

ವೀರಶೈವ ಧರ್ಮವನ್ನು ಪ್ರಚುರಗೊಳಿಸಿದ ಬಸವಣ್ಣನವರು ಧರ್ಮ ಸುಧಾರಕರಾಗಿ ಪ್ರಚಂಡ ಕ್ರಾಂತಿಯನ್ನುಂಟುಮಾಡಿದರು. ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಅನಾಚಾರದಿಂದ ಅವರು ನೊಂದುಕೊಂಡು ಜನಸಾಮಾನ್ಯರಿ ಗೆಲ್ಲ ಧಾರ್ಮಿಕ ರಂಗದಲ್ಲಿ ಅವಕಾಶ ಮಾಡಿಕೊಟ್ಟು, ಧರ್ಮದ ಹಾದಿಯನ್ನು ಸುಗಮಗೊಳಿಸಲು ಶ್ರಮಿಸಿದರು. ಧರ್ಮದೃಷ್ಟಿಯನ್ನು ವಿಶಾಲಗೊಳಿಸಿ ಅವರು ಪ್ರಚಾರಮಾಡಿದ ವೀರಶೈವ ಧರ್ಮದ ಪ್ರಭಾವಕ್ಕೆ ಅನೇಕರು ಒಳಗಾದರು. ಮಾನವನ ಬಾಳಿನಲ್ಲಿ ಧರ್ಮ, ನೀತಿ, ತತ್ತ್ವಗಳ ಸಮನ್ವಯವಿರಬೇಕೆಂದು ಅವರು ಹೇಳಿದ್ದಲ್ಲದೆ ತಮ್ಮ ಜೀವಿತಕಾಲದಲ್ಲೇ ಅದನ್ನು ಸಾಧಿಸಿದರು. ಧರ್ಮವೇ ಲಿಂಗ, ನೀತಿಯೇ ಪ್ರಾಣ, ತತ್ತ್ವವೇ ಆತ್ಮವೆಂದು ಸಿದ್ಧಾಂತಪಡಿಸಿ ದರು. ಧರ್ಮ, ನೀತಿ, ತತ್ತ್ವಗಳನ್ನು ಜೀವಂತಗೊಳಿಸಿ ಈ ಮೂರು ಕ್ಷೇತ್ರಗಳ ಲ್ಲಿದ್ದ ಅನೇಕ ಸಮಸ್ಯೆಗಳಿಗೆ ಪರಿಹಾರ ಸೂಚಿಸಿದ ಬಸವಣ್ಣನವರು ಮಾನ ವೀಯ ಧರ್ಮವೇ ದೈವೀಧರ್ಮವೆಂದು ಸಾರಿದರು. ಅಂಧಶ್ರದ್ಧೆ, ಸ್ವಾರ್ಥ, ಸಂಕುಚಿತ ಮನೋಭಾವವನ್ನು ತ್ಯಜಿಸಿದ ಮಾನವ, ಶುದ್ಧ ನಡೆನುಡಿ, ಹೃದಯ, ಬುದ್ಧಿ, ಆತ್ಮಗಳ ಏಕನಿಷ್ಠೆಯಿಂದ ಪರಮಾತ್ಮನ ಅನುಗ್ರಹ ಪಡೆಯಲು ಸಾಧ್ಯ ಎಂದು ಅವರು ಉಪದೇಶಿಸಿದರು. ಅವರ ದೃಷ್ಟಿಯಲ್ಲಿ ಧರ್ಮ ಸಿದ್ಧಾಂತವೆಂದರೆ ಶಿವಾಚಾರ ಅಥವಾ ನಿಜಾಚಾರ.

ಶಿವನನ್ನು ನೆನೆಯುವುದು ಮಾನಸಿಕ ಧರ್ಮ, ಶಿವನಾಮಾಮೃತವನ್ನು ಸವಿಯುವುದು ವಾಚಕಧರ್ಮ, ಸತ್ಯಶುದ್ಧವಾದ ಕಾರ್ಯಚಟುವಟಿಕೆಗಳಲ್ಲಿ ಭಾಗವಹಿಸುವುದು ಕಾಯಿಕ ಧರ್ಮ. ಧ್ಯಾನ, ಅರ್ಚನೆ, ಭಕ್ತಿಗಳಿಂದ ಚಂಚಲ ಮನಸ್ಸನ್ನು ಹಿಡಿತದಲ್ಲಿಟ್ಟುಕೊಳ್ಳುವುದು ಸಾಧ್ಯ. ಧರ್ಮಾಚರಣೆ ನಿಜಾ ಚರಣೆಯಾಗಬೇಕೆ ಹೊರತು ಡಂಭಾಚಾರವಾಗಬಾರದು. ಆಚಾರವನ್ನು ಶಿವಾಚಾರವನ್ನಾಗಿ ಮಾಡುವುದೇ ಧರ್ಮದ ಗುರಿ. ಒಳ್ಳೆಯದನ್ನು ಸಕಲರಿಗೂ

ಬಯಸುವುದು ಧರ್ಮ, ಬಯಸುವವನು ಧರ್ಮಿ. ಇದು ಬಸವಣ್ಣನವರು ಬೋಧಿಸಿದ ವಿಶಾಲ ಮನೋಭಾವದ ಧರ್ಮ ಸಿದ್ಧಾಂತ. ಅವರು ಬೋಧಿಸಿದ ಧರ್ಮದಲ್ಲಿ ಸರ್ವಧರ್ಮ ಸಮನ್ವಯವಿದೆ. ದಾನ, ಸತ್ಯ, ದಯೆ, ಸತ್ಕಾರ್ಯ, ಸಮಾನತೆ ಮುಂತಾದ ತತ್ತ್ವಗಳನ್ನೊಳಗೊಂಡಿದೆ. ಧರ್ಮವೇ ಜಗತ್ತಿನ ಆಧಾರ, ಜೀವನದ ಜೀವಾಳ, ಧರ್ಮಾಚಾರವೇ ದೇವಧರ್ಮ ಎಂದು ಅವರು ಜಗತ್ತಿಗೇ ಸಂದೇಶ ನೀಡಿದರು.

ಧರ್ಮಸಂಸ್ಥಾಪಕರೂ, ಶ್ರೇಷ್ಠ ಧರ್ಮಬೋಧಕರೂ ಆದ ಬಸವಣ್ಣನವರು ಜಾತಿ ಕುಲಭೇದವಿಲ್ಲದೆ ಎಲ್ಲರೂ ಶಾಂತಿ ಸೌಹಾರ್ದಗಳಿಂದ ಒಂದುಗೂಡಿ ಬಾಳುವುದೇ ನಿಜಧರ್ಮ, ಸಹಜಧರ್ಮ ಎಂದು ಸಾರಿದರು. ವಿಶ್ವಕ್ಕೆ ಮೆಚ್ಚಿಗೆಯಾಗುವಂತಹ ವಿಶ್ವಧರ್ಮವನ್ನು ಅವರು ಸಾಧಿಸಿದರು, ಬೋಧಿಸಿದರು. ಮಾನವ ತನುಮನಕ್ಕೆ ದಾಸನಾಗದೆ ಆತ್ಮಸ್ವಾತಂತ್ರ್ಯದಿಂದ ದೇವಧರ್ಮಾಚರಣೆಯಿಂದ ವಿಶ್ವಕಲ್ಯಾಣಕ್ಕಾಗಿ ದುಡಿಯುವುದೇ ಧರ್ಮ, ಅದೇ ಬದುಕಿನ ಭಂಡಾರ ಎಂದು ಅವರು ಉಪದೇಶಿಸಿದರು. ಧರ್ಮದ ಉಸಿರಾದ ನ್ಯಾಯಮಾರ್ಗದಲ್ಲಿ ನಡೆದ ಮಾನವ ನಿಸ್ಸಂದೇಹವಾಗಿ ಮಹಾನುಭಾವನಾಗುತ್ತಾನೆ ಎಂದು ಸಂದೇಶ ನೀಡಿದ ಬಸವಣ್ಣನವರು ನ್ಯಾಯಕ್ಕೆ, ನೀತಿಗೆ ತುಂಬ ಗೌರವ ಕೊಟ್ಟರು. ಧರ್ಮದ ತಳಹದಿ ನಿಷ್ಠೆ ಎಂದು ಅವರು ಜನತೆಗೆ ತೋರಿಸಿಕೊಟ್ಟರು. ಧರ್ಮದ ನಿಜಸ್ವರೂಪದ ಬೆಳಕಿನಲ್ಲಿ ಸಾಮಾಜಿಕ ಜೀವನವನ್ನು ಹಸನುಗೊಳಿಸಿದ ಈ ಮಹಾವ್ಯಕ್ತಿ ಧರ್ಮದ ತೇಜಸ್ಸು ಪ್ರಕಾಶಮಾನವಾಗಿ ಬೆಳಗುವುದಕ್ಕೆ ಕಾರಣಪುರುಷರಾದರು. ಅವರು ಕರ್ಮಯೋಗಿಯಾಗಿ ಧರ್ಮಪ್ರಚಾರಮಾಡಿ ಜೀವಕೋಟಿಯ ಉದ್ಧಾರಮಾಡಿದರು.

ಸಮನ್ವಯ ಸಿದ್ಧಾಂತದ ಆಚಾರ್ಯಪುರುಷರಾದ ಬಸವೇಶ್ವರರು ಸಕಲ ಧರ್ಮಗಳ ಸಾರವನ್ನು ವೀರಶೈವ ಧರ್ಮದಲ್ಲಿ ಸಂಗ್ರಹಿಸಿಟ್ಟರು. ಅವರ ಮಾರ್ಗದರ್ಶನದಲ್ಲಿ ಕನ್ನಡನಾಡಿನಲ್ಲಿ ವೀರಶೈವಧರ್ಮ ಪುನರುದ್ಧಾರವಾಯಿತು. ಸನಾತನ ವೀರಶೈವ ಧರ್ಮವನ್ನು ಅವರು ವಿಶ್ವ ಧರ್ಮವನ್ನಾಗಿ ಮಾಡಿದರು. ಧಾರ್ಮಿಕ ಕ್ಷೇತ್ರದಲ್ಲಿ ಏಕದೇವತೋಪಾಸನೆಯನ್ನು ಸ್ಥಾಪಿಸಲು ಪ್ರಯತ್ನಿಸಿ, ಧರ್ಮಪ್ರಚಾರಕರಾಗಿ ನಾಡಿಗೆ ಸೇವೆ ಸಲ್ಲಿಸಿದ ಅವರ ಕಾರ್ಯ ಚಟುವಟಿಕೆ ಕೇವಲ ಧರ್ಮರಂಗಕ್ಕೇ ಮೀಸಲಾಗಿರಲಿಲ್ಲ. ಸಮಾಜದ ಲೋಪದೋಷ

ಗಳನ್ನು ತಿದ್ದಿ ಜನತೆಯ ಹಿತಾಸಕ್ತಿಯನ್ನು ಸಾಧಿಸಲು ಅವರು ಅನೇಕ ಸಮಾಜ ಸುಧಾರಣೆಗಳನ್ನು ಕೈಗೊಂಡರು.

ಸಮಾಜ ಸುಧಾರಕರಾಗಿ ಬಸವಣ್ಣನವರ ಸ್ಥಾನ ಅತ್ಯುನ್ನತವಾಗಿದೆ. ಧಾರ್ಮಿಕ, ಸಾಮಾಜಿಕ ಮತ್ತು ಆರ್ಥಿಕ ಸ್ವಾತಂತ್ರ್ಯಕ್ಕಾಗಿ ಅವರು ಹೋರಾಡಿ ಸಮಾನತೆಯ ತಳಹದಿಯ ಮೇಲೆ ನವ ಸಮಾಜವನ್ನು ಸೃಷ್ಟಿಸಲು ಪ್ರಯತ್ನಿಸಿದರು. ಜಗಳ ಹಾಗೂ ಮನಸ್ತಾಪಕ್ಕೆ ಮೂಲವಾದ ವರ್ಣಾಶ್ರಮ ಪದ್ಧತಿಯನ್ನು ಅವರು ತಿರಸ್ಕರಿಸಿ ಸಮಾಜದಲ್ಲಿದ್ದ ಅಸ್ಪೃಶ್ಯರು, ಹಿಂದುಳಿ ದವರು, ಬಡವರು, ಸ್ತ್ರೀಯರನ್ನು ಮುಂದಕ್ಕೆ ತರಲು ಶ್ರಮಿಸಿದರು. ಅವರ ಸಾಮಾಜಿಕ ವ್ಯವಸ್ಥೆಯಲ್ಲಿ ವರ್ಣಭೇದ, ಲಿಂಗಭೇದ, ಜಾತಿಭೇದಗಳಿರಲಿಲ್ಲ. ಅಹಿಂಸಾತತ್ತ್ವವನ್ನು ಪ್ರತಿಪಾದಿಸಿ ಹಿಂಸೆಗೆ ಮೂಲವಾದ ಅಷ್ಟ ಮದ ಗಳನ್ನೂ ತ್ಯಜಿಸುವಂತೆ ಜನತೆಯಲ್ಲಿ ಮನವಿಮಾಡಿಕೊಂಡ ಅಹಿಂಸಾಮೂರ್ತಿ ಬಸವಣ್ಣನವರು ಉಜ್ವಲವಾದ ಶಿಸ್ತು, ಸಂಯಮ, ಶಾಂತಿ, ಸತ್ಯವ್ರತ ಗಳನ್ನು ಆಚರಿಸುತ್ತಿದ್ದರು. ಅವರು ಸಾಮಾನ್ಯ ಜನರನ್ನು ಆಕರ್ಷಿಸುವಂತಹ ಸರಳ ತತ್ತ್ವಗಳನ್ನು ಪ್ರತಿಪಾದಿಸಿ, ತಮ್ಮ ಭಕ್ತಿಪ್ರಭಾವದಿಂದ ಮಹತ್ಕಾರ್ಯ ಸಾಧಿಸಿ, ಸಮಾಜ ಸುಧಾರಕರಾಗಿ ಸಮಾಜದಲ್ಲಿ ಬೇರೂರಿದ್ದ ದುಷ್ಟ ಆಚರಣೆಗಳನ್ನು ಖಂಡಿಸಿದರು. ಅಹಂಕಾರದಿಂದ ಸತ್ಯ, ದಯೆ, ಸದ್ಗುಣಗಳನ್ನು ಮರೆತು ಮೆರೆಯುತ್ತಿದ್ದ ಹಣವಂತರನ್ನು ಅವರು ತರಾಟೆಗೆ ತೆಗೆದುಕೊಂಡರು. ಜನರ ಸುಖದುಃಖಗಳಲ್ಲಿ ಭಾಗಿಯಾಗಿ ಅವರಲ್ಲಿ ನೂತನ ಉತ್ಸಾಹ ಮತ್ತು ಚೈತನ್ಯವನ್ನು ತುಂಬಿದ ಬಸವಣ್ಣನವರು ಬಡವರ ಬಂಧುವಾಗಿದ್ದರು. ಜನ ಸೇವೆಯೇ ಅವರ ಜೀವನದ ಉಸಿರಾಗಿತ್ತು.

ಸಮಾಜ ಸುಧಾರಕರಾಗಿ ಬಸವಣ್ಣನವರು ಹೊಸ ಸಾಮಾಜಿಕ ಮೌಲ್ಯ ಗಳನ್ನು ನೀಡಿ, ಅರ್ಥವಿಲ್ಲದ ಆಚಾರಗಳನ್ನು ತಿರಸ್ಕರಿಸಿ ಶ್ರೇಷ್ಠ, ಕನಿಷ್ಠ, ಸ್ಪೃಶ್ಯ, ಅಸ್ಪೃಶ್ಯ ಭಾವನೆಗಳನ್ನು ಸಂಪೂರ್ಣವಾಗಿ ಮನಸ್ಸಿನಿಂದ ತೊಡೆದು ಹಾಕಬೇಕೆಂದರು. ಬಡವರ ಪಕ್ಷಪಾತಿಯಾದ ಅವರು ಅಸ್ಪೃಶ್ಯರಿಗೆ ಸಮಾಜ ದಲ್ಲಿ ಸ್ಥಾನ, ಮಾನ, ಗೌರವ, ಆತ್ಮವಿಶ್ವಾಸಗಳನ್ನು ಗಳಿಸಿಕೊಟ್ಟರು. ಪತಿತೆ ಯರ ಹಾದರತನವನ್ನು ಖಂಡಿಸಿ ಸರಿಯಾದ ರೀತಿಯಲ್ಲಿ ಜೀವನ ನಡೆಸುವಂತೆ ಅವರಿಗೆ ಮಾರ್ಗದರ್ಶಿಯಾದರು. ಜನಸೇವೆಯೇ ದೇವರ ಸೇವೆ ಎನ್ನುವುದು

ಅವರ ಸ್ಪಷ್ಟ ಅಭಿಪ್ರಾಯವಾಗಿತ್ತು. ಗುಣ, ಶೀಲ, ಯೋಗ್ಯತೆ, ಹಣ, ಅಧಿಕಾರಗಳನ್ನೇ ಆಧಾರವಾಗಿಟ್ಟುಕೊಂಡು ಅವರು ಹಿರಿಕಿರಿಯರೆಂದು ಬೇರ್ಪಡಿಸಲಿಲ್ಲ. ಭಕ್ತ ಶಿವಜೀವಿ. ವ್ಯಕ್ತಿಗಳನ್ನು ಕುಲ, ಗೋತ್ರ, ವರ್ಣಾದಿಗಳಿಂದ ಭೇದಮಾಡಿದರೆ ದೇವರಲ್ಲೇ ಪಕ್ಷಪಾತ ತೋರಿಸಿದಂತೆ. ಶಿವಭಕ್ತರೆಲ್ಲಾ ಸಮಾನರು. ಹುಟ್ಟಿನಿಂದಲೇ ಮೇಲು ಕೀಳೆಂದು ಭೇದಮಾಡುವುದು ತಪ್ಪೆಂದ ಬಸವಣ್ಣನವರು ವ್ಯಕ್ತಿಯ ಶೀಲಕ್ಕೆ, ನುಡಿಗಿಂತ ನಡೆಗೆ, ಬುದ್ಧಿಗಿಂತ ಭಾವಕ್ಕೆ, ಅನುಭಾವಕ್ಕೆ ಹೆಚ್ಚಿನ ಮಹತ್ವ ಕೊಟ್ಟರು. ಸಮಾಜದಲ್ಲಿ ಸಕಲರೂ ಸಮಾನತೆಯಿಂದ ಬಾಳಬೇಕೆಂಬ ದಿವ್ಯ ಸಂದೇಶವನ್ನು ಅವರು ಜಗತ್ತಿಗೇ ನೀಡಿದರು. ಸಮತೆಯ ತತ್ತ್ವದೊಂದಿಗೆ ಸ್ವಾತಂತ್ರ್ಯತತ್ತ್ವವನ್ನೂ ಅವರು ಸಾರಿದರು. ಸಮಾಜದ ವ್ಯಕ್ತಿಗಳು ಸತ್ಯ, ಸಂಯಮ, ಸಮತೆ, ಅನುರಾಗ ಮತ್ತು ಒಡನಾಟದಿಂದಿದ್ದರೆ ಅವರೇ ಶಿವಭಕ್ತರು ಎಂದು ಹೇಳಿ ಬಸವಣ್ಣನವರು ಸಮಾಜದ ಅರ್ಧ ಅಂಗವಾದ ಮಹಿಳಾವರ್ಗಕ್ಕೂ ಸಮಾನ ಸ್ಥಾನಮಾನಗಳನ್ನು ಕಲ್ಪಿಸಿಕೊಟ್ಟರು.

ಆತ್ಮದ ಮಹಿಮೆಯನ್ನು ಜನತೆಗೆ ಎತ್ತಿ ತೋರಿಸಿದ ಬಸವೇಶ್ವರರು ಸ್ತ್ರೀ ಪುರುಷರೆಲ್ಲರಲ್ಲೂ ಶಿವಾಂಶವಾದ 'ಆತ್ಮ' ಇರುವುದರಿಂದ ಯಾರೂ ಮೇಲಲ್ಲ, ಯಾರೂ ಕೀಳಲ್ಲ ಎಂದು ಉಪದೇಶಿಸಿದರು. ಅವರು ಸರಳವಾದ ಭಕ್ತಿಮಾರ್ಗಗಳನ್ನು ಜನರಿಗೆ ಬೋಧಿಸಿ ಸೇವಾಭಾವನೆಯಿಂದ ದುಡಿದು, ಸಮಾಜದಲ್ಲಿದ್ದ ಅಶಾಂತಿಯ ಮೂಲವನ್ನೇ ತೊಡೆದುಹಾಕಲು ಪ್ರಯತ್ನಿಸಿದರು. ಅವರ ಕಾರ್ಯಚಟುವಟಿಕೆಗಳ ಫಲವಾಗಿ ಪಾಮರರು ಪಾವನರಾದರು, ಹಿಂದುಳಿದವರು ಉದ್ಧಾರವಾದರು. ದುರಾಚಾರ, ದುರ್ನಡತೆ ಹಿಂದಕ್ಕೆ ಸರಿದು ವಿದ್ಯೆ, ಶೀಲ, ಜ್ಞಾನ, ಭಕ್ತಿ ಸಾಧಿಸಿದವರಿಗೆ ಪುರಸ್ಕಾರ ದೊರಕಿತು. ಸಮಾಜದ ಹೊಲಸನ್ನು ಅಂಜದೆ, ಅಳುಕದೆ, ಸಂಕೋಚಪಟ್ಟುಕೊಳ್ಳದೆ ತೊಳೆದ ಬಸವೇಶ್ವರರು ವಂಚಕರು, ಕೊಳಕರು, ಅಶುದ್ಧರಿಂದ ದೂರವಿರಿ ಎಂದು ಜನತೆಗೆ ಎಚ್ಚರಿಕೆ ನೀಡಿದರು. ಪರಸ್ಪರ ಗೌರವ ಸಹಕಾರದಿಂದ ನಡೆದು ವಿನಮ್ರನಾಗಿ ಸಮಾಜದ ಉನ್ನತ ನೀತಿಯನ್ನು ಪಾಲಿಸುವ ವ್ಯಕ್ತಿ ನಾಡಿನ ಸಂಸ್ಕೃತಿಯ ಏಳಿಗೆಗೆ ಕಾರಣನಾಗುತ್ತಾನೆ ಎಂದು ಘೋಷಿಸಿದರು. ಅವರು ಸೃಷ್ಟಿಸಿದ ಸಮಾಜ ವರ್ಣರಹಿತ, ವರ್ಗರಹಿತ ಮತ್ತು ದೇವಸಹಿತವಾಗಿತ್ತು.

ತಾವು ಕಲಿತ ವಿದ್ಯೆ, ಸಾಧಿಸಿದ ಸಿದ್ಧಿ ಸಮಾಜದ ಎಲ್ಲಾ ವ್ಯಕ್ತಿಗಳಿಗೂ ಲಭಿಸಿ, ತಮ್ಮಂತೆ ಸುಖಬಾಳ್ವೆ ನಡೆಸಲಿ ಎಂದು ಆಶಿಸಿದರು. ಕೆರೆ, ಕಾಲುವೆಗಳನ್ನು ನಿರ್ಮಿಸಿ ಕೃಷಿಗೆ ಪ್ರೋತ್ಸಾಹ ಕೊಟ್ಟರು ಮತ್ತು ಜನರಿಗೆ ತಿಳುವಳಿಕೆ ನೀಡಿ ಅವರಲ್ಲಿ ನೀತಿ ಜೀವನ, ಭಕ್ತಿಜೀವನದ ಹೊಳೆಯನ್ನೇ ಹರಿಸಿದರು.

ಬಸವಣ್ಣನವರ ಕಾಲದಲ್ಲಿ ಸ್ತ್ರೀಯರ ಸ್ಥಿತಿಗತಿಗಳು, ಸಮಾಜದಲ್ಲಿ ಅವರ ಸ್ಥಾನಮಾನಗಳು ತುಂಬ ಶೋಚನೀಯವಾಗಿದ್ದವು. ಸೇವೆಗೆ, ಭೋಗಕ್ಕೆ ಮಾತ್ರ ಸ್ತ್ರೀ ಎನ್ನುವ ಕೀಳು ಮನೋಭಾವ ಜನತೆಯಲ್ಲಿ ಬೇರೂರಿತ್ತು. ಮಹಾವೀರರನ್ನು, ಪಂಡಿತರನ್ನು ಹೆತ್ತು ಸಾಕಿ ಸಲಹುವ ತಾಯಿ ಲೋಕದ ದೃಷ್ಟಿಯಲ್ಲಿ ಜಂತುವಾಗಿದ್ದಳು. ಹೆಣ್ಣು ಅಬಲೆ, ಪುರುಷನ ಕೈಗೊಂಬೆ, ಅವಳಿಗೆ ಆತ್ಮವಿಲ್ಲ, ಸ್ವಾತಂತ್ರ್ಯವಿಲ್ಲ, ಮೋಕ್ಷಕ್ಕೆ ಅವಳು ಅರ್ಹಳಲ್ಲ ಎನ್ನುತ್ತಿದ್ದ ಕಾಲದಲ್ಲಿ ಬಸವಣ್ಣನವರು ಸ್ತ್ರೀಗೊಂದು ಗೌರವಯುತವಾದ ಸ್ಥಾನವನ್ನು ಸಮಾಜದಲ್ಲಿ ದೊರಕಿಸಿಕೊಟ್ಟರು.. ಸ್ತ್ರೀ ಸಮಾಜದ ಒಂದು ಪ್ರಮುಖ ಅಂಗ, ಆಕೆಗೆ ಉತ್ತಮ ಸಂಸ್ಕಾರ ಸಿಕ್ಕಬೇಕು. ಧಾರ್ಮಿಕ ವಿಧಿ ವಿಧಾನಗಳಲ್ಲಿ, ಸಾಮಾಜಿಕ ಕಾರ್ಯಕ್ಷೇತ್ರಗಳಲ್ಲಿ ಪುರುಷನಿಗಿಂತ ಸ್ತ್ರೀ ಕಡಿಮೆಯಲ್ಲ. ಸಮಾಜದ ಅಭಿವೃದ್ಧಿಗೆ ಸ್ತ್ರೀಯರ ಉದ್ಧಾರ ಅತ್ಯವಶ್ಯಕ. ಸ್ತ್ರೀ ಪುರುಷನ ಸಮಾನ, ಆದ್ದರಿಂದ ಅಧಿಕಾರ, ಸ್ವಾತಂತ್ರ್ಯ ಮತ್ತು ಸಮಾನ ಹಕ್ಕಿಗೆ ಸ್ತ್ರೀ ಯೋಗ್ಯಳು ಎಂದು ಬಸವಣ್ಣನವರು ಘೋಷಿಸಿದರು.

ಸ್ತ್ರೀಗೆ ಧಾರ್ಮಿಕ ಸ್ವಾತಂತ್ರ್ಯವನ್ನು ಬಸವಣ್ಣನವರು ನೀಡಿದರು. ಅದರ ಪರಿಣಾಮವಾಗಿ ಸ್ತ್ರೀಯರು ಶಿವದೀಕ್ಷೆ, ಲಿಂಗದೀಕ್ಷೆಗಳನ್ನು ಪಡೆದುಕೊಂಡು ತಾವೂ ಉತ್ತಮ ಶಿವಶರಣೆಯರೆಂಬುದನ್ನು ಲೋಕಕ್ಕೇ ತೋರಿಸಿಕೊಟ್ಟರು. ಸ್ತ್ರೀಯರಿಗೂ ಆಧ್ಯಾತ್ಮಿಕ ವಿಕಾಸ ಹೊಂದುವ ಹಕ್ಕಿದೆ, ಸ್ತ್ರಿ ಪ್ರತ್ಯಕ್ಷ ಪರಮಾತ್ಮ ಸ್ವರೂಪಳು ಎಂದು ಪ್ರತಿಪಾದಿಸಿ ಅವರು ಸ್ತ್ರೀಯರ ನೈತಿಕ ಆಚರಣೆಗೆ ಮಹತ್ವ ಕೊಟ್ಟರು. ಅವರ ಪ್ರೋತ್ಸಾಹದಿಂದ ಬೆಳಕಿಗೆ ಬಂದ ಶಿವ ಶರಣೆಯರಲ್ಲಿ ಅನೇಕರು ವಚನಗಳನ್ನು ಬರೆದರು. ಬಸವಣ್ಣನವರ ಶಿಷ್ಯೆ ಶಿವಶರಣೆ ಅಕ್ಕಮಹಾದೇವಿ ಗುರುಗಳನ್ನು 'ಗುರುಕಾರುಣ್ಯಾವೇದ್ಯ, ವಿಭೂತಿ ರುದ್ರಾಕ್ಷಧಾರಕ, ನಿತ್ಯ ಲಿಂಗಾರ್ಚಕ, ಗುರುಭಕ್ತಿ ಸಂಬಂಧ' ಎಂದು ಕೊಂಡಾಡಿದ್ದಾರೆ.

ವಿಶ್ವಕ್ಕೇ 'ಕಾಯಕ'ವೆಂಬ ಅಮೋಘ ಕಾಣಿಕೆಯನ್ನು ಬಸವೇಶ್ವರರು ನೀಡಿದರು. ಕಾಯಕ ಎಂದರೆ ಕೆಲಸ. ದೇಹವೇ ದೇವಾಲಯ, ಪರಮಾತ್ಮನೇ ನಿಜ ನಿಲ್ದಾಣ, ಭಕ್ತಿಯಿಂದ, ನಿಷ್ಠೆಯಿಂದ ಮಾಡುವ ಕಾಯಕ ಪರಮಾತ್ಮನ ಸೇವೆ. ಪ್ರತಿಯೊಬ್ಬರೂ ದುಡಿದು ತಿನ್ನಬೇಕು, ದೇಹಕ್ಕೆ ಕೆಲಸಕೊಡಬೇಕು. ಕೆಲಸದಲ್ಲಿ ಮೇಲು ಕೀಳೆಂಬುದಿಲ್ಲ. ಆಲಸ್ಯದಿಂದ, ಸೋಮಾರಿತನದಿಂದ, ಕಾಲ ವ್ಯರ್ಥ ಮಾಡದೆ ಸರ್ವಾರ್ಪಣ ಭಾವನೆಯಿಂದ ತನ್ನ ಪಾಲಿಗೆ ಬಂದ ಕರ್ತವ್ಯವನ್ನು ಪ್ರತಿಯೊಬ್ಬನೂ ನಿಷ್ಠೆಯಿಂದ ಮಾಡಬೇಕು ಎಂದು ಉಪದೇಶಿಸಿ ಅವರು ಕಾಯಕ ತತ್ತ್ವವನ್ನು ಯಶಸ್ವಿಯಾಗಿ ಪ್ರಯೋಗಿಸಿದರು.

ಬಸವಣ್ಣನವರು ಪ್ರತಿಪಾದಿಸಿದ ಕಾಯಕ ತತ್ತ್ವ ಸಮಾಜದ ಪ್ರತಿಯೊಬ್ಬನನ್ನೂ ಸ್ವಇಚ್ಛೆಯಿಂದ ಕೆಲಸಮಾಡುವಂತೆ ಪ್ರೇರೇಪಿಸಿತಲ್ಲದೆ, ಆರ್ಥಿಕ ಅಭಿವೃದ್ಧಿ, ದೈವೀ ಜೀವನ ಪಥದ ಮುನ್ನಡೆ ಮತ್ತು ಆಧ್ಯಾತ್ಮ ಸಾಧನೆಗೆ ಕಾರಣವಾಯಿತು. ಈ ತತ್ತ್ವ ವ್ಯಕ್ತಿಯ ದೈಹಿಕ, ನೈತಿಕ ಹಾಗೂ ಮಾನಸಿಕ ವಿಕಾಸವನ್ನು ರೂಢಿಸಿತು. ಕಾಯಕವೇ ಕೈಲಾಸ, ದೇವಸ್ಥಾನ- ಅದನ್ನು ಬಿಟ್ಟು ಬೇರೆ ನರಕ ಸ್ವರ್ಗವಿಲ್ಲ ಎಂದು ಸಂದೇಶ ನೀಡಿ ಅವರು ಕಾಯಕಕ್ಕೆ ಮಹತ್ವ ಕೊಟ್ಟು ಕೈಲಾಸವನ್ನೇ ಭೂಮಿಯ ಮೇಲೆ ನಿರ್ಮಾಣ ಮಾಡಿದರು. ಕಾಯಕವೆಂದರೆ ಅವರ ದೃಷ್ಟಿಯಲ್ಲಿ ದೈಹಿಕ ಶ್ರಮ ಎಂಬ ಅರ್ಥ ಮಾತ್ರವೇ ಆಗಿರಲಿಲ್ಲ. ಅದು ವ್ಯಕ್ತಿಯ ಆಧ್ಯಾತ್ಮಿಕ ಸಾಧನೆಯ ಸಾಧನವಾಗಬೇಕು ಎಂದು ಅಭಿಪ್ರಾಯಪಟ್ಟ ಬಸವಣ್ಣನವರು ಕಾಯಕದ ಮೂಲಕ ನಿಷ್ಠೆ, ಪ್ರೇಮ, ದೈವೀಸ್ವರೂಪದ ದರ್ಶನ ಪಡೆದುಕೊಂಡ ಮಹಾಪುರುಷರು.

'ದೇವನೊಬ್ಬ, ನಾಮ ಹಲವು. ಪರಮ ಪತಿವ್ರತೆಗೆ ಗಂಡನೊಬ್ಬ ಕಾಣಿರೋ' ಎಂದು ಬಸವೇಶ್ವರರು ವಚನದಲ್ಲಿ ಹೇಳಿದ್ದಾರೆ. ಸಾಧಕ ಒಳಗೂ ಹೊರಗೂ ಪರಿಶುದ್ಧನಾಗಿ ತನ್ನ ಸಮಸ್ತವನ್ನೂ ಅರ್ಪಿಸಬೇಕು. ಜಗತ್ತಿನ ಸೃಷ್ಟಿಗೆ ಕಾರಣನಾದ ಶಿವ ಅನಾದಿ, ಅನಂತ, ಸರ್ವಜ್ಞ, ಸರ್ವಶಕ್ತ. ಈ ದೈವೀ ಶಕ್ತಿ ಎಲ್ಲ ಜೀವಿಗಳ ಬಂಧನಕ್ಕೂ, ಬಿಡುಗಡೆಗೂ ಮೂಲ. ಪರಮಭಕ್ತರಿಗೆಲ್ಲಾ ಪರಮಾತ್ಮ ಒಬ್ಬನೇ. ದೇವರನ್ನು ಹುಡುಕಿಕೊಂಡು ಪವಿತ್ರ ಕ್ಷೇತ್ರಗಳಿಗೆ ಯಾತ್ರೆ ಕೈಗೊಳ್ಳುವ ಜನರು ಮೂಢರು. ದೇವರು ಕಾಶಿ, ರಾಮೇಶ್ವರದಲ್ಲಿಲ್ಲ, ಭಕ್ತರ ಹೃದಯದಲ್ಲಿದ್ದಾನೆ. ಪ್ರಾಣಿಗಳನ್ನು ಬಲಿಕೊಡುವುದನ್ನು ನಿಲ್ಲಿಸಿ, ಮೂಢ

ನಂಬಿಕೆಗಳನ್ನು ತ್ಯಜಿಸಿ, ಹಣ್ಣು ಹೂವು ಕಾಯಿಗಳ ಮೂಲಕ ಪರಮಾತ್ಮ ನನ್ನು ತೃಪ್ತಿಪಡಿಸಿ ಎಂದು ಬಸವಣ್ಣನವರು ಬೋಧಿಸಿದರು. ಭಕ್ತ ಶಿವಜ್ಞಾನ ವನ್ನು ಅರಿತಿರಬೇಕು ಮತ್ತು ಅವನಿಗೆ ಪರಮಾತ್ಮನಲ್ಲಿ ಭಕ್ತಿಯಿರಬೇಕು. ಇಲ್ಲ ದಿದ್ದರೆ ಅವನ ಜನ್ಮ ವ್ಯರ್ಥ ಎಂದು ಅವರು ಹೇಳಿದರು. ಅವರು ಸಮಗ್ರ ಸಂದೇಶದಲ್ಲಿ ಪರಮಾತ್ಮನ ಪಿತೃತ್ವ, ಮಾನವರ ಭ್ರಾತೃತ್ವ ಒಟ್ಟುಗೂಡಿವೆ. ತಮ್ಮ ಗುಣ, ಬುದ್ಧಿ, ಸಂಪತ್ತುಗಳನ್ನೆಲ್ಲ ಅವರು ಶಿವನಿಗೆ ಅರ್ಪಿಸಿದರು. ಅವರ ನಡೆ, ನುಡಿಯೆಲ್ಲಾ ಪರಮಾತ್ಮನ ಮುಖಾಂತರವೇ ಹರಿಯುತ್ತಿತ್ತು.

ಬಸವಣ್ಣನವರ ಪ್ರಭಾವದಿಂದುಂಟಾದ ಧಾರ್ಮಿಕ ಕ್ರಾಂತಿಯಿಂದಾಗಿ ಕನ್ನಡ ಸಾಹಿತ್ಯದಲ್ಲಿ ನವೀನ ಯುಗ ಪ್ರಾರಂಭವಾಯಿತು. ಧರ್ಮ, ಆಧ್ಯಾತ್ಮಿಕ ಅನುಭವ, ಅಂತರಂಗದ ಹೋರಾಟ, ಅವರು ರಚಿಸಿದ ವಚನಗಳ ಮೂಲಕ ಸಾಹಿತ್ಯರೂಪವನ್ನು ಪಡೆದು ಬೆಳಕಿಗೆ ಬಂದವು. ನಡೆ, ನುಡಿ, ಆಚಾರ, ವಿಚಾರ, ನಿಷ್ಠೆ, ನೇಮ, ಭಕ್ತಿ, ನೀತಿಗಳನ್ನೊಳಗೊಂಡ ಅನೇಕ ವಚನಗಳನ್ನು ಅವರು ರಚಿಸಿದರು. ಸಾಹಿತ್ಯ ಸಿದ್ಧಿಯನ್ನು ಪಡೆದ ಬಸವಣ್ಣನವರ ವಚನಗಳು ಕನ್ನಡ ನುಡಿಯ ಶಕ್ತಿಯನ್ನು, ಸೊಗಸನ್ನು, ಶೈಲಿಯನ್ನು, ಸಹಜತೆಯನ್ನು ಹೊರಹೊಮ್ಮಿಸಿ ಕನ್ನಡ ಸಾಹಿತ್ಯದ ವಿಶಿಷ್ಟ ಕೊಡುಗೆಯಾಗಿ ಪರಿಣಮಿಸಿದವು. ತಾವು ಪಡೆದ ಅನುಭವ, ಆನಂದ, ತೃಪ್ತಿಗಳನ್ನು, ಪ್ರಪಂಚದ ವೈವಿಧ್ಯವನ್ನು ಅವರು ವಚನಗಳಲ್ಲಿ ಮನಮುಟ್ಟುವಂತೆ ಸ್ವಾರಸ್ಯವಾಗಿ ನಿರೂಪಿಸಿದ್ದಾರೆ. ಬಸವೇಶ್ವರರು ಸಾಮಾಜಿಕ ರೀತಿ, ನೀತಿ, ನಡವಳಿಕೆಗಳನ್ನು ತಮ್ಮ ವಚನಗಳಲ್ಲಿ ಮಾರ್ಮಿಕವಾಗಿ ಬಿಂಬಿಸಿ, ಸಮಾಜದ ಅನಾಚಾರ, ಅನೀತಿ, ದುರ್ಜಡತೆಗಳನ್ನು ವ್ಯಂಗವಾಗಿ ಟೀಕಿಸಿದ್ದಾರೆ. ಸತ್ಯ ಸೌಂದರ್ಯವನ್ನು, ಕನ್ನಡ ಸಾಹಿತ್ಯದ ತೇಜಸ್ಸನ್ನು, ಅವರಿಗಿದ್ದ ಜಂಗಮ ಪ್ರೇಮವನ್ನು, ಆಡು ಮಾತಿನ ಲಯವನ್ನು, ಭಾವ-ಬುದ್ಧಿಯ ಮಿಲನವನ್ನು ಅವರ ವಚನಗಳಲ್ಲಿ ಸ್ಪಷ್ಟವಾಗಿ ಗುರುತಿಸಲು ಸಾಧ್ಯ.

ಜನಸಾಮಾನ್ಯರಿಗೆ ಪರಿಣಾಮಕಾರಿಯಾಗಿ ಧರ್ಮದ ಉದಾತ್ತ ತತ್ತ್ವಗಳನ್ನು ನೀಡುವುದೇ ಬಸವಣ್ಣನವರ ವಚನಗಳ ನಿರ್ಮಾಣಕ್ಕೆ ಕಾರಣ ಎನ್ನಬಹುದು. ಅವರ ಅನೇಕ ವಚನಗಳು ಆ ಕಾಲದ ಧಾರ್ಮಿಕ ಪರಿಸ್ಥಿತಿಯನ್ನು ಪ್ರತಿಬಿಂಬಿಸುತ್ತವೆ. ಸಮಾಜದ ಹೊಲಸನ್ನು ತೊಡೆದು ಹಾಕಲು, ಜನರನ್ನು

ತಿದ್ದಲು ಅವರು ಸಿಡಿಲಿನಂತಹ, ಈಟಿಯಂತಹ ವಚನಗಳನ್ನು ಸೃಷ್ಟಿಸಿದರು. ಅವರ ವಚನಗಳು ಶಾಸ್ತ್ರವೂ, ತತ್ತ್ವವೂ, ಸಾಹಿತ್ಯವೂ ಹೌದು. ವಿಶ್ವಸತ್ಯ ವನ್ನು ಕಣ್ಣೆದುರು ಕಟ್ಟಿ ನಿಲ್ಲಿಸುವ ಅವರ ವಚನಗಳು ಆತ್ಮವಿಮರ್ಶೆ, ಲೋಕ ವಿಮರ್ಶೆ, ಭಾಷಾ ಸರಳತೆ, ವಿಷಯ ಸ್ಪಷ್ಟತೆಗೆ ಹೆಸರಾಗಿವೆ. ಧರ್ಮೋಪ ದೇಶಕ್ಕಾಗಿ, ಸಮಾಜ ಕಲ್ಯಾಣಕ್ಕಾಗಿ, ನೀತಿ ಬೋಧಿಸುವ ಸಲುವಾಗಿ ಬಸ ವಣ್ಣನವರು ಬರೆದ ವಚನಗಳಲ್ಲಿ ಉಪಮೆಗಳು, ರೂಪಕಗಳು, ಸುಂದರವಾದ ಛಂದೋಲಯ, ಪ್ರಾಸಗಳು ಕಂಡುಬರುತ್ತವೆ. ಜೀವರಾಶಿಗಳಿಗೆ ಸಹಾನು ಭೂತಿ ತೋರಿ ಮರುಕದಿಂದ ಬೋಧಿಸಿ ಆತ್ಮಕ್ಕೆ ಶಾಂತಿ ನೀಡುವ ಅವರ ವಚನಗಳಿಗೆ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಂದು ಉನ್ನತವಾದ ಸ್ಥಾನವಿದೆ. ತತ್ತ್ವಗಳನ್ನೂ, ಗಹನವಾದ ಆಧ್ಯಾತ್ಮಿಕ ವಿಷಯಗಳನ್ನೂ, ನೈತಿಕ ವಿಚಾರ ಗಳನ್ನೂ, ಭಾವ, ಪ್ರತಿಭೆ, ರಸಾಭಿವ್ಯಕ್ತಿ, ಜೀವನದ ಅನುಭವಗಳನ್ನು ತುಂಬಿ ಕೊಂಡಿರುವ ಅವರ ವಚನಗಳು ಜನಸಾಮಾನ್ಯರಿಗೆ, ಅವಿದ್ಯಾವಂತರಿಗೆ ಜಿಜ್ಞಾಸುಗಳಿಗೆ, ಮತ್ತು ಸಾಹಿತ್ಯೋಪಾಸಕರಿಗೂ ದಾರಿ ದೀಪಗಳಂತಿವೆ. ಸಾಹಿತ್ಯದ ಎಲ್ಲಾ ಲಕ್ಷಣಗಳನ್ನೂ ಹೊಂದಿರುವ, ನಿಗೂಢ ತತ್ತ್ವವನ್ನು ಬೋಧಿಸುವ ಅವರ ವಚನಗಳು 'ನಮ್ಮ ಕನ್ನಡ ಸಾಹಿತ್ಯದ ಉಪನಿಷತ್ತು ಗಳು' ಎನ್ನಬಹುದು.

ವಚನ ಸಾಹಿತ್ಯ ಪರಂಪರೆ ಬಸವಣ್ಣನವರಿಗಿಂತ ಒಂದು ನೂರು ವರ್ಷಕ್ಕೆ ಮೊದಲೇ ಪ್ರಾರಂಭವಾಗಿದ್ದರೂ ಅದಕ್ಕೊಂದು ವ್ಯವಸ್ಥಿತ ರೂಪು, ಭದ್ರಸ್ಥಾನ ಕೊಟ್ಟ ಯಶಸ್ಸು ಬಸವಣ್ಣನವರದಾಯಿತು. ವಚನಗಳಲ್ಲಿ ಉಪದೇಶಗಳಿಗೆ, ಅವುಗಳ ಅನುಷ್ಠಾನಕ್ಕೆ ಅವರು ಹೆಚ್ಚಿನ ಮಹತ್ವ ಕೊಟ್ಟರು. ವಚನಗಳ ಮೂಲಕ ಕವಿಯಾಗಿ ಅವರು ಕನ್ನಡ ನುಡಿಗೆ, ನಾಡಿಗೆ ಮಾಡಿರುವ ಸೇವೆ ಚಿರಸ್ಮರಣೀಯವಾಗಿದೆ. ಸರ್ವಗುಣಸಂಪನ್ನರೂ, ಸದಾಚಾರಸಂಪನ್ನರೂ, ಅಖಂಡ ಪರಿಪೂರ್ಣರೂ ಆದ ಬಸವಣ್ಣನವರು ಆ ಕಾಲದ ಅನೇಕ ಜಟಿಲ ವಾದ ಸಮಸ್ಯೆಗಳನ್ನೆಲ್ಲ ಬಗೆಹರಿಸಿ, ಜನರ ಅವಶ್ಯಕತೆಗಳನ್ನು ಪೂರೈಸಲು ಅನೇಕ ಸಾಧನೆಗಳನ್ನು ಕೈಗೊಂಡು ದಾರಿ ತೋರುವ ಗುರುವಾದರು. ಅವರು ಆಧ್ಯಾತ್ಮದ ಅಡಿಪಾಯದ ಮೇಲೆ ಸತ್ಯಸೌಧವನ್ನು ಕಟ್ಟಿ, ಅದಕ್ಕೆ ಅಹಿಂಸೆಯ ಗೋಪುರವನ್ನು ಅಲಂಕರಿಸಿ ಧರ್ಮದ ಕಳಶವನ್ನಿಟ್ಟರು.

ಮಾನವ ಕುಲದ ಉದ್ಧಾರಕರಾದ ಈ ಮಹಾಪುರುಷರ ಜೀವನ, ಕಾರ್ಯ ಕ್ಷೇತ್ರ, ಹಾಗೂ ಸಾಧನೆ ಇಂದಿನ ಜನಾಂಗವನ್ನು ಆಕರ್ಷಿಸಿ ಸ್ಫೂರ್ತಿ ನೀಡುವುದರಲ್ಲಿ ಸಂದೇಹವಿಲ್ಲ. ಎಂಟುನೂರು ವರ್ಷಗಳಿಂದ ಬಸವಣ್ಣನವರ ಉಪದೇಶಗಳು, ಸುಧಾರಣೆಗಳು, ತತ್ತ್ವಬೋಧಗಳು ಮಾರ್ಗದರ್ಶಕವಾಗಿವೆ. ಸತ್ಯದ ಬೆಳಕು, ಮಧುವಿನ ಸವಿಯಿರುವ ಅವರ ಸಂದೇಶ ನಿತ್ಯ ನೂತನವಾಗಿ ನಮ್ಮ ಬಾಳು ಬೆಳಗುವಂತಾಗಬೇಕು. ವಿರಕ್ತಿಗೇ ಪ್ರಾಮುಖ್ಯತೆಯಿರುವ ಅವರ ಸಂದೇಶ ಎಂದೆಂದಿಗೂ ಆದರ್ಶಪ್ರಾಯವಾಗಿದೆ. ಅನೇಕ ವರ್ಷಗಳ ಹಿಂದೆ ಅವರು ನೀಡಿದ ಸಂದೇಶವನ್ನೇ ಗಾಂಧೀಜಿ ನಮಗೆ ಕೊಟ್ಟರು.

ಸಾಕ್ಷಾತ್ಕಾರ ಸಾಧಿಸಿದ ಶ್ರೇಷ್ಠ ವರ್ಗದ ಸಾಧಕರಾದ ಬಸವೇಶ್ವರರು ಗುರಿ, ಸಾಧನೆ ಎರಡಕ್ಕೂ ಸಮಾನ ಪ್ರಾಧಾನ್ಯತೆ ಕೊಟ್ಟರು. ಸಮತೆ, ಸ್ವಾತಂತ್ರ್ಯ, ಸಂಘಟನೆ ಅವರ ಸಂದೇಶದ ಮೂಲಸ್ಥಂಭಗಳಾಗಿದ್ದವು. ಅನುಭವ, ಅರಿವು, ಕ್ರಿಯೆ, ಭಕ್ತಿಗಳನ್ನೊಳಗೊಂಡ ಅವರ ಬೋಧೆ, ಸಾಧನೆಗಳು ಜನತೆಯಲ್ಲಿ ಉತ್ಸಾಹ, ಚೈತನ್ಯ ತುಂಬುವುದರಲ್ಲಿ ಸಂದೇಹವಿಲ್ಲ. ವಿಶ್ವಮೈತ್ರಿ, ವಿಶ್ವ ಬಾಂಧವ್ಯ, ವಿಶ್ವಪ್ರೇಮಲತೆ ಅವರಿಂದ ಬೆಳೆಯಿತು. ಜನತೆಯನ್ನು ಉದ್ಧರಿಸುವುದಕ್ಕಾಗಿಯೇ ಹುಟ್ಟಿದ ಈ ಮಹಾಪುರುಷರು ಅಲ್ಪಾವಧಿಯಲ್ಲಿ ಬಹುಮುಖ ಕ್ರಾಂತಿಯನ್ನು ಕಾರ್ಯವನ್ನು ಸಾಧಿಸಿದರು. ಬಸವಣ್ಣನವರ ಸಾಧನೆಗಳಲ್ಲಿ ಉಪದೇಶಗಳಲ್ಲಿ, ವಚನಗಳಲ್ಲಿ, ಸಂದೇಶದಲ್ಲಿರುವ ಬೆಳಕನ್ನು ತಿಳಿದುಕೊಂಡು ಅದರಂತೆ ನಡೆಯುವ ಸಾಮರ್ಥ್ಯ ಇಂದಿನ ಜನಾಂಗ ಸಂಪಾದಿಸಬೇಕು.

# ಶ್ರೀ ರಾಮಕೃಷ್ಣ ಪರಮಹಂಸರು

## ೧೮೩೬–೧೮೮೬

ಶ್ರೀರಾಮಕೃಷ್ಣ ಪರಮಹಂಸರು ಪ್ರಚಂಡ ಆಧ್ಯಾತ್ಮಿಕ ಶಕ್ತಿಯನ್ನು ಸಂಪಾದಿಸಿ, ಪ್ರಥಮತಃ ಪರಮಾತ್ಮನ ಸಾಕ್ಷಾತ್ಕಾರ ಪಡೆದ ಮಹಾನುಭಾವರು. ವಿವೇಕಾನಂದರನ್ನು ಅವತಾರಪುರುಷರನ್ನಾಗಿ ಮಾಡಿದ ಮಹಾಪುರುಷರಿವರು. ಪರಮಹಂಸರು ಠಾಕೂರರಂತೆ ಕಲಾಜ್ಞಾನಿಯಲ್ಲ, ಗಾಂಧಿಯಂತೆ ಕರ್ಮಯೋಗಿಯಲ್ಲ, ತತ್ತ್ವಜ್ಞಾನಿಗಳಲ್ಲಿ ಪ್ರತಿಭಾವಂತರಲ್ಲ, ಶ್ರೀಮಂತರಲ್ಲ, ಯೋಧರಲ್ಲ, ಗಣ್ಯ ರಾಜಕೀಯ ವ್ಯಕ್ತಿಯಲ್ಲ. ಆದರೆ ಇವರು ಪವಿತ್ರ ಯೋಗಿಗಳೂ, ಋಷಿಗಳೂ ಆಗಿದ್ದು ಪರಿಶುದ್ಧ ಹಾಗೂ ನಿರ್ಮಲವಾದ ಆಧ್ಯಾತ್ಮಿಕ ಜೀವನ ನಡೆಸಿ ಭಾರತೀಯರ ಮೇಲೆ ಮಹತ್ತರವಾದ ಪರಿಣಾಮ ಬೀರಿದರು. ಮಾನವರಲ್ಲಿ ದೇವರ ಅಂಶವಿದೆಯೆಂಬ ಭಾವನೆಯನ್ನು ಪರಮಹಂಸರು ಪ್ರತಿಯೊಬ್ಬ ಭಾರತೀಯನ ಹೃದಯದಲ್ಲೂ ನೆಲಸುವಂತೆ ತಮ್ಮ ಜೀವನ ಪ್ರಯೋಗದಿಂದ ತೋರಿಸಿಕೊಟ್ಟರು. ಇವರ ಜೀವನವೇ ಒಂದು ವಿಶ್ವಧರ್ಮ ಸಮ್ಮೇಳನವಾಗಿತ್ತು. ಈ ಮಹಾಪುರುಷರ ಅಂತರಂಗವು ಚಿತ್‌ಶಕ್ತಿ ಸ್ವರೂಪವಾದುದು. ಇವರಂಥ ವಿಭೂತಿಪುರುಷರು ಮತ್ತೊಬ್ಬರಿಲ್ಲ.

ಭರತಖಂಡದ ಧಾರ್ಮಿಕ ಪ್ರಪಂಚದ ಸ್ಥಿತಿ ೧೯ನೇ. ಶತಮಾನದಿಂದ ಅಧೋಗತಿಯಾಗಿತ್ತು. ಬ್ರಿಟಿಷರು ನಮ್ಮ ಭಾರತಕ್ಕೆ ಬಂದು ಅನೇಕ ಸುಧಾರಣೆಗಳನ್ನು ಜಾರಿಗೆ ತಂದರು. ಅವರು ಶಾಲೆಗಳನ್ನು ಸ್ಥಾಪಿಸಿ ಕ್ರೈಸ್ತನ ಧರ್ಮೋಪದೇಶವನ್ನು ಜನತೆಗೆ ನೀಡಿದರು. ಆಗ ಧರ್ಮ, ವೇದಾಂತ ದರ್ಶನವು ಪಂಡಿತರ ಮತ್ತು ವಿದ್ವಾಂಸರ ಸ್ವತ್ತಾಗಿತ್ತು. ತಮ್ಮ ಮತವೇ ಹೆಚ್ಚು, ಉಳಿದುವೆಲ್ಲ ಕೀಳು ಎಂದು ಒಬ್ಬರೊಡನೊಬ್ಬರು ಜಗಳವಾಡಿ ಧರ್ಮದ ಸ್ಥಿತಿ ಅತ್ಯಂತ ಶೋಚನೀಯವಾಗಿತ್ತು. ಆ ಸಂದರ್ಭದಲ್ಲಿ ಅವತಾರ ಪುರುಷರಾದ ಶ್ರೀ ರಾಮಕೃಷ್ಣ ಪರಮಹಂಸರು ಭಾರತದಲ್ಲಿ ಹುಟ್ಟಿ ಧರ್ಮದ ಪ್ರಗತಿಗೆ ಕಾರಣರಾದರು.

ಬಂಗಾಳ ದೇಶದ ಹುಗಲೀ ಜಿಲ್ಲೆಗೆ ಸೇರಿದ ಕಾಮಾರಪುಕುರವೆಂಬ ಗ್ರಾಮ

ದಲ್ಲಿ, ಕುದೀರಾಮ ಚಟ್ಟೋಪಾಧ್ಯಾಯ ಮತ್ತು ಚಂದ್ರಮಣಿದೇವಿ ಎಂಬ ದೈವಭಕ್ತ ದಂಪತಿಗಳಿಗೆ ನಾಲ್ಕನೆಯ ಮಗುವಾಗಿ ಕ್ರಿ. ಶ. ೧೮೩೬ನೇ ಇಸವಿ, ಫಾಲ್ಗುಣ ಮಾಸದ ಆರನೆಯ ದಿನ ಬುಧವಾರ ರಾತ್ರಿ ಶ್ರೀ ರಾಮಕೃಷ್ಣರು ಜನಿಸಿದರು. ಕುದೀರಾಮರು ನಿಷ್ಠಾವಂತ, ಶ್ರೇಷ್ಠ ವೈಷ್ಣವಕುಲ ಪ್ರಸೂತ ಬ್ರಾಹ್ಮಣರು. ಅವರಲ್ಲಿ ಸಕಲ ಧಾರ್ಮಿಕ ಭಾವನೆಗಳೂ ಚೆನ್ನಾಗಿ ಬೇರೂರಿದ್ದವು. ಮಡಿ, ಮೈಲಿಗೆ, ಉಪವಾಸ, ವ್ರತ, ನಿಯಮ, ಪೂಜೆ, ಪುನಸ್ಕಾರಗಳನ್ನು ಶ್ರದ್ಧೆಯಿಂದ ಕಟ್ಟುನಿಟ್ಟಾಗಿ ಆಚರಿಸುತ್ತಿದ್ದರು. ರಾಮಕೃಷ್ಣರು ಹುಟ್ಟಿದಾಗ ಕುದೀರಾಮರಿಗೆ ೬೦ ವರ್ಷ ವಯಸ್ಸು. ಮಹಾವಿಷ್ಣುವಿನ ಅನುಗ್ರಹದಿಂದ ಹುಟ್ಟಿದ ಮಗುವಿಗೆ 'ಗದಾಧರ'ನೆಂದು ಹಿರಿಯರು ನಾಮಕರಣ ಮಾಡಿದರು. ಹುಟ್ಟಿದ ಮಗುವಿನ ಜಾತಕವನ್ನು ನೋಡಿದ ಜ್ಯೋತಿಷ್ಯಶಾಸ್ತ್ರಜ್ಞರು ಮಗುವಿನ ಜನನ ಕಾಲವನ್ನು ಪರೀಕ್ಷಿಸಿ 'ಈ ಮಗು ಧರ್ಮಜ್ಞನೂ, ಮಾನನೀಯನೂ ಆಗಿ ಮಹಾಪುರುಷನೆಂದು ಜಗತ್ತಿನಾದ್ಯಂತ ಹೆಸರು ಗಳಿಸಿ ಎಲ್ಲರ ಗೌರವಕ್ಕೆ ಪಾತ್ರನಾಗುತ್ತಾನೆ' ಎಂದು ಹೇಳಿದರು. ಅವರು ಹೇಳಿದ ಮಾತು ಸುಳ್ಳಾಗಲಿಲ್ಲ.

ಗದಾಧರ ಬಾಲ್ಯದಿಂದ ಸೌಂದರ್ಯೋಪಾಸಕ. ಪ್ರಕೃತಿಸೌಂದರ್ಯಕ್ಕೆ ತೌರೂರಿನಂತಿದ್ದ ಆ ಗ್ರಾಮದ ಚೆಲುವಾದ ದೃಶ್ಯಗಳನ್ನು ನೋಡುವುದರಲ್ಲೇ ಅವನು ಮೈಮರೆಯುತ್ತಿದ್ದ. ಹಸಿರು ಸೀರೆಯುಟ್ಟಂತಿದ್ದ ಮಳೆಯ ತಿಳಿನೀರಿನಲ್ಲಿ ಮಿಂದ ಮರಗಿಡಗಳು, ಚಿಲಿಪಿಲಿಗುಟ್ಟುವ ಬಗೆಬಗೆಯ ಹಕ್ಕಿಗಳು, ಆ ಗ್ರಾಮವನ್ನು ಗಂಧರ್ವದ ಲೋಕವನ್ನಾಗಿ ಪರಿವರ್ತಿಸುತ್ತಿದ್ದ ಪಕ್ಷಿಗಳ ನಿನಾದ, ಪಚ್ಚೆ ತೋರಣಗಳಂತೆ ಹಬ್ಬಿಕೊಂಡಿದ್ದ ಬಳ್ಳಿಗಳು, ನಿರ್ಮಲವಾದ ತಂಗಾಳಿ, ಹರಿಯುವ ನದಿ, ಗದಾಧರನ ಹೃದಯವನ್ನು ಸೂರೆಗೊಂಡವು. ಸೃಷ್ಟಿಯ ವೈಭವವನ್ನು ಕಂಡು ಅವನು ಪುಳಕಿತನಾಗುತ್ತಿದ್ದ, ಸೃಷ್ಟಿಯ ಮಹಿಮೆಯನ್ನು ನೋಡಿ ಅಚ್ಚರಿಗೊಳ್ಳುತ್ತಿದ್ದ.

ಐದನೆಯ ವಯಸ್ಸಿನಲ್ಲಿ ಗದಾಧರ ತಂದೆ ಹೇಳುತ್ತಿದ್ದ ರಾಮಾಯಣ, ಮಹಾಭಾರತದ ಕಥೆಗಳನ್ನು ಗೆಳೆಯರಿಗೆ ಸ್ವಾರಸ್ಯವಾಗಿ ನಿರೂಪಿಸುತ್ತಿದ್ದ. ಎಂಟನೆಯ ವಯಸ್ಸಿನಲ್ಲೇ ಅವನು ಸಮಾಧಿಸ್ಥಿತಿ ಪಡೆಯುತ್ತಿದ್ದ. ಧರ್ಮಶಾಲೆಗೆ ಭೇಟಿಕೊಡುತ್ತಿದ್ದ ಗದಾಧರ, ಅನೇಕ ಸಾಧುಗಳ ಪರಿಚಯ ಮಾಡಿ

ಕೊಂಡು ಧರ್ಮಜ್ಞಾನದ ಬಗ್ಗೆ ಅವರು ಹೇಳುತ್ತಿದ್ದ ಉಪದೇಶಗಳನ್ನು ಕೇಳುತ್ತಿದ್ದ. ಸಾಧುಗಳ ಸರಳ ಜೀವನ, ಭಕ್ತಿ ವೈರಾಗ್ಯ ಅವನನ್ನು ಆಕರ್ಷಿಸಿದವು. ಚಿಕ್ಕ ವಯಸ್ಸಿನಲ್ಲೇ ಅವನಿಗೆ ಸನ್ಯಾಸಿಯಾಗುವ ಅಪೇಕ್ಷೆಯುಂಟಾಯಿತು. ಹತ್ತನೆಯ ವಯಸ್ಸಿನಲ್ಲಿ ಪಂಡಿತರೊಡನೆ ಬ್ರಹ್ಮಜಿಜ್ಞಾಸೆಯಲ್ಲಿ ಭಾಗವಹಿಸಿದ ಗದಾಧರ ಎಲ್ಲರನ್ನೂ ಚಕಿತಗೊಳಿಸಿ ಹೆಸರು ಸಂಪಾದಿಸಿದ. ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿದ್ದ ಸಂದರ್ಭದಲ್ಲಿ ಶಿವರಾತ್ರಿಯ ದಿನ ಬಯಲಾಟದಲ್ಲಿ ಶಿವನ ಪಾತ್ರ ಗದಾಧರನ ಪಾಲಿಗೆ ಬಂತು. ಅವನು ಶಿವನ ವೇಷಭೂಷಣಗಳಲ್ಲಿ ರಂಗಸ್ಥಳದ ಮೇಲೆ ನಿಂತಿದ್ದಾಗಲೇ ಸಮಾಧಿಸ್ಥನಾಗಿಬಿಟ್ಟ. ಹದಿನಾರನೆಯ ವಯಸ್ಸಿನಲ್ಲಿ ಅವನಿಗೆ ಉಪನಯನವಾಯಿತು. ಗಾಯಿತ್ರಿ ಪಠಿಸುವ ಮತ್ತು ಮನೆತನದ ದೇವರಾದ ಶ್ರೀ ರಘುವೀರನನ್ನು ಪೂಜಿಸುವ ಅಧಿಕಾರ ಅವನಿಗೆ ಪ್ರಾಪ್ತವಾಯಿತು.

ಶಾಲೆಯ ವಿದ್ಯಾಭ್ಯಾಸ ಗದಾಧರನ ಗಮನವನ್ನು ಸ್ವಲ್ಪವೂ ಆಕರ್ಷಿಸಲಿಲ್ಲ. ಕೇವಲ ಹೊಟ್ಟೆಗೆ ಅನ್ನ, ಮೈಗೆ ಬಟ್ಟೆಕೊಡುವ ವಿದ್ಯೆ ಕಲಿಯುವುದು ಅವನಿಗೆ ಬೇಕಿರಲಿಲ್ಲ. ಆತ್ಮಕ್ಕೆ ಮುಕ್ತಿಯನ್ನು, ಜೀವಕ್ಕೆ ಬ್ರಹ್ಮಸಾಕ್ಷಾತ್ಕಾರವನ್ನು ಕೊಡಬಲ್ಲ ವಿದ್ಯೆಯ ಅಗತ್ಯ ಅವನಿಗಿತ್ತು. ಆ ವಿದ್ಯೆ ಶಾಲೆಯಲ್ಲಿ ಸಿಕ್ಕದೆ ಶಾಲೆಯನ್ನೇ ಅವನು ಬಿಟ್ಟುಬಿಟ್ಟ. ಜನನ ಮರಣಗಳಿಂದ ಪಾರಾಗಲು ಸಹಾಯ ಮಾಡುವಂತಹ, ಶಾಶ್ವತವಾದ ಶಾಂತಿ ತಂದುಕೊಡುವಂತಹ ವಿದ್ಯೆಗಾಗಿ ಅವನ ಹೃದಯ ಹಂಬಲಿಸಿತು. 'ಅಂತಃಕರುಣೆಗೆ ಜಾತಿಮತಗಳ ಸಂಪರ್ಕವಿಲ್ಲ, ಪ್ರೀತಿಯೇ ದೇವತಾಸ್ವರೂಪ' ಎಂದು ಹೇಳಿ ಚಿಕ್ಕಂದಿನಿಂದ ತನ್ನನ್ನು ಎತ್ತಿ ಆಡಿಸಿದ ಹೀನ ಕುಲದವಳಾದ ಧನಿಯಿಂದ ಉಪನಯನದ ದಿವಸ ಗದಾಧರನು ಪ್ರಥಮ ಭಿಕ್ಷೆ ಸ್ವೀಕರಿಸಿದ. ಈ ನಡವಳಿಕೆಯಿಂದ ಹಿರಿಯರು ಸಿಟ್ಟಾದರೂ ಅವನು ಅವನ್ನು ಲೆಕ್ಕಿಸಲಿಲ್ಲ. ತಂದೆ ದೈವಾಧೀನರಾದ ಮೇಲೆ ಅವನು ಹಿರಿಯಣ್ಣನೊಂದಿಗೆ ಕಲ್ಕತ್ತಾಗೆ ಪ್ರಯಾಣ ಮಾಡಿದ. ಅಲ್ಲಿ ರಾಧಗೋವಿಂದ ದೇವಸ್ಥಾನದ ಪೂಜಾರಿಯಾಗಿ ಕೆಲಸಕ್ಕೆ ಸೇರಿಕೊಂಡ. ರೋಗಿ ಬಯಸಿದ ಹಾಲನ್ನವನ್ನು ವೈದ್ಯನೇ ನೀಡಿದಂತಾಯ್ತು. ಅಣ್ಣನನ್ನು ಕಳೆದುಕೊಂಡಮೇಲೆ ಗದಾಧರನ ಮನಸ್ಸು ಮತ್ತಷ್ಟು ಅಂತರ್ಮುಖವಾಯಿತು.

ರಾಣಿ ರಾಸ್ಮಣಿ ಕಲ್ಕತ್ತಾದಲ್ಲಿ ಕಟ್ಟಿಸಿದ ಕಾಳಿಕಾಮಾತೆಯ ಭವ್ಯ

ದೇವಾಲಯದಲ್ಲಿ ಗದಾಧರ ಪೂಜಾರಿಯಾಗಿ ನೇಮಿಸಲ್ಪಟ್ಟ. ಕಾಳಿಕಾಮಾತೆಯ ಶಿಲಾಮೂರ್ತಿಯಲ್ಲಿ ಅವನು ಸಾಕ್ಷಾತ್ ಶಕ್ತಿದೇವತೆಯನ್ನು ಕಂಡ. ಅವನು ಅನನ್ಯ ಭಕ್ತಿಭಾವದಿಂದ ಮೈಮರೆತು ಕಾಳಿಕಾದೇವಿಯನ್ನು ಪೂಜಿಸುತ್ತಿದ್ದ. ಗರ್ಭಗುಡಿಯಲ್ಲಿ ಹಾಡುತ್ತಾ, ಕಣ್ಣುಗಳಲ್ಲಿ ಕಂಬನಿ ಸುರಿಸುತ್ತಾ ಸಂಪೂರ್ಣವಾಗಿ ಭಗವಂತನಲ್ಲಿ ತನ್ಮಯನಾಗಿ ಇಹಲೋಕವನ್ನು ಸಂಪೂರ್ಣವಾಗಿ ಮರೆತು ಬಿಡುತ್ತಿದ್ದ. ಅವನ ಧ್ವನಿ ಇಂಪಾಗಿ ಕಿನ್ನರ ಕಂಠದಂತಿತ್ತು. ಭಕ್ತಿರಸದಿಂದ ತುಂಬಿ ತುಳುಕುತ್ತಿದ್ದ ಅವನ ವಾಣಿ, ಗಾಯನ ಕೇಳಿದರೆ ಸಾಕು, ಎಲ್ಲರ ಹೃದಯದಿಂದ ಭಕ್ತಿಗಂಗೆ ಉಕ್ಕಿ ಉಕ್ಕಿ ಬರುತ್ತಿತ್ತು.

ದೈವಭಕ್ತ, ಸಾತ್ವಿಕ ಹಾಗೂ ಸತ್ಯನಿಷ್ಠನಾದ ಗದಾಧರ ಪ್ರಪಂಚದ ಸುಖಗಳಿಗೆಲ್ಲಾ ತಿಲಾಂಜಲಿ ಕೊಟ್ಟು ಸನಾತನ ಅಮೃತದ ರುಚಿಯನ್ನು, ಅದರ ಆನಂದದ ಸೊಬಗನ್ನು ಸವಿಯಲು ಹಂಬಲಿಸಿದ. ದೇಹದ ಕಡೆಗೆ ಅವನಿಗೆ ಸ್ವಲ್ಪವೂ ಲಕ್ಷ್ಯವಿರಲಿಲ್ಲ, 'ದೇಹಕ್ಕೇನಾದರೂ ಆಗಲಿ, ಹೋಗುವುದಿದ್ದರೆ ಈ ದೇಹ ಹೋಗಲಿ, ನೀನು ನನ್ನ ಮೇಲೆ ದಯೆ ತೋರಿ ಪ್ರತ್ಯಕ್ಷಳಾಗು ತಾಯಿ, ನೀನಲ್ಲದೆ ಬೇರೆ ಯಾರೂ ನನಗೆ ಗತಿಯಿಲ್ಲ' ಎಂದು ಅವನು ಪ್ರತಿದಿನವೂ ಕಾಳಿಕಾದೇವಿಯ ವಿಗ್ರಹದ ಮುಂದೆ ನಿಂತು ಅಂಗಲಾಚಿ ಬೇಡುತ್ತಾ ಮಗುವಿನಂತೆ ಬಿಕ್ಕಿ ಬಿಕ್ಕಿ ಅಳುತ್ತಿದ್ದ. ಆದರೂ ಕಾಳಿ ಪ್ರತ್ಯಕ್ಷವಾಗಲಿಲ್ಲ. ಇಷ್ಟು ದಿವಸ ಶ್ರದ್ಧೆಯಿಂದ, ನಿಷ್ಠೆಯಿಂದ ಮಾಡಿದ ಪ್ರಾರ್ಥನೆ, ಪೂಜೆ ಎಲ್ಲವೂ ವ್ಯರ್ಥವಾಯಿತು. ಜಗನ್ಮಾತೆಯ ದರ್ಶನ ತನಗೆ ಸಿಕ್ಕಲಿಲ್ಲವಲ್ಲಾ ಎಂದು ಅವನು ನಿರಾಶೆಯಿಂದ, ಜೀವನದಲ್ಲೇ ಜುಗುಪ್ಸೆಹೊಂದಿ ದೇವಸ್ಥಾನದಲ್ಲಿ ಪ್ರಾಣಿಗಳನ್ನು ಬಲಿ ಕೊಡಲು ಇಟ್ಟಿದ್ದ ದೊಡ್ಡ ಖಡ್ಗವನ್ನು ಕೈಗೆತ್ತಿಕೊಂಡು ತಲೆಯನ್ನು ಕತ್ತರಿಸಿಕೊಳ್ಳಲು ಸಿದ್ಧನಾದ. ಇದ್ದಕ್ಕಿದ್ದಂತೆ ದೇವಸ್ಥಾನ, ಕಾಳಿಕಾ ವಿಗ್ರಹ, ಪೂಜಾಸಾಮಗ್ರಿಗಳೆಲ್ಲ ಮಾಯವಾಗಿ ಎಲ್ಲವನ್ನೂ ಶೂನ್ಯ ಆವರಿಸಿಕೊಂಡಿತು. ಪ್ರಜ್ವಲಿಸುವ, ಕಣ್ಣನ್ನು ಕೋರೈಸುವ ಜ್ಯೋತಿಯೊಂದು ಅವನ ಕಣ್ಣಿಗೆ ಕಾಣಿಸಿತು. ಒಂದು ಬಗೆಯ ಅವರ್ಣನೀಯ ಆನಂದವುಂಟಾಗಿ ಅದರಲ್ಲಿ ಅವನ ವ್ಯಕ್ತಿತ್ವ ಲೀನವಾಯಿತು. ಗದಾಧರ ತಲ್ಲಣಿಸಿ ಪ್ರಜ್ಞಾಶೂನ್ಯನಾಗಿ ನೆಲದ ಮೇಲೆ ಬಿದ್ದುಬಿಟ್ಟ. ಅಂದು ಆ ಪವಿತ್ರ ದಿನ ಸಾಕ್ಷಾತ್ಕಾರದ ಅನುಭವ ಅವನಿಗಾಗಿ ಜಗನ್ಮಾತೆಯ ಪ್ರಥಮ ದರ್ಶನವನ್ನು ಅವನು ಪಡೆದುಕೊಂಡ.

ಜಗನ್ಮಾತೆಯ ದರ್ಶನವಾದ ಮೇಲೆ ಗದಾಧರನ ಪೂಜಾಕ್ರಮದಲ್ಲೇ ಗಣನೀಯವಾದ ಮಾರ್ಪಾಡು ಕಾಣಿಸಿಕೊಂಡಿತು. ಸಾಕ್ಷಾತ್ಕಾರವಾದರೂ ಆತ್ಮಕ್ಕೆ ಸಂಪೂರ್ಣ ತೃಪ್ತಿ ಶಾಂತಿ ಸಿಕ್ಕದೆ ಅವನು ದೇವಿಯನ್ನು ಅಲೌಕಿಕವಾದ ರೀತಿಯಲ್ಲಿ ಪೂಜಿಸಲು ಪ್ರಾರಂಭಿಸಿದ. ವಿಗ್ರಹದೊಂದಿಗೆ ಆತ ಮಾತನಾಡುತ್ತಿದ್ದ, ವಿಗ್ರಹದ ಕೈ ಹಿಡಿದು ಮಕ್ಕಳಂತೆ ಕೇಕೆಹಾಕಿ ಕುಣಿಯುತ್ತಿದ್ದ. ನೈವೇದ್ಯವನ್ನು ದೇವಿಯ ಬಾಯಿಗೆ ಹಿಡಿಯುತ್ತಿದ್ದ. ವಿಗ್ರಹವನ್ನು ಪಕ್ಕದಲ್ಲಿ ಮಲಗಿಸಿಕೊಂಡು ಮಲಗುತ್ತಿದ್ದ. ಕಾಳಿಕಾಮಾತೆಯನ್ನು ಗದಾಧರನು ತಾಯಿಯಂತೆ, ತಂದೆಯಂತೆ, ಸುತನಂತೆ ಕಾಣುತ್ತಿದ್ದ ಗೆಳೆತನ ತೋರಿಸಿದ ಮತ್ತು ಪ್ರಿಯನಂತೆ ಪ್ರೀತಿಸಿದ. ದೇವರಿಂದ ತಾನು ಬೇರೆ ಎಂಬ ದ್ವೈತಭಾವದ ಮೂಲಕ ಅವನು ಭಗವಂತನನ್ನು ಪ್ರೀತಿಸಿದ, ದೇವರ ಅಂಶ ತಾನು ಎಂಬ ವಿಶಿಷ್ಟಾದ್ವೈತದ ಮೂಲಕ, ಕೊನೆಗೆ ತನ್ನ ವ್ಯಕ್ತಿತ್ವವನ್ನೆಲ್ಲ ಅದ್ವೈತ ಭಾವದಲ್ಲಿ ಲಯಗೊಳಿಸಿದ ಹುಟ್ಟು ಕಲೋಪಾಸಕನಾದ ಗದಾಧರ ಸಂಪೂರ್ಣವಾಗಿ ಭಗವಂತನಲ್ಲಿ ನಂಬಿಕೆಯಿಟ್ಟು ಕೆಲಸಕಾರ್ಯಗಳನ್ನು ಮಾಡುತ್ತಿದ್ದ. ಇಪ್ಪತ್ತೊಂಬತ್ತನೆಯ ವಯಸ್ಸಿನಲ್ಲಿ ರಾತ್ರಿಹೊತ್ತು ಅವನು ಸ್ಮಶಾನಕ್ಕೆ ಹೋಗಿ ಧ್ಯಾನಮಾಡುತ್ತಿದ್ದ. ಇದೇ ವಯಸಿನಲ್ಲಿ ಜಯರಾಮವಟಿಯ ರಾಮಚಂದ್ರ ಮುಖ್ಯೋಪಾಧ್ಯಾಯರ ಮಗಳು ಐದು ವರ್ಷದ ಶಾರದಾದೇವಿಯೊಡನೆ ಗದಾಧರನ ವಿವಾಹ ನಡೆಯಿತು.

ತೋತಾಪುರಿಯೆಂಬ ಮಹಾವ್ಯಕ್ತಿ ಗದಾಧರನಿಗೆ ಸನ್ಯಾಸ ದೀಕ್ಷೆಕೊಟ್ಟು ಅವನನ್ನು ಅದ್ವೈತ ತತ್ತ್ವದ ಉತ್ತುಂಗ ಶಿಖರಕ್ಕೆ ಏರಿಸಿದರು. ಅವನಿಗೆ 'ರಾಮಕೃಷ್ಣ ಪರಮಹಂಸ'ರೆಂದು ನಾಮಾಭಿದಾನವನ್ನೂ ಮಾಡಿದರು. ಅದೇ ಹೆಸರಿನಿಂದ ಜಗತ್ಪ್ರಸಿದ್ಧರಾದ ಪರಮಹಂಸರಿಗೆ ತೋತಾಪುರಿ ಅದ್ವೈತ ಬೋಧೆ ಮಾಡಿ 'ನಿನ್ನ ಮನಸ್ಸನ್ನು ಪೂರ್ಣ ನಿರ್ವಿಕಲ್ಪಮಾಡಿ ಆತ್ಮಧ್ಯಾನದಲ್ಲಿ ಏಕಾಗ್ರತೆ ಹೊಂದುವಂತೆ ಮಾಡು' ಎಂದರು. ಪರಮಹಂಸರಿಗೆ ತಾಯಿಯಲ್ಲಿ ತುಂಬ ಪ್ರೀತಿ. ದುಃಖದಿಂದ, ನಿರಾಶೆಯಿಂದ ತಾಯಿ ಜೀವಕ್ಕೆ ಅಪಾಯ ತಂದುಕೊಳ್ಳಬಹುದೆಂದು ಹೆದರಿ ಅವರು ಆಕೆಗೆ ತಿಳಿಸದೆ ರಹಸ್ಯವಾಗಿ ಸನ್ಯಾಸದೀಕ್ಷೆ ಕೈಗೊಂಡರು. ಕಾಳೀಮಾತೆಯ ಆರಾಧಕರಾದ ರಾಮಕೃಷ್ಣರು ಆಕೆಯ ಅಪ್ಪಣೆ ಪಡೆದುಕೊಂಡು ಅದ್ವೈತರಾದರು.

ರಾಮಕೃಷ್ಣರ ಪೂಜಾವಿಧಾನ, ವಿಚಿತ್ರ ನಡವಳಿಕೆಯನ್ನು ಕಂಡು ಜನರೆಲ್ಲ

ಅವರನ್ನು ಹುಚ್ಚರೆನ್ನುತ್ತಿದ್ದಾಗ 'ಇದು ಹುಚ್ಚಲ್ಲ, ಈತ ಮಹಾನುಭಾವ, ದಿವ್ಯಜ್ಞಾನಿ', ಎಂದು ಸಾರಿ ಸ್ಪಷ್ಟಪಡಿಸಿದ ಭೈರವಿ ಬ್ರಾಹ್ಮಣಿ ಎಂಬಾಕೆ ಅವರನ್ನು ಮಹಾಪುರುಷರ ಸಾಲಿಗೆ ಸೇರಿಸಿದಳು. ತೋತಾಪುರಿ, ಭೈರವಿ ಬ್ರಾಹ್ಮಣಿ ಇಬ್ಬರೂ ಪರಮಹಂಸರ ಗುರುಗಳು. ಆದರೂ ಅಂತ್ಯದಲ್ಲಿ ಈ ಮಹಾಶಿಷ್ಯನಿಂದ ಅವರಿಬ್ಬರೂ ಪ್ರಯೋಜನ ಪಡೆದು ಹೊರಟುಹೋದರು.

ಕೃಶ ಶರೀರ, ಮಗುವಿನಂತಹ ಮುಗ್ಧಹೃದಯ, ಸರಳ ಸ್ವಭಾವದ ರಾಮಕೃಷ್ಣರು ಪ್ರಪಂಚದ ಕಷ್ಟನಷ್ಟಗಳಿಗೆಲ್ಲಾ ಮರುಗುತ್ತಿದ್ದರು. ಅವರ ಮುಖ ನೋಡಿದರೆ ಕಾರುಣ್ಯ, ದಯೆ ಉಕ್ಕಿಬರುವಂತಿತ್ತು. ವಿನಯಶೀಲರೂ, ಸಹಿಷ್ಣುತೆಯುಳ್ಳವರೂ, ಮಿತ ಆಹಾರಿಗಳೂ ಆದ ಪರಮಹಂಸರು ಬಡಜೀವಿಗಳಿಗೆ ಅನುಕಂಪ ತೋರಿಸುತ್ತಿದ್ದರು. ಅವರು ವೈಷ್ಣವ ಧರ್ಮದ ಸಕಲ ಸಾಧನೆಗಳನ್ನೂ ಮೂರು ದಿನಗಳಲ್ಲಿ ಜೀರ್ಣಿಸಿಕೊಂಡರು. ಮೂರ್ತಿ ಪೂಜಕರಾದ ರಾಮಕೃಷ್ಣರು ಸನ್ಯಾಸಿಗಳಾದರೂ ಕಾಷಾಯ ವಸ್ತ್ರ ಧರಿಸಲಿಲ್ಲ. ಅವರು ಜನಿವಾರವನ್ನು ತ್ಯಜಿಸಿ, ಭಿನ್ನ ಜಾತಿಯವರಲ್ಲಿ ಭೋಜನ ಸ್ವೀಕರಿಸಿ, ತ್ಯಾಗ ಪರಿಗ್ರಹಗಳನ್ನು ಕಠೋರವಾಗಿ ಪಾಲಿಸಿದರು. ಮಾತೆಯ ಸಾಕ್ಷಾತ್ಕಾರ, ಆತ್ಮಾನಂದ, ಭಾವ ಸಮಾಧಿ ಮುಂತಾದ ಅನುಭವಗಳನ್ನೂ ಅವರು ಪಡೆದುಕೊಂಡರು.

ರಾಮಕೃಷ್ಣರು ಪತ್ನಿ ಶಾರದಾದೇವಿಯೊಡನೆ ದೈಹಿಕ ಸಂಬಂಧವನ್ನು ಬೆಳೆಸಲೇ ಇಲ್ಲ. ಸತಿಪತಿಗಳ ಸಂಬಂಧ ಆಧ್ಯಾತ್ಮಿಕ ಸಂಬಂಧವಾಗಿ ಬೆಳೆಯಿತು. ಆಕೆ ಮಾತೃದೇವತೆಯ ಪ್ರತಿರೂಪಳೆಂದು ಅವರು ಭಾವಿಸಿದರು. ಇದೊಂದು ಆದರ್ಶವಾದ, ಹಿಂದೆಂದೂ, ಯಾವ ಸಂದರ್ಭದಲ್ಲೂ ಕಂಡಿಲ್ಲದ ಉದಾಹರಣೆ. ತ್ಯಾಗಿಗಳಾದ ರಾಮಕೃಷ್ಣರು ಬಲಾತ್ಕಾರವಾಗಿ ಹೆಂಡತಿಯನ್ನು ಬ್ರಹ್ಮಚಾರಿಣಿಯನ್ನಾಗಿ ಮಾಡಿ ಆಕೆಯ ಇಚ್ಛೆಗೆ ವಿರೋಧವಾಗಿ ಸಂಯಮ ಜೀವನ ನಡೆಸಲಿಲ್ಲ. ಪತ್ನಿಯ ಮುಂದೆ ಅವರು ಆಧ್ಯಾತ್ಮಿಕ ಸುಖ, ಮತ್ತು ಪ್ರಾಪಂಚಿಕ ಸುಖ ಎರಡನ್ನೂ ಇಟ್ಟರು. ಶಾರದಾದೇವಿ ಮನಸ್ಸು ಮಾಡಿದ್ದರೆ ಪ್ರಾಪಂಚಿಕ ಸುಖವನ್ನೇ ಸ್ವೀಕಾರಮಾಡಬಹುದಾಗಿತ್ತು. ಆದರೆ ಆಕೆ ಸರ್ವ ಸಾಮಾನ್ಯ ಹೆಣ್ಣಲ್ಲ. ಎಲ್ಲ ಹೆಂಗಸಿನಂತೆ ಆಕೆ ಪ್ರಾಪಂಚಿಕ ಸುಖ ಬಯಸದೆ ಭಗವದಾನಂದವನ್ನು ಬಯಸಿದರು. ಗಂಡನನ್ನು ಸಂಸಾರ ಕೂಪಕ್ಕೆ ಎಳೆಯದೆ

ಅವರ ಸೇವೆ ಸಿಕ್ಕಿದರೆ ಅಷ್ಟೆ ಸಾಕೆಂದು ತೃಪ್ತಿಗೊಂಡರು. ಗಂಡನಂತೆ ಜಗನ್ಮಾತೆಯ ಭಕ್ತಳಾಗಬೇಕೆಂದು ಶಾರದಾದೇವಿ ಬಯಸಿದರು. ಹೆಂಡತಿಯನ್ನು ಒಂದು ಸಲವೂ ಪರಮಹಂಸರು ಸ್ಪರ್ಶಿಸಲಿಲ್ಲ. ಅವರ ಮನಸ್ಸು ದೇಹ ಸುಖದತ್ತ ಹೋಗಲೇ ಇಲ್ಲ. ಹೆಂಡತಿಯ ಮನಸ್ಸಿನಲ್ಲಿ ಕಾಮ ಯೋಚನೆ ಹುಟ್ಟದಿರಲೆಂದು ಅವರು ನಿತ್ಯವೂ ದೇವಿಗೆ ಪ್ರಾರ್ಥಿಸುತ್ತಿದ್ದರು.

ರಾಮಕೃಷ್ಣರ ಧರ್ಮಪತ್ನಿ ಶಾರದಾದೇವಿ ಪತಿಯ ಅಂತರಂಗದ ಶಿಷ್ಯೆಯಾದರು. ಅವರು ಹೆಂಡತಿಗೆ ಧ್ಯಾನ, ಪೂಜೆ, ಸಮಾಧಿ ಎಲ್ಲವನ್ನೂ ಶ್ರದ್ಧೆಯಿಂದ ಹೇಗೆ ಮಾಡಬೇಕೆಂಬುದನ್ನು ಹೇಳಿಕೊಟ್ಟರು. ದೇಹಸುಖವನ್ನು ತ್ಯಜಿಸಿ, ದೇವರಿಗಾಗಿ ಮೊರೆಯಿಟ್ಟು ಹೆಂಡತಿಗೂ ದೇವರ ವಿಚಾರವಾಗಿ ಅವರು ಬೋಧಿಸಿದರು. ಪರಮಹಂಸರು, ಶಾರದಾದೇವಿ ಇಬ್ಬರೂ ಸಂತೋಷದಿಂದ ಅನ್ಯೋನ್ಯದಿಂದ ಆಜೀವ ಬ್ರಹ್ಮಚಾರಿಗಳಾಗಿರಲು ವ್ರತತೊಟ್ಟರು. ಹೆಂಡತಿಯನ್ನು ಅವರು ಬಹುವಚನದಲ್ಲೇ ಕರೆಯುತ್ತಿದ್ದರು ಮತ್ತು ಪೂಜ್ಯದೃಷ್ಟಿಯಿಂದ ನೋಡುತ್ತಿದ್ದರು. ರಾಮಕೃಷ್ಣರು ಕೈ ಹಿಡಿದ ಹೆಂಡತಿಗೆ ದೈಹಿಕಸುಖ ನೀಡದಿದ್ದರೂ ಅವರನ್ನು ಉದಾಸೀನ ಮಾಡಲಿಲ್ಲ. ಆಕೆ ಸಂತೋಷವಾಗಿರುವುದೂ ಅವರಿಗೆ ಮುಖ್ಯವಾಗಿತ್ತು. ಹೆಂಡತಿಯ ಮನಸ್ಸಿಗೆ ಬೇಸರವಾಗಬಾರದೆಂದು ಅವರು ಆಕೆಗೆ ಕೈ ತುಂಬ ಕೆಲಸ ಹೇಳುತ್ತಲೇ ಇದ್ದರು. ಹೆಂಡತಿಯನ್ನು ಕಾಳಿಕಾಮಂದಿರದಲ್ಲಿರುವ ಜಗನ್ಮಾತೆ, ಜನ್ಮಕೊಟ್ಟ ತಾಯಿಯೆಂದು ಅವರು ಭಾವಿಸಿದ್ದರು. ಪೀಠದ ಮೇಲೆ ಒಂದು ದಿನ ಹೆಂಡತಿಯನ್ನು ಕೂರಿಸಿ ಅಧಿದೇವತೆ ಎಂದೇ ಭಾವಿಸಿ ಪರಮಹಂಸರು ಭಕ್ತಿಭಾವದಿಂದ ಪೂಜಿಸಿದರು.

ಶಾರದಾದೇವಿ ಪರಮಹಂಸರ ಧರ್ಮಪತ್ನಿಯಾಗಿ, ಶಿಷ್ಯೆಯಾಗಿ ಅವರ ಅಖಂಡ ತಪಶ್ಚರ್ಯಕ್ಕೂ, ತ್ಯಾಗಕ್ಕೂ ಆಧಾರಸ್ತಂಭವಾಗಿ ನಿಂತು 'ಶ್ರೀಮಾತೆ' ಎಂದು ಜಗತ್ಪ್ರಸಿದ್ಧಿ ಪಡೆದರು. ಗಂಡನನ್ನು ಗುರುದೇವ ಎಂದು ಭಾವಿಸಿ, ಆದರ್ಶ ಮಹಿಳೆಯಾಗಿ, ಪೂಜ್ಯಳಾಗಿ, ಗಂಡನ ಏಳಿಗೆಗಾಗಿ ಸರ್ವಸ್ವವನ್ನೂ ತ್ಯಾಗಮಾಡಿದ ಆಕೆ ವೀರಮಾತೆ. ಹೆಂಡತಿಯೊಡನೆ ಯಾವ ವಿಧವಾದ ದೈಹಿಕ ಸಂಬಂಧವನ್ನು ಇಟ್ಟುಕೊಳ್ಳದಿದ್ದರೂ ರಾಮಕೃಷ್ಣರು ಆಕೆಯನ್ನು ಅಲಕ್ಷ್ಯಮಾಡದೆ, ತಿರಸ್ಕರಿಸದೆ ಶಿಷ್ಯಳೆಂದು ಭಾವಿಸಿ ಉಪದೇಶಿಸಿ ಆಕೆಯ ಆತ್ಮವನ್ನೂ ಒಂದು ಉನ್ನತವಾದ ಆದರ್ಶ ಶಿಖರಕ್ಕೆ ಕರೆದೊಯ್ದರು. ತಾವು

ಒಂದು ಮುದ್ದು ಮಗುವಿನ ತಾಯಿಯಾಗಲಿಲ್ಲವಲ್ಲಾ ಎಂದು ಒಂದು ದಿನವೂ ಶಾರದಾದೇವಿ ದುಃಖಿಸಲಿಲ್ಲ. ಅದಕ್ಕೆ ಬದಲಾಗಿ ಆಕೆ ಆಧ್ಯಾತ್ಮಿಕ ಪ್ರಪಂಚದಲ್ಲಿ ಶಿಖರಗಳಂತಿದ್ದ ಪರಮಹಂಸರ ಶಿಷ್ಯರನ್ನು ತಮ್ಮ ಮಕ್ಕಳೆಂದೇ ಭಾವಿಸಿ ಅವರನ್ನು ಪ್ರೀತಿಯಿಂದ ನೋಡಿಕೊಂಡರು. ಋಷಿಪತ್ನಿಯಂತೆ ಜೀವನ ನಡೆಸಿದ ದೇವತಾಸ್ತ್ರೀ ಶಾರದಾದೇವಿ ಗಂಡ ದೈವಾಧೀನರಾದ ಮೇಲೆ ಅವರ ಅಪೇಕ್ಷೆ ಯಂತೆ ವಿಧವೆಯ ವೇಷಭೂಷಣಗಳನ್ನು ಹಾಕಿಕೊಳ್ಳಲಿಲ್ಲ. ಆತ್ಮದ ಅಮರತ್ವದ ಬಗ್ಗೆ ಸಂಪೂರ್ಣ ಧೃಢನಂಬಿಕೆಯುಳ್ಳ ಆಕೆ ಮಹಾಪತಿವ್ರತೆ ಯಾಗಿ ಮುತ್ತೈದೆಯಾಗಿಯೇ ಉಳಿದುಕೊಂಡರು.

ಶ್ರೀ ರಾಮಕೃಷ್ಣರು ಓದುಬರಹಗಳಲ್ಲಿ ಪಂಡಿತರಲ್ಲದಿದ್ದರೂ ಪ್ರತ್ಯಕ್ಷಾನು ಭವಿಗಳು, ಅಪರೋಕ್ಷ ಜ್ಞಾನಿಗಳು. ಅವರು ಅಸಮಾನ್ಯ ಆಧ್ಯಾತ್ಮಿಕ ಅನುಭವವುಳ್ಳವರಾಗಿದ್ದು ಅಸಂಖ್ಯಾತ ಶಿಷ್ಯರನ್ನು ಆಕರ್ಷಿಸಿದರು. ಕಣ್ಣಿಗೆ ಅಶಕ್ತರಂತೆ ಕಂಡರೂ ಸದಾ ಹಸನ್ಮುಖಿಗಳು. ಹಲವಾರು ದಿನಗಳು, ತಿಂಗಳು ಗಳು ನಿದ್ರಾಹಾರವಿಲ್ಲದೆ ಸಮಾಧಿಯಲ್ಲಿ ನಿರತರಾಗುತ್ತಿದ್ದರು. ಇಸ್ಲಾಂ ಧರ್ಮದ ತತ್ತ್ವವನ್ನು ಜೀರ್ಣಿಸಿಕೊಂಡು ಕ್ರೈಸ್ತ ಧರ್ಮದ ತಿರುಳನ್ನು ಅರ್ಥಮಾಡಿ ಕೊಂಡ ಪರಮಹಂಸರಿಗೆ ಬೈಬಲ್ ಗ್ರಂಥ ಮೆಚ್ಚುಗೆಯಾಯಿತು. ವಿವೇಕಾ ನಂದರನ್ನು ಪ್ರಥಮ ಭೇಟಿಯಲ್ಲೇ ಅವರು ಗುರುತಿಸಿ ಈ ಪುಣ್ಯಾತ್ಮನಿಂದಲೇ ತಮ್ಮ ಅವತಾರದ ಸಾರ್ಥಕತೆಯಾಗುವುದೆಂದು ತಿಳಿದು ತಮ್ಮ ಆಧ್ಯಾತ್ಮಿಕ ಅನುಭವಗಳನ್ನೆಲ್ಲಾ ಅವರಿಗೆ ಧಾರೆಯೆರೆದು ಬದುಕಿರುವವರೆಗೂ ಜನತೆಗೆ ಬೋಧಿಸಿದರು. ಮಾನಸ ಜಗತ್ತಿನಲ್ಲಿ ಅದ್ಭುತ ಹಾಗೂ ಅಸಮಾನ್ಯ ಸಾಮರ್ಥ್ಯ ತೋರಿಸುತ್ತಿದ್ದ ಅವರಿಗೆ ಹೊಗಳಿಕೆಯ ಮಾತೆಂದರೆ ಸರಿಬೀಳು ತ್ತಿರಲಿಲ್ಲ. ಅವರನ್ನು ಯಾರಾದರೂ ಹೊಗಳಿದರೆ ಅವರು ಉಬ್ಬಿಹೋಗದೆ ಗರ್ವಪಡದೆ ನಮ್ರತೆಯಿಂದ 'ನಾನು ಆಳಿನ ಆಳು, ಕೀಳರಲ್ಲಿ ಕೀಳ, ದೀನರಲ್ಲಿ ದೀನ' ಎನ್ನುತ್ತಿದ್ದರು. ರಾಮಕೃಷ್ಣರು ತಾವು ಕಂಡ ಬೆಳಕನ್ನು, ದಿವ್ಯ ಜ್ಞಾನ ವನ್ನು, ಅನುಭವಿಸಿದ ಶಾಂತಿಯನ್ನು ಪ್ರಪಂಚಕ್ಕೆಲ್ಲಾ ಸಾರಿದರು. ಕರ್ಮ ಯೋಗದ ರಹಸ್ಯ, ರಾಜಯೋಗದ ಅನುಭವಗಳು ಅವರ ವಶವಾಗಿದ್ದವು. ಜ್ಞಾನಮಾರ್ಗ, ಭಕ್ತಿಮಾರ್ಗವನ್ನು ಅನುಸರಿಸುವ ವಿಧಾನವೂ ಅವರಿಗೆ ಚೆನ್ನಾಗಿ ಗೊತ್ತಿತ್ತು.

ಪರಮಹಂಸರು ಯಾತನಾಮಯವಾದ ವ್ರಣರೋಗಕ್ಕೆ ಸಿಕ್ಕಿ ನರಕ ಹಿಂಸೆ ಅನುಭವಿಸಿದರು. ಆಗಲೂ ಅವರು ಆರೋಗ್ಯ ಅನುಕೂಲಗಳನ್ನೆಲ್ಲ ಅಲಕ್ಷಿಸಿ ಸರಸದಿಂದ, ಜಾಣತನದಿಂದ ಶಿಷ್ಯಕೋಟಿಗೆ ಬೋಧಿಸುತ್ತಿದ್ದರು. ಆಗಸ್ಟ್ ಹದಿನೈದನೆಯ ತಾರೀಕು ೧೮೮೬ನೇ ಇಸವಿ ಅವರ ಯಾತನೆ ಪರಕಾಷ್ಠೆ ಮುಟ್ಟಿತು. ಎಲ್ಲರೊಡನೆ ಕುಳಿತು ಊಟಮಾಡಿದರು. ಕಾಳಿಮಾತೆಯ ಮೇಲೆ ಭಕ್ತಿಯಿಂದ ಒಂದು ಹಾಡನ್ನು ಹೇಳಿದರು. ಮರಣ ರಹಸ್ಯವನ್ನು ತಾತ್ವಿಕ ದೃಷ್ಟಿಯಿಂದ ಚೆನ್ನಾಗಿ ತಿಳಿದುಕೊಂಡಿದ್ದ ಶ್ರೀ ರಾಮಕೃಷ್ಣರು **'ಜೈ ಕಾಳಿ, ಜೈ ಕಾಳಿ, ಜೈ ಕಾಳಿ'** ಎಂದು ಮೂರು ಸಲ ಹೇಳಿ ಮಲಗಿದರು. ಆ ರಾತ್ರಿ ಒಂದು ಘಂಟೆಗೆ ಅವರು ಸಮಾಧಿಮಗ್ನರಾದರು. ಅದೇ ಮತ್ತೆ ದೇಹಕ್ಕೆ ಪ್ರಜ್ಞೆ ಬರದಂತಹ ಮಹಾ ಸಮಾಧಿಯಾಯಿತು. ಶಿಷ್ಯಕೋಟಿಯನ್ನು ವಿವೇಕಾನಂದರ ವಶದಲ್ಲಿ ಬಿಟ್ಟು, ಪರಮಹಂಸರ ದಿವ್ಯಾತ್ಮವು ಪರಮಾತ್ಮನಲ್ಲಿ ಐಕ್ಯವಾಯಿತು. ಹದಿನಾರನೆಯ ಆಗಸ್ಟ್ ದಿವಸ ಶ್ರೀ ರಾಮಕೃಷ್ಣರೆಂಬ ಮಹಾನದಿ·ಬ್ರಹ್ಮನ ಅನಂತಸಾಗರದಲ್ಲಿ ಒಂದಾಯಿತು.

ಪರಮಹಂಸರ ಜೀವನವು ಧರ್ಮ, ತತ್ತ್ವ, ಭಾವ, ಸಾಧನೆಗಳೆಂಬ ಮಹಾ ನದಿಗಳಿಂದ ಕೂಡಿದ ಸಾಗರದಂತಿದೆ. ಜ್ಞಾನ, ಕರ್ಮ, ಭಕ್ತಿಯೋಗಗಳ ನ್ನೊಳಗೊಂಡ ಅವರ ಜೀವನ ದ್ವೈತ, ಅದ್ವೈತ, ವಿಶಿಷ್ಟಾದ್ವೈತಗಳ ತ್ರಿವೇಣಿ ಸಂಗಮ. ಅವರು ಸಾಕಾರ, ನಿರಾಕಾರ, ದ್ವೈತ ಮತ್ತು ಅದ್ವೈತಗಳ ಸತ್ಯ ಸ್ವರೂಪವನ್ನು ಪ್ರತ್ಯಕ್ಷವಾಗಿ ಕಂಡು ಅನುಭವಿಸಿ, ಲೋಕದ ರಹಸ್ಯಗಳನ್ನೆಲ್ಲ ಸುಲಭವಾಗಿ ಭೇದಿಸಿ ಅರ್ಥಮಾಡಿಕೊಂಡಿದ್ದರು. ರಾಮಕೃಷ್ಣರ ಶರೀರ ವ್ಯವಹಾರ ಪ್ರಪಂಚದಲ್ಲಿ ಚಲಿಸುತ್ತಿದ್ದರೂ ಅವರ ಮನಸ್ಸು ಪರಮಾತ್ಮನ ಸತ್ಯದಲ್ಲಿ ನೆಲೆಸಿತ್ತು. ದೇಹ, ಮನಸ್ಸು, ಚಿತ್ತವೃತ್ತಿಗಳನ್ನೆಲ್ಲ ಅವರು ಜಗನ್ಮಾತೆಗೆ ಅರ್ಪಿಸಿದ್ದರು. ಸದಾ ಮುಕ್ತರೂ, ಶುದ್ಧರೂ ಆದ ಪರಮಹಂಸರು ಚಿಕ್ಕಂದಿನಿಂದಲೇ ಸಮಾಧಿಸ್ಥಿತಿ ಹೊಂದುತ್ತಾ, ಸಮಾಧಿ ಬಲದಿಂದ ಪರಮಾತ್ಮ ದರ್ಶನ ಪಡೆಯುವ ಶಕ್ತಿ ಸಂಪಾದಿಸಿದ್ದರು.

ಅರಳಿದ ಪುಷ್ಪದ ಪರಾಗದಿಂದ ದುಂಬಿಗಳು ಆಕರ್ಷಿಸಲ್ಪಡುವಂತೆ ಅನೇಕ ಭಕ್ತರು ರಾಮಕೃಷ್ಣರ ಬಳಿಗೆ ಧಾವಿಸಿ ಬಂದರು. ಎಲ್ಲ ಮತದವರು, ವಯಸ್ಸಿನವರು, ಜಾತಿಯವರು, ಸ್ತ್ರೀಯರು, ಶ್ರೀಮಂತರು, ಬಡವರು ಅವರ ಶಿಷ್ಯ

ರಾದರು. ದೇವರ ಹೆಸರಿನಲ್ಲಿ ತಮ್ಮ ಬಳಿಗೆ ಬಂದವರನ್ನೆಲ್ಲ ಅವರು ವಿಶ್ವಾಸ ದಿಂದ ಬರಮಾಡಿಕೊಂಡು ಅನುಕಂಪ ತೋರಿಸಿದರು. ಚೆನ್ನಾಗಿ ಪರೀಕ್ಷೆ ಮಾಡದೆ ಯಾರನ್ನೂ ಅವರು ತಮ್ಮ ಶಿಷ್ಯನನ್ನಾಗಿ ಸ್ವೀಕರಿಸುತ್ತಿರಲಿಲ್ಲ, ತಮ್ಮ ನೆರೆಯಲ್ಲಿ ಸೇರಿಸಿಕೊಳ್ಳುತ್ತಿರಲಿಲ್ಲ. ಭಕ್ತೆಯರಲ್ಲಿ ಬಾಲವಿಧವೆಯಾದ ಅಘೋರ ರಮಣಿ ಅತಿ ಪ್ರಮುಖಳು. ಅವರ ಮತ್ತೊಬ್ಬ ಭಕ್ತಳ ಹೆಸರು ಯೋಗಿನ್‌ಮಾ. 'ಅವಳು ಬಹು ಬೇಗ ಅರಳುವ ಸಣ್ಣ ಮೊಗ್ಗಲ್ಲ, ನಿಧಾನವಾಗಿ ಅರಳುವ ಸಹಸ್ರದಳದ ಪುಷ್ಪ' ಎಂದು ರಾಮಕೃಷ್ಣರು ಯೋಗಿನ್‌ಮಾ ಶಿಷ್ಯಳ ಆಧ್ಯಾತ್ಮಿಕ ಅನುಭವಗಳನ್ನು ಯೋಗ್ಯತೆಯನ್ನು ಕುರಿತು ಹೊಗಳುತ್ತಿದ್ದರು.

ರಾಮಕೃಷ್ಣರನ್ನು ಜೈನ ತೀರ್ಥಂಕರರು, ಸಿಕ್ಕರ ಗುರುಗಳು 'ಮಹಾಮುಕ್ತ ಪುರುಷ' ರೆಂದು ಭಕ್ತಿಯಿಂದ ಗೌರವಿಸಿದರು. ಭಗವಂತನಲ್ಲಿ ಐಕ್ಯತೆ ಹೊಂದಲು ಶಿಲಾವಿಗ್ರಹದಂತೆ ಧ್ಯಾನಮಗ್ನರಾಗಿ ಸಮಾಧಿಯಲ್ಲಿ ತನ್ಮಯರಾಗುತ್ತಿದ್ದ ಅವರು ಶಿಷ್ಯರಿಗೆ ಜೀವಿಗಳ ಉದ್ಧಾರಕ್ಕಾಗಿ ಶ್ರಮಿಸಲು ಕರೆಯಿತ್ತು, ಅದಕ್ಕಾಗಿ ತರಪೇತುಕೊಟ್ಟರು. ಬ್ರಹ್ಮ ಸಾಕ್ಷಾತ್ಕಾರವನ್ನು ಪಡೆದ ರಾಮಕೃಷ್ಣರ ಕೃಪಾ ಕಟಾಕ್ಷ ಸಂಪಾದಿಸಲು ಶಿಷ್ಯರೆಲ್ಲ ಹಗಲಿರುಳೂ ಸಾಧನೆ ಮಾಡುತ್ತಿದ್ದರು. ಶಿಷ್ಯರ ಮತ ಪಂಥ ಹಾಗೂ ಯೋಗ್ಯತೆಗೆ ತಕ್ಕಂತೆ ಅವರು ಬೋಧಿಸಿದರು. ಶಿಷ್ಯರೆಲ್ಲ ಅವರ ಸಲಹೆಯಂತೆ ನಡೆದು ಧ್ಯಾನಾಸಕ್ತರಾಗಿ ಏಕಾಗ್ರತೆಯನ್ನು ಪಡೆದು ಮುಕ್ತರಾದರು. ಸಂಸಾರದ ಕಷ್ಟಕಾರ್ಪಣ್ಯಗಳಿಗೆ ಸಿಕ್ಕಿ ಬೀಳದ ಯುವಕರು ಚಿಂತನೆಯಲ್ಲಿ ತೊಡಗಿದರೆ ಹೆಚ್ಚು ಪ್ರಯೋಜನ. ಅಂತಹವರಿಗೆ ಉಪದೇಶ ಮಾಡಿದರೆ ಹೆಚ್ಚು ಸಾರ್ಥಕ ಎಂದು ಪರಮಹಂಸರು ದೃಢವಾಗಿ ನಂಬಿದ್ದರು. ಶಿಷ್ಯರ ಮಾನಸಿಕ ಬೆಳವಣಿಗೆಗೆ ಅವರು ಬೇಕಾದಷ್ಟು ಸ್ವಾತಂತ್ರ್ಯ ಕೊಟ್ಟರೂ ಅದು ಮಿತಿಮೀರಿ ಹೋಗದಂತೆ ಎಚ್ಚರಿಕೆ ವಹಿಸುತ್ತಿದ್ದರು. ಸಂಸಾರಕ್ಕೆ ಸಿಕ್ಕಿ ನರಳುತ್ತಿದ್ದ ಗೃಹಸ್ಥರಿಗೂ ಅವರ ಸಾನಿಧ್ಯದಿಂದ ಉಪದೇಶದಿಂದ ಮನಶ್ಶಾಂತಿ ಮತ್ತು ಮುಕ್ತಿ ಸಿಕ್ಕಿತು.

ಶ್ರೀ ರಾಮಕೃಷ್ಣರು ಸಂಪೂರ್ಣ ಶರಣಾಗತರಾದವರಿಗೆ ಆಶ್ರಯ ಕೊಟ್ಟು, ತರುಣರಿಗೆ ಬಾಲಕರಿಗೆ ಮಾರ್ಗದರ್ಶನ ನೀಡಿದರು. ಭಕ್ತರಿಗೆ ತಮ್ಮ ಬಳಿಗೆ ಬಂದ ಶಿಷ್ಯರಿಗೆ ಸಾಕ್ಷಾತ್ಕಾರ ಸಂಪತ್ತನ್ನು ಧಾರೆಯೆರೆಯಲು ಅವರು ಚಡಪಡಿಸುತ್ತಿದ್ದರು. ಮಾತಿನ ಮೂಲಕ, ಅನುಭವದ ಮೂಲಕ, ನಿದರ್ಶನದ

ಮೂಲಕ ಅವರು ಶಿಷ್ಯರನ್ನು ತಯಾರುಮಾಡಿದರು. ಗುರುಗಳ ಬಾಯಿಂದ ಬರುವ ಉಪದೇಶದ ಅಮೃತ ರಸಧಾರೆಯನ್ನು ಕೇಳುತ್ತಾ ಮೈಮರೆಯು ತ್ತಿದ್ದ ಭಕ್ತರ ಎದೆಗಳಲ್ಲಿ ಭಕ್ತಿಯ ಪ್ರವಾಹವೇ ಭೋರ್ಗರೆಯುತ್ತಿತ್ತು. ಪರಮಹಂಸರು ಬೋಧನೆಗಳಿಂದ ಶಿಷ್ಯರೆದೆಗಳಲ್ಲಿ ಜ್ಞಾನದೀಪಟಿಗೆಗಳನ್ನು ಹಚ್ಚಿ, ಅವರನ್ನು ಜ್ಞಾನ, ಭಕ್ತಿ, ವೈರಾಗ್ಯಗಳಲ್ಲಿ ಪರಿಣತರನ್ನಾಗಿ ಮಾಡಿ ದರು. ಅವರು ಸರ್ವತೋಮುಖವಾಗಿ ಬೆಳೆಸಿದ ಶಿಷ್ಯರನ್ನು ತಾಯಿ ತನ್ನ ಮಕ್ಕಳನ್ನು ಸಾಕಿ ಸಲಹಿ ಪ್ರೀತಿಯಿಂದ ಹರಸಿ ಬೀಳ್ಕೊಡುವಂತೆ ಜನರ ಉದ್ಧಾರಕ್ಕಾಗಿ ದುಡಿಯುವಂತೆ ಆಶೀರ್ವದಿಸಿ ಕಳುಹಿಸಿದರು.

ಪರಮಹಂಸರ ಶಿಷ್ಯರು ಅವರು ನೀಡಿದ ಸಂದೇಶವನ್ನು ಜಗತ್ತಿಗೆಲ್ಲಾ ಹರಡಿ ದರು. ಈ ಪುಣ್ಯಾತ್ಮರಿಂದ ತ್ಯಾಗ, ವೈರಾಗ್ಯ ಮತ್ತು ವಿಶ್ವಕಾರುಣ್ಯದಿಂದ ಪೂರ್ಣಾತ್ಮರಾದ ಶಿಷ್ಯರು ಅನೇಕ ಸಂಘ ಸಂಸ್ಥೆಗಳನ್ನು ಸ್ಥಾಪಿಸಿ ಈಗಲೂ ಪ್ರಪಂಚದ ನಾನಾ ಕಡೆಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಶಿಷ್ಯರು ಪರಮ ಹಂಸರನ್ನು ತಂದೆಯಂತೆ ಪ್ರೀತಿಸುತ್ತಿದ್ದರು, ಗುರುವಿನಂತೆ ಭಕ್ತಿಯಿಂದ ಗೌರವಿಸುತ್ತಿದ್ದರು. ಸಂಯಮ, ಸಂಕೋಚಗಳನ್ನು ಬದಿಗಿಟ್ಟು ತಮ್ಮ ಹೃದಯವನ್ನೇ ಗುರುಗಳೆದುರಿನಲ್ಲಿ ತೆರೆದಿಡುತ್ತಿದ್ದರು. ಅವರ ಶಿಷ್ಯರಲ್ಲಿ ಕೆಲವರು ಕಠಿಣ ಮನಸ್ಸುಳ್ಳವರು, ಮುಗ್ಧರು, ಮತ್ತೆ ಕೆಲವರು ಹಸುಳೆಯಂಥವರೂ ಇದ್ದರು. ತಮ್ಮ ಬಳಿಗೆ ಬಂದವರನ್ನು, ಕೈಗೆ ಸಿಕ್ಕಿದವರನ್ನೆಲ್ಲ ಪರಮಹಂಸರು ಅಯಸ್ಕಾಂತದಂತೆ ತಮ್ಮ ಕಡೆಗೆ ಸೆಳೆದುಕೊಂಡು, ಅವರವರ ಅವಸ್ಥೆ ಯೋಗ್ಯತೆಗೆ ತಕ್ಕಂತೆ ಉಪದೇಶಿಸಿದರು. ಶಿಷ್ಯರಿಗೆ ವಿಮರ್ಶಾತ್ಮಕ ಬುದ್ಧಿ ಯನ್ನು ಬೆಳೆಸಿಕೊಳ್ಳುವಂತೆ ಅವರು ಸಲಹೆ ನೀಡಿ, ಶಿಷ್ಯರ ಅಲಕ್ಷ್ಯಭಾವ, ಅಜಾಗರೂಕತೆ, ಸೋಮಾರಿತನ ಮತ್ತು ಅವಿಚಾರಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸುತ್ತಿದ್ದರು.

ತಾವು ಕಂಡ ಪರಮಾತ್ಮನ ದರ್ಶನವನ್ನು ಇತರರಿಗೆ ಕೊಡಬೇಕೆಂಬ ಹಂಬಲ, ತಾವುಂಡ ಅಮೃತವನ್ನು ಎಲ್ಲರಿಗೂ ಹಂಚಬೇಕೆಂಬ ಚಪಲ ರಾಮಕೃಷ್ಣರಲ್ಲಿ ಅತಿಯಾಗಿತ್ತು. ತಮ್ಮ ಆಧ್ಯಾತ್ಮಿಕ ಅನುಭವಗಳನ್ನು ಜೀರ್ಣಿಸಿಕೊಳ್ಳುವಂತಹ ಶಿಷ್ಯನಿಗಾಗಿ ಅವರು ನಿರೀಕ್ಷೆಮಾಡತೊಡಗಿದರು. ಯಾಕೆಂದರೆ ತಾವು ಗಳಿಸಿದ್ದ ನ್ನೆಲ್ಲ ಯೋಗ್ಯವ್ಯಕ್ತಿಗೆ ದಾನಮಾಡಬೇಕೆಂದು ಅವರು ತೀರ್ಮಾನಿಸಿದರು. ನರೇಂದ್ರನನ್ನು ಭೇಟಿಯಾದ ಪ್ರಥಮದಲ್ಲೇ ಅವರು ಆತನ ಯೋಗ್ಯತೆಯನ್ನು

ತಿಳಿದುಕೊಂಡರು. ತಮ್ಮ ಸಂದೇಶವನ್ನು ಜಗತ್ತಿಗೆಲ್ಲಾ ಹರಡುವುದಕ್ಕೆ ಈತನೇ ಸರಿಯಾದ ವ್ಯಕ್ತಿ ಎಂದು ತೀರ್ಮಾನಿಸಿದ ಅವರು ತಾವು ಸಂಪಾದಿಸಿದ ಸಕಲ ಸಾಧನೆಗಳನ್ನು, ಅನುಭವಗಳನ್ನು ನರೇಂದ್ರನಿಗೆ ಧಾರೆಯೆರೆದರು. ತಮ್ಮ ಸಾಕ್ಷಾತ್ಕಾರದ ಶಕ್ತಿಯನ್ನು ಹರಿಸುವುದಕ್ಕೆ ನರೆಂದ್ರ ಯೋಗ್ಯ ಎಂದು ಅವರು ತಿಳಿದು ಅವನನ್ನು ಹದಮಾಡುವ ಸಾಹಸ ಕಾರ್ಯಕ್ಕೆ ಕೈಹಾಕಿದರು.

ರಾಮಕೃಷ್ಣರ ಪ್ರಿಯಶಿಷ್ಯನಾದ ನರೇಂದ್ರ ಪ್ರಾರಂಭದಲ್ಲಿ ಗುರುಗಳನ್ನು ಟೀಕಿಸುತ್ತಿದ್ದ. ಅವರ ಆಧ್ಯಾತ್ಮಿಕ ಅನುಭವಗಳನ್ನೂ ದೈವೀಶಕ್ತಿಯನ್ನೂ ಆಗಾಗ್ಗೆ ಒರೆಹಚ್ಚಿ ಪರೀಕ್ಷಿಸುತ್ತಿದ್ದ. ತಮ್ಮ ಅನುಭವಗಳನ್ನು ಆಸಕ್ತಿಯಿಂದ ಪರೀಕ್ಷಿಸಿ ನೋಡುತ್ತಿದ್ದ 'ಪ್ರಚಂಡ ಶಿಷ್ಯ' ನರೇಂದ್ರನನ್ನು ರಾಮಕೃಷ್ಣರು ತುಂಬ ಪ್ರೀತಿಸುತ್ತಿದ್ದರು. ಅವನ ಬುದ್ಧಿ, ಸಾಮರ್ಥ್ಯ, ತರ್ಕ ವಿಚಾರಗಳನ್ನು ಕಂಡು ಅವರು ಆನಂದಪಡುತ್ತಿದ್ದರು. ಶಿಷ್ಯ ನರೇಂದ್ರನನ್ನು ಕೆಲವು ಕಾಲ ನೋಡದಿದ್ದರೂ ಅವರ ಹೃದಯ ತಳಮಳಗೊಳ್ಳುತ್ತಿತ್ತು. ಅವನಿಗೆ ತಾವೇ ಕೈಯ್ಯಾರ ತಿಂಡಿ, ಊಟ ಕೊಟ್ಟು ಉಪಚರಿಸುತ್ತಿದ್ದರು. ಯಾರಾದರೂ ಅವನ ಮೇಲೆ ಚಾಡಿ ಹೇಳಿದರೂ ಅವರು ನಂಬುತ್ತಿರಲಿಲ್ಲ. ಅಂತಹ ನಂಬಿಕೆ ಶಿಷ್ಯನ ಮೇಲೆ ಗುರುಗಳಿಗಿತ್ತು. ಕ್ರಮೇಣ ರಾಮಕೃಷ್ಣರು ನರೇಂದ್ರನನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ಗುರುಗಳನ್ನು ಪ್ರಾರಂಭದಲ್ಲಿ ಅರ್ಥಮಾಡಿಕೊಳ್ಳದೆ ನರೇಂದ್ರನು ತೊಳಲಾಡಿದರೂ ಅಂತ್ಯದಲ್ಲಿ ಅವರ ಪ್ರತಿಯೊಂದು ಮಾತನ್ನೂ ಸತ್ಯವೆಂದು ಒಪ್ಪಿಕೊಂಡನು. ನಂತರ ಗುರುಗಳ ಅದ್ಭುತವಾದ ಪ್ರೀತಿಯಿಂದ ಬಿಡುಗಡೆ ಹೊಂದಲು ಅವನಿಗೆ ಸಾಧ್ಯವೇ ಆಗಲಿಲ್ಲ.

ನರೇಂದ್ರನು ರಾಮಕೃಷ್ಣರ ಪ್ರಿಯಶಿಷ್ಯ. ಅವನು ಗುರುಗಳನ್ನು ತಂದೆಯಂತೆ ಪ್ರೀತಿಸುತ್ತಿದ್ದ. ಮಗುವನ್ನು ತಾಯಿ ಪ್ರೀತಿಸುವಂತೆ ಗುರುಗಳು ನರೇಂದ್ರನನ್ನು ಪ್ರೀತಿಸುತ್ತಿದ್ದರು. ಈ ಗುರುಶಿಷ್ಯರ ಜೊತೆ ಜಗತ್ತಿನಲ್ಲೇ ಅಸಮಾನ್ಯ ಹಾಗೂ ಅಪರೂಪ. ಉತ್ತರ ದಕ್ಷಿಣ ಧೃವಗಳಷ್ಟು ಇಬ್ಬರಿಗೂ ಅಂತರವಿತ್ತು. ಸೂಕ್ಷ್ಮದೇಹಾರೋಗ್ಯವುಳ್ಳ ರಾಮಕೃಷ್ಣರು ಆಧ್ಯಾತ್ಮಿಕ ಜೀವನದಲ್ಲಿ ಪ್ರಚಂಡ ಸಾಧನೆಮಾಡಿದ್ದರೂ ನರೇಂದ್ರನಂತೆ ಪುಸ್ತಕ ವಿದ್ಯೆಯಲ್ಲಿ ಪಾಂಡಿತ್ಯ ಸಂಪಾದಿಸಿದವರಲ್ಲ. ಅಂಗಸಾಧನೆ ಮಾಡಿ ಗಟ್ಟಿಮುಟ್ಟಾಗಿ ಬೆಳೆದಿದ್ದ ನರೇಂದ್ರ ಅನೇಕ ಶಾಸ್ತ್ರಗ್ರಂಥಗಳನ್ನು ಓದಿ ವಿಷಯ ಸಂಗ್ರಹಿಸಿದ್ದ. ಆದರೂ

ನರೇಂದ್ರ 'ನಾನು ಅವರ ಪ್ರೇಮದ ದಾಸ' ಎಂದು ಗುರುಗಳನ್ನು ಕುರಿತು ಹೇಳುತ್ತಿದ್ದ. 'ನರೇಂದ್ರನ ಜ್ಞಾನಜ್ಯೋತಿ ನೋಡಿ, ಪ್ರಳಯಾಗ್ನಿಯಂತಿದ್ದಾನೆ. ಕಾಳಿಕಾ ಜಗನ್ಮಾತೆಯೂ ಸಹ ಅವನ ಹತ್ತಿರ ಹೋಗಲು ಹೆದರುತ್ತಾಳೆ. ಅವನಲ್ಲಿ ಜ್ಞಾನಭಾಸ್ಕರನೇ ಇದ್ದಾನೆ' ಎಂದು ರಾಮಕೃಷ್ಣರು ಪ್ರಿಯಶಿಷ್ಯ ನರೇಂದ್ರನನ್ನು ಎಲ್ಲರೆದುರಿನಲ್ಲಿ ಮುಕ್ತಕಂಠದಿಂದ ಹೊಗಳಿ ಅವನ ಯೋಗ್ಯತೆಯನ್ನು ಎಲ್ಲರಿಗೂ ಎತ್ತಿಹಿಡಿದು ತೋರಿಸಿದರು.

ಮೂರ್ತಿಪೂಜೆಯಲ್ಲಿ ವಿಶ್ವಾಸವಿದ್ದ ರಾಮಕೃಷ್ಣರು ವಿಗ್ರಹಗಳೆಲ್ಲ ಆಧ್ಯಾತ್ಮಿಕ ಚಿಹ್ನೆಗಳು, ಸಾಕಾರ ನಿರಾಕಾರ ಭಗವಂತನ ಪ್ರತೀಕ ಎಂದು ಹೇಳಿದರೂ ನರೇಂದ್ರ ಮೊದಲು ಒಪ್ಪಿಕೊಳ್ಳಲಿಲ್ಲ. ಯಾಕೆಂದರೆ ವಿಗ್ರಹಾರಾಧನೆಯನ್ನು ಅವನು ಕಟುವಾಗಿ ಟೀಕಿಸುತ್ತಿದ್ದ. ವಿಗ್ರಹಗಳು, ಕರ್ಮ, ಸಿದ್ಧಾಂತಗಳು, ಸಂಕೇತ, ಶಿಲುಬೆ ಮುಂತಾದ ವಿಧಾನಗಳನ್ನು ಧರ್ಮ ನಂಬಿಕೆಯಲ್ಲಿ ಗುರಿಯಿಡಲು ಉಪಯೋಗಿಸಿಕೊಂಡಿದೆ. ಮೂರ್ತಿಪೂಜೆ ವಿಗ್ರಹಗಳ ಸಂಕೇತ ಪರಮಾತ್ಮನನ್ನು ಮಿತಿಗೊಳಿಸುವುದಿಲ್ಲ. ವಿಗ್ರಹಗಳ ಮೂಲಕ ಭಗವಂತನನ್ನು ನೋಡಲು, ಆತನನ್ನು ಅರ್ಥಮಾಡಿಕೊಳ್ಳಲು ನಮಗೆ ಸಾಧ್ಯ. ಸಂಕೇತಗಳು ನಮಗೆ ಮಾರ್ಗದರ್ಶನ ನೀಡುವುವು. ಆದರೆ ಸಂಕೇತವನ್ನೇ ಸತ್ಯವೆಂದು ತಿಳಿಯುವುದು ಮೂರ್ಖತನ. ಸಂಬಂಧವನ್ನು ಅನಂತವೆಂದು ತಿಳಿದಾಗ ತೊಂದರೆಗಳು ಉದ್ಭವಿಸಿ ಮೂರ್ತಿಪೂಜೆ ಹರಡುತ್ತದೆ. ಮಾನವ ಜನಾಂಗದ ಆಧ್ಯಾತ್ಮಿಕ ಬೆಳವಣಿಗೆಗೆ ಇದು ಅಡ್ಡಿಯಾಗುವುದರಲ್ಲಿ ಸಂದೇಹವಿಲ್ಲ. ವಿಗ್ರಹಗಳು ಪರಮಾತ್ಮನ ಘನೀಭೂತವಾದ ಗುಣವಲ್ಲದೆ ಬೇರೆಯಲ್ಲ. ವಿಗ್ರಹ ಚಿಹ್ನೆಗಳು ಭಕ್ತನಿಗೆ ಭಗವಂತನ ನೆನಪು ಮಾಡಿಕೊಡುತ್ತವೆ. ಸಂಕೇತದ ಸರಿಯಾದ ಸ್ಥಾನವನ್ನು ನಾವು ತಿಳಿದುಕೊಂಡರೆ ಖಂಡಿತವಾಗಿ ಆಧ್ಯಾತ್ಮಿಕ ಸತ್ಯವನ್ನು ಮುಟ್ಟಲು ಸಾಧ್ಯ. ಆದ್ದರಿಂದ ಮೂರ್ತಿಪೂಜೆ ಮಾಡುವುದರಿಂದ ಉಪಯೋಗವಿದೆಯೆ ಹೊರತು ಅನರ್ಥವಿಲ್ಲವೆಂದು ರಾಮಕೃಷ್ಣರು ಜಗತ್ತಿಗೇ ಸಂದೇಶ ನೀಡಿದರು. ಪರಿಶುದ್ಧವಾದ ಹೃದಯ, ಅಪಾರ ಜ್ಞಾನ ಸಂಪತ್ತು, ಪ್ರಚಂಡ ವಿಮರ್ಶಕ ಶಕ್ತಿಯುಳ್ಳ ನರೇಂದ್ರ ರಾಮಕೃಷ್ಣರ ಬೋಧನೆಯಿಂದ ಕ್ರಮೇಣ ಅವರನ್ನು ಟೀಕಿಸುವುದನ್ನು ನಿಲ್ಲಿಸಿದ.

ಪ್ರತ್ಯಕ್ಷ ದೇವರ ಸಮಾನನಾದ ಗುರು ಪೂಜಿಸಲರ್ಹ. ಗುರು ಶಿಷ್ಯನ

ಮನಸ್ಸಿನ ಅಜ್ಞಾನ, ದೋಷಗಳನ್ನು ದೂರಮಾಡಿ, ಆತನ ಚಿತ್ತವನ್ನು ಶುದ್ಧೀ ಕರಿಸಿ, ಅವನು ಮತ್ತೊಂದು ಕಡೆ ಶೋಧನಕ್ಕೆ ಹೋಗದಂತೆ ಮಾಡಬೇಕು. ಶಿಷ್ಯನನ್ನು ಗುರು ಭವತಾಪದಿಂದ ಮುಕ್ತಿಗೊಳಿಸಿ, ಅವನಲ್ಲಿ ಗುರುಭಕ್ತಿ ಶ್ರದ್ಧೆ ಹುಟ್ಟಿಸಿ ದೀಕ್ಷೆ ಕೊಡಬೇಕು. ಶಿಷ್ಯ ಆಚರಿಸಿದ ಗುರುಭಕ್ತಿಯ ಪ್ರಮಾಣ ದಲ್ಲಿ ಅವನಿಗೆ ಫಲಪ್ರಮಾಣ ಸಿಕ್ಕುತ್ತದೆ ಎನ್ನುತ್ತಿದ್ದ ಪರಮಹಂಸರು ಶಿಷ್ಯ ನರೇಂದ್ರನನ್ನು ಮನಸ್ಸಿಗೆ ತುಂಬಾ ಹಚ್ಚಿಕೊಂಡಿದ್ದರು. ಅಂತ್ಯದಲ್ಲಿ ಅವರು 'ನಿನಗೆ ನಾನು ಕೊಟ್ಟಿರುವ ಶಕ್ತಿ, ಸಾಮರ್ಥ್ಯದಿಂದ ಜಗತ್ತಿನ ಕಲ್ಯಾಣಕ್ಕಾಗಿ ದುಡಿ' ಎಂದು ನರೇಂದ್ರನನ್ನು ಹರಸಿದರು.

ಶ್ರೀ ರಾಮಕೃಷ್ಣರಲ್ಲಿ ಪರಮಾತ್ಮನ ಹಂಬಲ ಅತೀವವಾಗಿತ್ತು. ಸರ್ವ ನಾಶಕ, ಸೃಷ್ಟಿಕರ್ತ, ಪ್ರಪಂಚ ರಕ್ಷಕ, ಆತ್ಮ, ಈಶ್ವರ, ಸರ್ವವ್ಯಾಪಿ, ವಿವಿಧ, ಸ್ವರೂಪಿ, ತಂದೆ, ಸ್ನೇಹಿತ, ಪ್ರೇಮಿ, ·ಅನಂತಶಕ್ತಿ ಎಂದು ಭಗವಂತನನ್ನು ಆರಾಧಿಸುವವರಲ್ಲಿ ರಾಮಕೃಷ್ಣರಿಗೆ ಉನ್ನತ ಸ್ಥಾನವಿದೆ. ಪಂಚಭೂತಗಳಿಂದ ಸೃಷ್ಟಿಯಾಗಿರುವ ಈ ಜಗತ್ತು ಬ್ರಹ್ಮಮಯ, ಎಲ್ಲವೂ ಬ್ರಹ್ಮನಿಯಾಮಕ. ಆದ್ದರಿಂದ ಎಲ್ಲೆಲ್ಲಿಯೂ, ಎಲ್ಲದರಲ್ಲಿಯೂ ಭಗವಂತನನ್ನು ನೋಡುವ ಅಭ್ಯಾಸ ಮಾಡಬೇಕು. ಹಾಲಿನಲ್ಲಿ ಬೆಣ್ಣೆ ಇರುವಂತೆ, ಕಣ್ಣಿಗೆ ಕಾಣಿಸದಿದ್ದರೂ ಬೆಳಗಿನ ಹೊತ್ತು ಗಗನದಲ್ಲಿ ನಕ್ಷತ್ರ ಇರುವಂತೆ ದೇವರಿರುವುದು ಸತ್ಯ. ದೇವರು ಸ್ವಾಮಿ, ತಾನು ಆತನ ಸೇವಕ ಎಂದು ಧೃಢವಾಗಿ ನಂಬಿದ್ದ ರಾಮಕೃಷ್ಣರು ಭಗವಂತನ ಚರಣಧ್ಯಾನಾನಂದವನ್ನಲ್ಲದೆ ಬೇರೆ ಏನನ್ನೂ ಅಪೇಕ್ಷಿಸಲಿಲ್ಲ. ಕಠಿಣವಾದ ಮನೋನಿಶ್ಚಯದಿಂದ, ಸಾಧನೆಯಿಂದ ಎಲ್ಲವೂ ಬ್ರಹ್ಮನೆಂದು ತಿಳಿಯುವುದೇ ಸಾಕ್ಷಾತ್ಕಾರ ಎಂದು ಅವರು ಶಿಷ್ಯರಿಗೆ ಬೋಧಿಸಿದರು. ಹುಟ್ಟು, ಸಾವು, ರೋಗರುಜಿನ ಇವುಗಳ ಮೇಲೆ ಹುಲುಮಾನವನಿಗೆ ಯಾವ ಹತೋ ಟಿಯೂ ಇಲ್ಲ ಎಂದು ಸ್ಪಷ್ಟಪಡಿಸಿ, ತನ್ನ ಅಲ್ಪಬುದ್ಧಿಯಿಂದ ದೇವರನ್ನೆಲ್ಲಾ ಚೆನ್ನಾಗಿ ತಿಳಿಯಬಲ್ಲೆ ಎನ್ನುವ ಮಾನವನ ಅಹಂಕಾರವನ್ನು ಅವರು ಖಂಡಿಸಿದರು.

ಆತ್ಮಕಲ್ಯಾಣಕ್ಕಾಗಿ, ಮೋಕ್ಷಸಾಧನೆಗಾಗಿ, ಈಶ್ವರ ಸಾಕ್ಷಾತ್ಕಾರಕ್ಕಾಗಿ, ತತ್ತ್ವಮಸಿಗಾಗಿ ಕಲಿಯುಗದಲ್ಲಿ ಭಕ್ತಿಮಾರ್ಗವೊಂದೇ ಸಾಧನವೆಂದು ವೇದ, ಪುರಾಣ, ಶಾಸ್ತ್ರಗಳು ಹೇಳುವುದನ್ನು ರಾಮಕೃಷ್ಣರು ಸಂಪೂರ್ಣವಾಗಿ ನಂಬಿ

ದ್ದರು. ಬ್ರಹ್ಮ ಒಂದೇ ಸತ್ಯ, ಉಳಿದುದೆಲ್ಲ ಮಿಥ್ಯ. ರಾಮ, ಕೃಷ್ಣ, ಏಸು, ಅಲ್ಲಾ, ಪೈಗಂಬರ್ ಈ ನಾಮರೂಪಗಳೆಲ್ಲ ಕ್ಷಣಿಕ. ನಿರಾಕಾರ ಬ್ರಹ್ಮ ಒಂದು ವ್ಯಕ್ತಿಯಲ್ಲ. ಆದ್ದರಿಂದ ಅವನನ್ನು ವಿವರಿಸಲು ಸಾಧ್ಯವಿಲ್ಲ. ಜ್ಞಾನಿಗಳು ಯಾರನ್ನು ಬ್ರಹ್ಮ ಎನ್ನುವರೋ ಅವನನ್ನೇ ಯೋಗಿಗಳು ಆತ್ಮ ಮತ್ತು ಭಕ್ತರು ಭಗವಾನ್ ಎನ್ನುವರು. ಭಕ್ತನ ಅತಿಶಯವಾದ ಭಕ್ತಿಯ ಪರಿಣಾಮವಾಗಿ ಬ್ರಹ್ಮ ಹಲವಾರು ಆಕಾರಗಳನ್ನು ಪಡೆಯುತ್ತಾನೆ. ಅನೇಕ ಹೆಸರುಗಳನ್ನು ಹೊಂದುತ್ತಾನೆ. ಧ್ಯಾನ, ವೈರಾಗ್ಯ, ವಿವೇಕವಿಲ್ಲದ ಪಾಂಡಿತ್ಯದಿಂದ ಏನೂ ಪ್ರಯೋಜನವಿಲ್ಲ. ಆಸಕ್ತಿಯಿಲ್ಲದೆ, ಪ್ರತಿಫಲಾಪೇಕ್ಷೆ ಇಲ್ಲದೆ ಕರ್ಮಗಳನ್ನು ಮಾಡುವವನು ಬ್ರಹ್ಮನನ್ನು ಪಡೆಯಲು ಸಾಧ್ಯ. ಸಾಕ್ಷಾತ್ಕಾರ ಹೊಂದುವ ವರೆಗೆ ಮಾನವ ಮತ್ತೆ ಮತ್ತೆ ಹುಟ್ಟುತ್ತಾನೆ. ನಂತರ ಅವನಿಗೆ ಪುನರ್ಜನ್ಮ ವಿಲ್ಲ. ಭಗವದಾನಂದವನ್ನು ಅನುಭವಿಸಿದವರಿಗೆ ಇಂದ್ರಿಯ ಸುಖ ಬೇಕಿಲ್ಲ, ಜಗತ್ತೇ ಸಪ್ಪೆ. ಪರಮಾತ್ಮನನ್ನು ದರ್ಶನ ಮಾಡಿದಮೇಲೆ, ಆ ಆನಂದದ ರುಚಿ ನೋಡಿದಮೇಲೆ ಮತ್ಯಾವುದೂ ಮಾನವನಿಗೆ ರುಚಿಸದು. ಭಗವಂತನೆಂಬ ಅಮೃತಸಾಗರದಲ್ಲಿ ಮುಳುಗಿದವನಿಗೆ ಖಂಡಿತ ಸಾವಿಲ್ಲ. ಕರ್ಮಗಳನ್ನು ತ್ಯಜಿಸಿ ಸಂಸಾರವೆಂಬ ನೀರನ್ನು ತಿರಸ್ಕರಿಸಿ ಜ್ಞಾನವೆಂಬ ಹಾಲನ್ನು ತೆಗೆದುಕೊಂಡು ವಿವೇಕ, ವೈರಾಗ್ಯಗಳನ್ನು ಹೃದಯದಲ್ಲಿ ತುಂಬಿ ಅಲ್ಲಿ ಭಗವಂತನನ್ನು ಪ್ರತಿಷ್ಠೆ ಮಾಡಿ ಎಂದು ಪರಮಹಂಸರು ಜನತೆಗೆ ಉಪದೇಶಿಸಿದರು. ಭಕ್ತ ಯಾವ ರೂಪದಲ್ಲಿ ಪ್ರೀತಿಸುತ್ತಾನೋ ಆ ರೂಪದಲ್ಲಿ ಭಗವಂತ ಭಕ್ತನ ಕಣ್ಣಿಗೆ ಕಾಣಿಸಿಕೊಳ್ಳುತ್ತಾನೆ. ದೇಹ ಮಂದಿರದಿಂದ ಅಂಧಕಾರವನ್ನು ತೊಲಗಿಸಿ ಕಣ್ತೆರೆದು ಜ್ಞಾನದೀಪದ ಬೆಳಕಿನಲ್ಲಿರುವ ಪರಮಾತ್ಮನೊಡನೆ ಈ ಜೀವಾತ್ಮ ನನ್ನು ಸೇರಿಸಬೇಕೆಂದು ಅವರು ಬೋಧಿಸಿದರು.

ಜಗತ್ತಿಗೆ ದೇವರ ಅವಶ್ಯಕತೆ ಎಷ್ಟಿದೆಯೋ ಅಷ್ಟೇ ಅವಶ್ಯಕತೆ ದೇವರಿ ಗುಂಟು. ಸಾಧುಸಂಗದಲ್ಲಿ ಅವನ ನಾಮವನ್ನು ಉಚ್ಚರಿಸುತ್ತಾ, ಅವನ ಕೀರ್ತಿಯನ್ನು ಕೊಂಡಾಡುತ್ತಾ ಭಗವಂತನ ಭಕ್ತರನ್ನು, ಮಹಾತ್ಮರನ್ನು ನೋಡುತ್ತಾ, ಮನಸ್ಸನ್ನೆಲ್ಲಾ ದೇವರ ಮೇಲಿಟ್ಟು, ಪ್ರಪಂಚದ ಕರ್ತವ್ಯವನ್ನು ಮಾಡಿ. ಆದರೆ ಅದರಿಂದ ಬಿಡುಗಡೆ ಹೊಂದಿ ನಿರ್ಜನ ಪ್ರದೇಶದಲ್ಲಿ ಚಿಂತನೆ ಮಾಡಿದರೆ ಭಕ್ತಿ, ಜ್ಞಾನ, ವೈರಾಗ್ಯ ಸಿಕ್ಕುತ್ತದೆ ಎಂದು ಪರಮಹಂಸರು

ಜನತೆಗೆ ಭರವಸೆ ಕೊಟ್ಟರು. ಬ್ರಹ್ಮಶಕ್ತಿ ಸಂಪಾದಿಸಿದ ಮಾನವನ ಮರು ಭೂಮಿ ಸ್ವರ್ಗವಾಗುವುದು. ಭಗವಂತನಲ್ಲಿ ನಿವೇದಿಸಲು ತಾಳ್ಮೆ, ಔದಾರ್ಯ, ನಿಸ್ವಾರ್ಥತೆ ಅವನಿಗೆ ಅತ್ಯಗತ್ಯ. ಭಗವಂತನ ನಿಜಸ್ವರೂಪಗಳನ್ನು ಅರ್ಥ ಮಾಡಿಕೊಳ್ಳಲು ನಾಲ್ಕು ಹಂತಗಳಿವೆ. ಅವುಗಳು ಯಾವುವೆಂದರೆ— ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಮತ್ತು ಸಾಯುಜ್ಯ. ದೇವರು ಭಕ್ತ ಒಂದೇ ಜಗತ್ತಿನಲ್ಲಿ ವಾಸಿಸುವುದು ಸಾಲೋಕ್ಯ, ಭಕ್ತ ದೇವರ ಸಮೀಪಕ್ಕೆ ಬರುವುದು ಸಾಮೀಪ್ಯ, ಭಕ್ತ ಕ್ರಮೇಣ ದೇವರ ಆಕಾರ, ಗುಣಗಳನ್ನು ಹೊಂದುವುದು ಸಾರೂಪ್ಯ. ಅಂತ್ಯದಲ್ಲಿ ಭಕ್ತ ದೇವರಲ್ಲಿ ಐಕ್ಯತೆ ಹೊಂದುವುದೇ ಸಾಯುಜ್ಯ ಎಂದು ಪರಮಹಂಸರು ವಿಶ್ಲೇಷಿಸಿದರು.

ರಾಮಕೃಷ್ಣರು ನಿರ್ವಂಚನೆಯಿಂದ ದೇವರನ್ನು ಪೂಜಿಸಿ, ಕರ್ಮದಿಂದ ಮುಕ್ತಿಹೊಂದಿ, ಪ್ರಾರ್ಥನೆಯಿಂದ ಪವಿತ್ರ ಜೀವನ, ಸಾಧನೆ ಮತ್ತು ಸರಳ ಜೀವನದಿಂದ ಸಾಕ್ಷಾತ್ಕಾರ ಪಡೆದುಕೊಂಡರು. ಎಲ್ಲದರಲ್ಲೂ ದೇವರನ್ನು ನೋಡಿ, ಎಲ್ಲ ವಸ್ತುಗಳ ಮೇಲೂ ದೇವರ ಭಾವನೆಯನ್ನು ಲೇಪನ ಮಾಡಿ, ದುಃಖಕ್ಕೆ ಸಿಕ್ಕಿರುವ ಜನರನ್ನು ಉದ್ಧಾರ ಮಾಡುವುದೇ ಅವರ ಗುರಿಯಾಗಿತ್ತು. ಗೋವಿಂದರಾಯ್ ಎಂಬುವನಿಂದ ಅವರು ಇಸ್ಲಾಂ ಮತ ದೀಕ್ಷೆಯನ್ನು ಸ್ವೀಕರಿಸಿದರು. ಕ್ರೈಸ್ತ ಧರ್ಮವೂ ಅವರ ಹೃದಯವನ್ನು ಸೇರಿತು. ಬೌದ್ಧ, ಜೈನ ಧರ್ಮಗಳೆಲ್ಲ ಸತ್ಯದ ಕಡೆಗೆ ಹೋಗುವ ಹಲವು ಪಂಥಗಳು ಎನ್ನುತ್ತಿದ್ದ ರಾಮಕೃಷ್ಣರು ಒಂದಕ್ಕಿಂತ ಹೆಚ್ಚು ವಸ್ತುವಿನ ಮೇಲೆ ಆಸಕ್ತಿಹೊಂದಿದ ಮನಸ್ಸು ದೇವರನ್ನು ಕಾಣಲಾರದು ಎಂದರು.

ರಾಮಕೃಷ್ಣರು ಸರ್ವಧರ್ಮ ಸಮನ್ವಯಾಚಾರ್ಯರು. ಧರ್ಮಸಾಧನೆಗಾಗಿ ಅವರಂತೆ ಯಾರೂ ತಪಸ್ಸನ್ನಾಚರಿಸಲಿಲ್ಲ. ಅವರು ಸರ್ವಧರ್ಮಗಳನ್ನು ತಿಳಿದುಕೊಂಡು, ಅವುಗಳಲ್ಲಿರುವ ಸತ್ತ್ವವನ್ನು ಅರ್ಥಮಾಡಿಕೊಂಡು ಸಿದ್ಧಿ ಸಾಧಿಸಿ ಮಹಾ ಕರ್ಮಯೋಗಿಗಳೆನಿಸಿಕೊಂಡರು. ಯಾವ ಧರ್ಮವನ್ನೂ ಅವರು ಟೀಕಿಸಲಿಲ್ಲ, ಧರ್ಮದ ಬಗ್ಗೆ ಯಾವ ಗ್ರಂಥವನ್ನೂ ರಚಿಸಲಿಲ್ಲ, ಯಾವ ಹೊಸಧರ್ಮವನ್ನೂ ಸೃಷ್ಟಿಸಲಿಲ್ಲ. ಆದರೆ ಎಲ್ಲ ಧರ್ಮಗಳ ಗುರಿಯೂ ಒಂದೇ. ಸಕ್ಕರೆಯ ವಿವಿಧ ಆಕಾರದ ಬೊಂಬೆಗಳಂತೆ, ವಿವಿಧ ಆಕಾರದ ಚಿನ್ನದೊಡವೆಗಳಂತೆ, ವಿವಿಧ ಆಕಾರ ಹೆಸರುಗಳನ್ನುಳ್ಳ ದೈವ ಇರುವುದೂ

ಒಂದೇ. ಬ್ರಹ್ಮದರ್ಶನವೆಂಬ ಆಧ್ಯಾತ್ಮಿಕ ಅನುಭವ ಪಡೆಯುವುದೇ ಧರ್ಮದ ಗುರಿ' ಎಂದು ಅವರು ಸಾರಿದರು. ಧಾರ್ಮಿಕ ಅನುಭವ ಸ್ಪಷ್ಟವಾಗಿ, ನೇರ ವಾಗಿ ಪರಿಶುದ್ಧವಾಗಿದ್ದರೆ ಅದು ಆನಂದ ಕೊಡುತ್ತದೆ, ಆಧ್ಯಾತ್ಮಿಕವನ್ನು ಬೆಳಕಿಗೆ ತರುತ್ತದೆ. ಧರ್ಮ ಪಾತಿವ್ರತ್ಯಕ್ಕಿಂತ ಪವಿತ್ರವಾದದ್ದು. ಧರ್ಮ ತ್ಯಾಗಕ್ಕಿಂತ ಮಿಗಿಲಾದದ್ದು, ಭಯಭಕ್ತಿ ಹುಟ್ಟಿಸುವಂತಹುದು ಎಂದು ಉಪದೇಶಿಸಿದ ರಾಮಕೃಷ್ಣರು ಪಾಪಿಗಳ ಉದ್ಧಾರಕ್ಕಾಗಿ ತಮ್ಮ ಜೀವಿತವನ್ನೆಲ್ಲ ಸವೆಸಿದರು.

ನೆಲದ ಮೇಲೆ ಬಿದ್ದು ಹೊರಳಾಡುತ್ತಿದ್ದ ಹಿಂದೂಧರ್ಮಕ್ಕೆ ಚೈತನ್ಯ ನೀಡಿ ಮೇಲೆತ್ತಿ ನಿಲ್ಲಿಸಲು ನೆರವಾದ ರಾಮಕೃಷ್ಣರು ಹಣ, ಯಶಸ್ಸಿಗಿಂತ ಹೆಚ್ಚಿನ ಮಹತ್ವ ಆತ್ಮದ ಶಕ್ತಿಗೆ ಇದೆಯೆಂದರು. ಭರತಖಂಡದಲ್ಲಿ ಪ್ರಚಾರದಲ್ಲಿರುವ ಶೈವ, ವೈಷ್ಣವ, ವೈದಿಕ, ಶಾಕ್ತ, ಕ್ರೈಸ್ತ, ಮಹಮ್ಮದನ ಮತಗಳನ್ನೆಲ್ಲಾ ಅವರು ಸಾಧನೆಮಾಡಿ, ಏಕಪ್ರಕಾರವಾಗಿ ಎಲ್ಲಾ ಮತಗಳಲ್ಲಿಯೂ ಬ್ರಹ್ಮ ದರ್ಶನ ಮಾಡಿದರು. ಅದ್ವೈತ ವೇದಾಂತದ ಆಧ್ಯಾತ್ಮಿಕ ನಿಲುಗಡೆಯನ್ನು ಅವರು ಅನುಸರಿಸಿ, ಬ್ರಹ್ಮಸಾಕ್ಷಾತ್ಕಾರಕ್ಕೆ ಕಠಿಣವಾದ ಮನೋನಿರ್ಧಾರ ಅಗತ್ಯವೆಂದರು. 'ಉಪಕಾರ', 'ಸೇವೆ' ಎನ್ನುವ ಪದಗಳನ್ನು ಕೇಳಿದರೇ ಸಾಕು ಅವರು ಸಿಟ್ಟಾಗುತ್ತಿದ್ದರು. ಉಪಕಾರ, ಸೇವೆ, ಅಹಂಕಾರದ ಮಾತುಗಳು, ಅಹಂಭಾವದ ಮೊಟ್ಟೆಗಳು. ಮಾಡುವ ಕೆಲಸವನ್ನು ಪರರ ಹಿತಕ್ಕಾಗಿ ಮಾಡ ಬೇಕು. ಕರ್ಮಕ್ಕಾಗಿಯೇ ಮಾಡುವ ಕರ್ಮ ಉಪಕಾರವಲ್ಲ, ಭಗವಂತನ ಸೇವೆ ಎಂದು ರಾಮಕೃಷ್ಣರು ಸ್ಪಷ್ಟಪಡಿಸಿದರು. 'ದೇವರ ವಿನಾ ಒಂದು ಜೀವಿ ಮತ್ತೊಂದು ಜೀವಿಗೆ ಪರೋಪಕಾರ ಮಾಡಲಾರ. ಭಗವಂತನಿಗೆ ಮಾಡುವ ಸೇವೆಯಿಂದ ನಾವು ಉದ್ಧಾರವಾಗುತ್ತೇವೆ, ನಮ್ಮ ಮನಸ್ಸಿನ ಕಲ್ಮಷವೆಲ್ಲಾ ಹೋಗಿ ನಾವು ಪರಿಶುದ್ಧವಾಗುತ್ತೇವೆ ಮತ್ತು ನಮ್ಮಲ್ಲಿ ಪರಂಜ್ಯೋತಿ ಹೊಳೆಯುತ್ತದೆ' ಎನ್ನುವ ಮಾತು ಗುರುಗಳ ಬಾಯಿಂದ ಕೇಳಿದ ವಿವೇಕಾ ನಂದರು 'ಒಂದು ದೊಡ್ಡ ಸತ್ಯವನ್ನು ನಾನಿಂದು ಕೇಳಿದೆ. ಬದುಕಿರುವ ವರೆಗೂ ಇದನ್ನು ಪ್ರಪಂಚಕ್ಕೆಲ್ಲಾ ಸಾರುತ್ತೇನೆ' ಎಂದು ಮನಸ್ಸಿನಲ್ಲೇ ತೀರ್ಮಾನಿಸಿದರು. ಈ ಸತ್ಪುರುಷರು ನಿಷ್ಕಾಮಕರ್ಮದಿಂದ ಪರಮಾತ್ಮನ ಸಾನ್ನಿಧ್ಯ ಪಡೆಯಿರಿ ಎಂದು ಶಿಷ್ಯರಿಗೆ ಉಪದೇಶಿಸಿ ಸಮಾಧಿಯಿಂದ ಬ್ರಹ್ಮನನ್ನು

ಉಪಾಸನೆ ಮಾಡಿ ಹಿಂದೂಧರ್ಮದ ಸತ್ತ್ವವನ್ನು, ಮಾಧುರ್ಯವನ್ನು ಎಲ್ಲರಿಗೂ ತಿಳಿಸಿದರು.

ಮದುವೆಯಾಗಿ ಮನೆಯಲ್ಲಿ ಹೆಂಡತಿ ಇದ್ದರೂ ರಾಮಕೃಷ್ಣರು ಕಟ್ಟುನಿಟ್ಟಾಗಿ ಬ್ರಹ್ಮಚರ್ಯ ವ್ರತವನ್ನು ಪಾಲಿಸಿ ಅದರ ಮಹತ್ವವನ್ನು ಜನತೆಗೆ ಉಪದೇಶಿಸಿದರು. ಬ್ರಹ್ಮಚರ್ಯೆಯಿಲ್ಲದವನು ಏನನ್ನೂ ಸಾಧಿಸಲಾರ. ಈ ಸಾಧನೆಯಿಂದ ಸ್ಥಿರ ಮನಸ್ಸು ಲಭ್ಯವಾಗುವುದು, ಮಾನವನು ಬಲಿಷ್ಠನಾಗುವನು, ಮಹಾ ತೇಜಸ್ವಿಯಾಗುವನು, ಅವನಿಗೆ ಅದ್ಭುತ ದೈವೀಶಕ್ತಿಯೂ ಪ್ರಾಪ್ತವಾಗುವುದು, ಅಂತ್ಯದಲ್ಲಿ ಅವನು ಭಗವಂತನೇ ಆಗಿಬಿಡುವನು. ಕಾಯಾ, ವಾಚಾ, ಮನಸಾ ಬ್ರಹ್ಮಚರ್ಯ ಪಾಲನೆ ಮಾಡಿದವನಿಗೆ ಮಾತ್ರ ಈ ಅದ್ಭುತ ಯೋಗಸಿದ್ಧಿ ಸಾಧಿಸುವುದು ಸಾಧ್ಯ. ಇಂದ್ರಿಯ ಸಂಯಮ, ದೈಹಿಕ ಬಲ, ಮೇಧಾಶಕ್ತಿ, ಸ್ಥೈರ್ಯ, ಧೈರ್ಯ, ಆನಂದ ಇವೆಲ್ಲಾ ಬ್ರಹ್ಮಚರ್ಯಾಚರಣೆಗಳು. ಹನ್ನೆರಡು ವರ್ಷ ಅಖಂಡ ಬ್ರಹ್ಮಚರ್ಯೆ ಪಾಲಿಸಿದವನು ಕುಂಡಲಿನೀ ಶಕ್ತಿ ಎಂಬ ಅಪೂರ್ವ ಶಕ್ತಿ ಪಡೆದು ಸರ್ವಜ್ಞನಾಗುತ್ತಾನೆ ಎಂದು ರಾಮಕೃಷ್ಣರು ಸ್ಪಷ್ಟಪಡಿಸಿದರು.

ಮಾನವನ ಪ್ರೀತಿಯ ಆಳವನ್ನು ಈ ಮಹಾಪುರುಷರು ಕಂಡಿದ್ದರೂ, ಪ್ರೀತಿ, ಸ್ನೇಹ, ವಾತ್ಸಲ್ಯ, ಮರುಕ, ದಯೆಯೆಂಬ ಮಾನವ ಭಾವನೆಗಳನ್ನು ತೀವ್ರವಾಗಿ ಅನುಭವಿಸುತ್ತಿದ್ದರೂ ಅದಕ್ಕೆ ಅವರೆಂದೂ ಸಿಕ್ಕಿಬೀಳಲಿಲ್ಲ. ಒಮ್ಮೆ ಸಿಕ್ಕಿಬಿದ್ದರೆ ಸಾಕು ಅವುಗಳಿಂದ ಬಿಡುಗಡೆ ಹೊಂದಲಾರೆ ಎನ್ನುವುದನ್ನು ಮನಗಂಡಿದ್ದ ಅವರು ಮುಂಜಾಗ್ರತೆ ವಹಿಸಿದರು. ಬಡವರನ್ನು, ಹೊಟ್ಟೆಗಿಲ್ಲದ ನಿರ್ಗತಿಕರನ್ನು ನೋಡಿ ರಾಮಕೃಷ್ಣರು ಮರುಗುತ್ತಿದ್ದರು. ದರಿದ್ರನಾರಾಯಣನ ಸೇವೆಮಾಡಿ ಎಂದು ಶ್ರೀಮಂತರಿಂದ ಬಡವರಿಗೆ ಅನ್ನವಸ್ತ್ರದಾನ ಮಾಡಿಸಿದರು. ಪವಾಡಗಳಿಂದ ದೂರವಾಗಿದ್ದ ಈ ಪುಣ್ಯಪುರುಷರು ಪಾಪಿಗಳನ್ನೂ ಉದ್ಧಾರ ಮಾಡಿದರು.

ಸ್ತ್ರೀಯರ ದರ್ಶನ, ಸ್ಪರ್ಶನಗಳು ರಾಮಕೃಷ್ಣರಲ್ಲಿ ಭಗವದ್ಭಾವನೆಯನ್ನು ಉದ್ದೀಪನಗೊಳಿಸುತ್ತಿದ್ದವು. ಸ್ತ್ರೀಯರನ್ನು ಭಗವತಿಯ ಸ್ವರೂಪ, ಜಗನ್ಮಾತೆ ಅವತಾರ ಎನ್ನುವ ದೃಷ್ಟಿಯಿಂದಲೇ ಅವರು ನೋಡುತ್ತಿದ್ದರು. ಕಾಮಿನೀ ಕಾಂಚನವನ್ನು ತ್ಯಜಿಸಿ, ಬ್ರಹ್ಮಚರ್ಯೆ ದೀಕ್ಷೆಯನ್ನು ನಿಷ್ಠೆಯಿಂದ ಅನುಸರಿಸ

ಬೇಕೆಂದು ಯುವಕರಿಗೆ ಕರೆಯಿತ್ತ ಅವರು ಸ್ತ್ರೀದ್ವೇಷಿಯಲ್ಲ. ಆದಿಶಕ್ತಿ ಸ್ತ್ರೀ ಮಹಾಮಾಯೆ ಹೆಣ್ಣು ಗುರುವಾಗಬಲ್ಲಳು, ನಮ್ಮನ್ನು ಸಾಕಬಲ್ಲಳು ಎನ್ನುತ್ತಿದ್ದ ಪರಮಹಂಸರು ಸ್ತ್ರೀಯರನ್ನು ಮಾತೃಭಾವದಿಂದ ನೋಡುತ್ತಿದ್ದರು. ಅವರೊಡನೆ ವಾತ್ಸಲ್ಯಭಾವದಿಂದ ನಡೆದುಕೊಳ್ಳುತ್ತಿದ್ದರು.

ಬದುಕಿನ ಸೆಳೆತದಿಂದ ದೂರವಾಗಿದ್ದರೂ ಸಾಮಾನ್ಯ ಜನರ ವೈಯಕ್ತಿಕ ಜೀವನ ಹಾಗೂ ಸಾರ್ವತ್ರಿಕ ಸಮಸ್ಯೆಗಳಿಗೆ ರಾಮಕೃಷ್ಣರು ಸಲಹೆ ನೀಡಿದರು. ವಿಶಾಲವಾದ, ಆಳವಾದ, ಅತ್ಯಂತ ಪ್ರಾಚೀನವಾದ ಹಿಂದೂಧರ್ಮದ ಅವಸಾನಕಾಲದಲ್ಲಿ ಅವತರಿಸಿದ ಶ್ರೀ ರಾಮಕೃಷ್ಣರು ಅದಕ್ಕೆ ಜೀವಕಳೆ ಕೊಟ್ಟು ಬೆಳಗುವಂತೆ ಮಾಡಿದರು. ಸನಾತನ ಧರ್ಮದ ಪೂರ್ಣ ಪ್ರತಿನಿಧಿಯಾದ ರಾಮಕೃಷ್ಣರ ಬದುಕು ವೇದ ವೇದಾಂತಗಳಿಗೆ ಬರೆದಿರುವ ಸಚೇತನ ಭಾಷ್ಯದಂತಿದೆ. ಭಗವಂತನನ್ನು ಕಂಡು ಪ್ರೀತಿಸಿದ ಅವರ ಬಾಳು ಆಧ್ಯಾತ್ಮಿಕ ಅನುಭವಗಳಿಂದ ತುಂಬಿ ತುಳುಕಾಡುತ್ತಿತ್ತು. ಇಂದ್ರಿಯ ಸುಖವನ್ನು ತ್ಯಾಗ ಮಾಡಿ ಭಗವದಾನಂದವನ್ನು ರುಚಿ ನೋಡಿದ ಪುಣ್ಯಪುರುಷರಿವರು. ಆಧ್ಯಾತ್ಮದ ಅತ್ಯುನ್ನತ ಮಟ್ಟಕ್ಕೆ ಏರಿದ ಈ ಮಹಾಪುರುಷರ ಜೀವನ ಚರಿತ್ರೆಯನ್ನು ಓದುವುದರಿಂದ ನಮ್ಮ ಮನಸ್ಸಿನಲ್ಲಿರುವ ಹೊಲಸೆಲ್ಲ ಹೋಗಿ ಮನಸ್ಸು ನಿರ್ಮಲವಾಗುತ್ತದೆ, ಗಂಗೆಯಲ್ಲಿ ಸ್ನಾನಮಾಡಿದಂತೆ ಪರಿಶುದ್ಧವಾಗುತ್ತದೆ, ನಮ್ಮ ಜೀವನಕ್ಕೆ ಬೆಳಕು ನೀಡುತ್ತದೆ.

ಸನಾತನ ಧರ್ಮದ ಪೂರ್ಣ ಪ್ರತಿನಿಧಿಯಾದ ಶ್ರೀ ರಾಮಕೃಷ್ಣರು ಅನ್ಯ ಧರ್ಮಗಳೊಂದಿಗೆ ಹೋರಾಡಿ ಅಳಿಯುತ್ತಿದ್ದ ಹಿಂದೂಧರ್ಮಕ್ಕೆ ಜೀವಕಳೆ ಕೊಟ್ಟು ಕಾಪಾಡಿದರು. ದೈವತ್ವ, ಮಾನವತ್ವ ಅವರ ಜೀವನದಲ್ಲಿ ಹಾಲು ಸಕ್ಕರೆಯಂತೆ ಸೇರಿಕೊಂಡಿದ್ದವು. ಶಾಂತಭಾವ, ದಾಸ್ಯಭಾವ, ಸಖ್ಯಭಾವ, ವಾತ್ಸಲ್ಯಭಾವ, ಮಧುರಭಾವ ಮುಂತಾದ ಐದು ವಿಧವಾದ ಭಾವಸಾಧನೆಗಳಿಂದ ಅವರು ಭಗವಂತನನ್ನು ಆರಾಧಿಸಿ, ಇಡೀ ಬಾಳನ್ನೇ ಆತನಿಗೆ ಅರ್ಪಿಸಿದರು. ಮಾಯಾಬಂಧನಗಳ ಸೆಳೆತದಿಂದ ಬಿಡುಗಡೆಹೊಂದಿ, ನಿರಂತರ ಸಾಧನೆಯಿಂದ ಸಿದ್ಧಿಹೊಂದಿ, ಆತ್ಮಶಕ್ತಿಯಿಂದ, ಆದರ್ಶಜೀವಿಯಾಗಿ, ಕಠೋರ ತಪಸ್ಸಿನಿಂದ ಸಂಪಾದಿಸಿದ ಮಹಾತ್ಯಾಗವನ್ನೇ ತ್ಯಾಗಮಾಡಿದ ಜೀವಜ್ಯೋತಿ ಇವರು.

ಈ ಮಹಾಪುರುಷರ ಸಂದೇಶವನ್ನು ಅನುಷ್ಠಾನಕ್ಕೆ ತರುವ ಮತ್ತು ಭರತಖಂಡವನ್ನು ಯೋಗ್ಯ ಆಧ್ಯಾತ್ಮಿಕ ಶಿಖರಕ್ಕೆ ಸಾಗಿಸುವ ಶಕ್ತಿ ಸಂಪಾದಿಸಿ ಸನಾತನ ತತ್ತ್ವಗಳನ್ನು ಜಗತ್ತಿಗೆ ಶ್ರದ್ಧೆ, ಉತ್ಸಾಹಗಳಿಂದ ಪ್ರಚಾರ ಮಾಡುವುದು ಇಂದಿನ ಯುವ ಜನಾಂಗದ ಕರ್ತವ್ಯವಾಗಿದೆ.

# ಸ್ವಾಮಿ ವಿವೇಕಾನಂದರು

## ೧೮೬೩–೧೯೦೨

ಕಳೆದ ಶತಮಾನದ ಅಂತ್ಯದಲ್ಲಿ ಕಾಣಿಸಿಕೊಂಡ ವಿವೇಕಾನಂದರು ಶ್ರೀರಾಮಕೃಷ್ಣ ಪರಮಹಂಸರ ಪ್ರಿಯ ಶಿಷ್ಯರು. ಅವರು ಅಜ್ಞಾನದ ಕೆಸರಿನಲ್ಲಿ ಹೂತುಹೋಗಿದ್ದ ಭಾರತೀಯರನ್ನು ಮೇಲಕ್ಕೆತ್ತಿ ದಾರಿಬೆಳಕಾಗಬಲ್ಲಂತಹ ಆಧ್ಯಾತ್ಮಿಕ ಸತ್ಯಗಳನ್ನು ನೀಡಿದರು. ಜಗದ್ವ್ಯಕ್ತಿಗಳು, ಬೃಹದ್ವ್ಯಕ್ತಿಗಳೂ ಆದ ವಿವೇಕಾನಂದರು ಮಾನವ ಸಮಾಜದಲ್ಲಿರುವ ಕಳಂಕಗಳನ್ನೆಲ್ಲ ಕಿತ್ತೆಸೆದು ಹಾಕಿದರು. ಜನತೆಯ ಮಾರ್ಗದರ್ಶಕ ಹಾಗೂ ಬೋಧಕರಾಗಿ ಸಮಗ್ರ ಜಗತ್ತನ್ನೇ ತಮ್ಮ ಅಸಾಧಾರಣ ವ್ಯಕ್ತಿತ್ವದಿಂದ ವಶಪಡಿಸಿಕೊಂಡರು. ಭಾರತ ಮಾತೆ ಅವರ ಪ್ರೀತಿಯ ಮೂರ್ತಿಯಾಗಿದ್ದಳು, ಹೃದಯೇಶ್ವರಿಯಾಗಿದ್ದಳು. ದೇಶಸೇವೆ ಅವರ ಬಾಳಿನ ಉಸಿರಾಗಿತ್ತು, ಜೀವನದ ಏಕೈಕ ಗುರಿಯಾಗಿತ್ತು ಮತ್ತು ಏಕಮಾತ್ರ ಅವಶಿಷ್ಟ ಕರ್ಮವಾಗಿತ್ತು. ಅಸಾಧಾರಣ ಆಧ್ಯಾತ್ಮಿಕ ವ್ಯಕ್ತಿಯಾದ ವಿವೇಕಾನಂದರು ಪಾಶ್ಚಾತ್ಯ ವಿಜ್ಞಾನ, ತತ್ತ್ವ, ಸಾಹಿತ್ಯ, ಮುಂತಾದುವುಗಳನ್ನೆಲ್ಲ ಹೀರಿ ತಮ್ಮ ವ್ಯಕ್ತಿತ್ವದ ಘನತೆಯನ್ನು ಹೆಚ್ಚಿಸಿಕೊಂಡರು. ದೇಶದ ಸಾಮಾಜಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕ ಸಮಸ್ಯೆಗಳನ್ನು ಹೊರಗೆಳೆದು ಅವುಗಳನ್ನು ಪರಿಹರಿಸಲು ತಮ್ಮ ಜೀವಿತವನ್ನೇ ಅರ್ಪಿಸಿದ ಅವರು ಭಾರತದ ಸಂಸ್ಕೃತಿ, ಹಿಂದೂಧರ್ಮದ ಬಗ್ಗೆ ಅಧಿಕಾರ ವಾಣಿಯಿಂದ ಮಾತನಾಡುತ್ತಿದ್ದರು. ಲಕ್ಷಾಂತರ ಜೀವಿಗಳನ್ನು ಉದ್ಧಾರ ಮಾಡಿ ಅನೇಕರಿಗೆ ಮುಕ್ತಿಮಾರ್ಗ ತೋರಿಸಿಕೊಟ್ಟು ರಾಷ್ಟ್ರದ ಸರ್ವತೋಮುಖವಾದ ಏಳಿಗೆಗಾಗಿ ಶ್ರಮಿಸಿದ ಮಹಾಪುರುಷರಿವರು.

ಕ್ರಿಸ್ತಶಕ ೧೮೬೩ ನೆಯ ಸಂವತ್ಸರದ ಜನವರಿ ತಿಂಗಳು ೧೨ ನೇ ತಾರೀಖು ಕೃಷ್ಣಪಕ್ಷದ ಸಪ್ತಮಿಯ ಪುಣ್ಯ ಮುಹೂರ್ತದಲ್ಲಿ ಕಲ್ಕತ್ತ ನಗರದ ಶ್ರೀಮಂತ ವಿಶ್ವನಾಥನ ಹೆಂಡತಿ ಭುವನೇಶ್ವರಿ ಗರ್ಭದಲ್ಲಿ ಹುಟ್ಟಿದ ಮಗುವಿಗೆ 'ವೀರೇಶ್ವರ' ಎಂದು ನಾಮಕರಣವಾಯಿತು. ಕ್ಷತ್ರಿಯ ಕುಲದಲ್ಲಿ ಹುಟ್ಟಿದ ಈ ಮಗುವಿನ ಪ್ರಚಲಿತನಾಮ ಅನ್ನಪ್ರಾಶನ ಸಮಯದಲ್ಲಿ 'ನರೇಂದ್ರನಾಥ' ಎಂದಾಯಿತು.

ಮನೆಯವರೆಲ್ಲಾ ಮುದ್ದಿಗಾಗಿ ನರೇಂದ್ರನನ್ನು 'ಬಿಲೆ' ಎಂದು ಕರೆಯುತ್ತಿದ್ದರು. ಪ್ರಥಮಪಾಠ ಅವನಿಗೆ ಮನೆಯಲ್ಲಿ ತಾಯಿಯಿಂದಲೇ ಪ್ರಾರಂಭವಾಯಿತು. ಚುರುಕು ಬುದ್ಧಿಯ ನರೇಂದ್ರನಿಗೆ ಪಾಠ, ಪ್ರವಚನಗಳಲ್ಲಿ ತುಂಬ ಶ್ರದ್ಧೆ. ಮಲ್ಲ ಕಾಳಗ, ಗೋಲಿಯಾಟ, ಮುಷ್ಟಿಯುದ್ಧ, ಓಡುವುದು ಮುಂತಾದ ಆಟಗಳಲ್ಲಿ ಅವನು ಪ್ರಚಂಡ. ಎಳೆತನದಲ್ಲಿ ತುಂಟತನ ತೋರಿಸುತ್ತಾ ಅಕ್ಕಂದಿರನ್ನು ಕಾಡಿಸಿ ಅಳಿಸಿ ನಗುತ್ತಿದ್ದ ನರೇಂದ್ರನಿಗೆ ಪ್ರಾಣಿಗಳನ್ನು ಕಂಡರೆ ಪರಮ ಪ್ರೀತಿ. ಧೈರ್ಯಶಾಲಿ ಮತ್ತು ಪ್ರತಿಭಾಸಂಪನ್ನನೂ ಆಗಿದ್ದ ಅವನ ಜ್ಞಾಪಕಶಕ್ತಿ ಅದ್ಭುತವಾಗಿತ್ತು. ತಾಯಿಯನ್ನು ಜಗನ್ಮಾತೆಯೆಂದು ಅನನ್ಯಭಕ್ತಿಯಿಂದ ಅವನು ಆರಾಧಿಸುತ್ತಾ ತಂದೆಯನ್ನು ಪೂಜ್ಯಭಾವದಿಂದ ನೋಡುತ್ತಿದ್ದ.

ಜಟ್ಟಿಯ ಮೈಕಟ್ಟು, ಐದುಮುಕ್ಕಾಲು ಅಡಿ ಎತ್ತರ, ವಿಸ್ತಾರವಾದ ಎದೆ, ಎಣ್ಣೆಗೆಂಪಿನ ಲಕ್ಷಣವಾದ ಅಗಲಮುಖ, ಅಪೂರ್ವ ತೇಜಸ್ಸಿನಿಂದ ಹೊಳೆಯುವ ಕಣ್ಣುಗಳಿಂದ ಅಸಾಧಾರಣ ದೇಹಸೌಂದರ್ಯವನ್ನು ಹೊಂದಿದ್ದ ನರೇಂದ್ರ ಮಹಾರಾಜನಂತೆ ಕಾಣಿಸುತ್ತಿದ್ದ. ಅವನ ತೇಜಸ್ವೀ ಮುಖ ಕಂಡವರೆಲ್ಲ ಮುಗ್ಧರಾಗುತ್ತಿದ್ದರು. ಅವನ ವ್ಯಕ್ತಿತ್ವದಲ್ಲಿ ಸಮ್ಮಿಳಿತವಾಗಿದ್ದ ಗಾಂಭೀರ್ಯ, ಔದಾರ್ಯ, ಧೈರ್ಯ, ಪ್ರೇಮ, ಸತ್ಯ, ದಯೆ ಮುಂತಾದ ಸದ್ಗುಣಗಳು ಬಾಲ್ಯದಿಂದ ಬೀಜರೂಪದಲ್ಲಿ ಹುದುಗಿಕೊಂಡು ಅವನೊಂದಿಗೆ ಕ್ರಮೇಣ ಬೆಳೆಯತೊಡಗಿದವು. ಕಾಲೇಜಿನ ವಿದ್ಯಾರ್ಥಿಯಾದ ಮೇಲೆ ನರೇಂದ್ರ ಆಟ, ತುಂಟತನ, ಎಳಸುತನವನ್ನೆಲ್ಲ ಬಿಟ್ಟು ಸಾಹಿತ್ಯ, ಇತಿಹಾಸ, ತತ್ತ್ವಶಾಸ್ತ್ರ, ಸಂಸ್ಕೃತ ವ್ಯಾಕರಣ, ಸಮಾಜ ವಿಜ್ಞಾನಗಳನ್ನು ವ್ಯಾಸಂಗ ಮಾಡುವುದರಲ್ಲಿ ಶ್ರದ್ಧೆ ವಹಿಸಿದ. ಗಣಿತವೆಂದರೆ ಅವನಿಗೆ ಬೇಸರ. ಆದರೆ ಸಂಗೀತ, ಕಲೆ, ಇಂಗ್ಲಿಷು ಭಾಷೆಯಲ್ಲಿ ಅಪಾರ ಆಸಕ್ತಿ. ಇಂಗ್ಲಿಷಿನ ಕಾವ್ಯ ಇತಿಹಾಸ, ತತ್ತ್ವಮೀಮಾಂಸೆ, ವಿಜ್ಞಾನ ಶಾಸ್ತ್ರಗಳನ್ನೂ ಅವನು ಅಧ್ಯಯನ ಮಾಡಿ ಸ್ವಾಧೀನ ಪಡಿಸಿಕೊಂಡ. ಜ್ಞಾನಭಂಡಾರವನ್ನೇ ಸೂರೆಮಾಡಿ, ಅಸಾಧಾರಣ ಬುದ್ಧಿಶಕ್ತಿಯಿಂದ ಎಲ್ಲರ ಮೆಚ್ಚುಗೆ ಸಂಪಾದಿಸಿದ ನರೇಂದ್ರ ಶಾಸ್ತ್ರೀಯ ಸಂಗೀತ ವನ್ನು ಇಂಪಾಗಿ ಹಾಡುತ್ತಿದ್ದುದಲ್ಲದೆ ಕೆಲವು ವಾದ್ಯಗಳನ್ನು ಸೊಗಸಾಗಿ ನುಡಿಸುತ್ತಿದ್ದ.

ನರೇಂದ್ರನ ಆಧ್ಯಾತ್ಮಿಕ ವಿಚಾರಶಕ್ತಿ ಹೆಚ್ಚಿದಂತೆ, ಜ್ಞಾನವೃಕ್ಷ ಬೆಳೆದಂತೆ

ಜೀವನದ ಬಗ್ಗೆ ನೂರಾರು ಸಮಸ್ಯೆಗಳು ಅವನನ್ನು ಮುತ್ತಿಕೊಂಡವು. ಸಮಸ್ಯೆಗಳನ್ನು ಪರಿಹರಿಸಲು ಅವನು ಪೌರ ಪಾಶ್ಚಾತ್ಯ ತತ್ತ್ವಜ್ಞರ ಶಾಸ್ತ್ರಗಳನ್ನು ಓದಿದ. ಅನೇಕ ಧರ್ಮಪ್ರಚಾರಕರನ್ನು ಸಂದರ್ಶಿಸಿದ. ಸತ್ಯಾನ್ವೇಷಣೆಯಲ್ಲಿ ನಿರತನಾದ ನರೇಂದ್ರ ಹಿಂದೂ ಪುರಾಣ, ಪುಣ್ಯ ಕಥೆಗಳು, ವೇದೋಪನಿಷತ್ತು, ದರ್ಶನಗಳ ತತ್ತ್ವ, ಹಿಂದೂ ಸಾಧು ಸಂತರ ಜೀವನ, ಸಂದೇಶ ಮುಂತಾದ ಪ್ರೌಢ ಗ್ರಂಥಗಳನ್ನೆಲ್ಲ ಓದಿ ನಮ್ಮ ಸಂಸ್ಕೃತಿಯಲ್ಲಿರುವ ಸತ್ತ್ವವನ್ನೆಲ್ಲ ಹೀರಿಕೊಂಡ. ಆದರಿಂದ ಸತ್ಯಾನುಭವ ಪಡೆಯಲು ಸಾಧ್ಯವಾಗದೆ ಅವನು ನಿರಾಶೆಯಿಂದ ಅತೃಪ್ತಿಗೊಂಡ. ಕ್ಷಣಿಕವಾದ ಲೌಕಿಕ ಜೀವನ ಮಾನವನಿಗೆ ಬ್ರಹ್ಮದರ್ಶನ ಮಾಡಿಸಲಾರವು ಎನ್ನುವುದು ತಿಳಿದಮೇಲಂತೂ ಅವನ ಆಧ್ಯಾತ್ಮಿಕ ದಾಹ ಹೆಚ್ಚಾಯಿತು. ತ್ಯಾಗಜೀವನ, ಸಾಧುಜೀವನ ಅವನನ್ನು ಆಕರ್ಷಿಸಿತು. ಭಕ್ತನೊಬ್ಬನ ಸಲಹೆಯಂತೆ ಹತ್ತೊಂಬತ್ತನೆಯ ವಯಸ್ಸಿನಲ್ಲಿ ನರೇಂದ್ರ ಸುಮಾರು ನಲವತ್ತೈದು ವರ್ಷದ ರಾಮಕೃಷ್ಣ ಪರಮಹಂಸರನ್ನು ಭೇಟಿಯಾದ. ಆಧ್ಯಾತ್ಮಿಕ ದಾಹದಿಂದ ಬಾಯಾರಿ ಬಳಲಿದ್ದ ನರೇಂದ್ರನನ್ನು ರಾಮಕೃಷ್ಣರು ಪ್ರೀತಿಯಿಂದ ಬರಮಾಡಿಕೊಂಡು ಅವನಿಗೆ ವೇದಾಂತೋಕ್ತ ಸಾಧನ ಮಾರ್ಗಗಳನ್ನು ಬೋಧಿಸಿ, 'ತತ್ತ್ವಮಸಿ' ತತ್ತ್ವವನ್ನು ನಿರೂಪಿಸಿ 'ಅದ್ವೈತ ವೇದಾಂತ'ವೆಂಬ ಅಮೃತವನ್ನು ನೀಡಿದರು.

ಅದ್ವೈತ ವೇದಾಂತವನ್ನು ಸತ್ಯವೆಂದು ಒಪ್ಪಿಕೊಳ್ಳದೆ ಪರಿಹಾಸ್ಯ ಮಾಡುತ್ತಿದ್ದ ನರೇಂದ್ರ ಸತ್ಯಾನುಭವ ಪಡೆದಮೇಲೆ ಅದರ ಸಂದೇಹದಿಂದ ಬಿಡುಗಡೆ ಹೊಂದಿದ. ರಾಮಕೃಷ್ಣರ ವಿಚಿತ್ರ ನಡವಳಿಕೆಯಿಂದ ಅವರನ್ನು ಹುಚ್ಚರೆಂದು ಕೊಂಡಿದ್ದ ನರೇಂದ್ರ ಹಲವಾರು ಬಾರಿ ಅವರನ್ನು ಸಂದರ್ಶಿಸಿದಮೇಲೆ ಅವರೊಬ್ಬ ಅಸಾಧಾರಣ, ಅಸಾಮಾನ್ಯ ಆಧ್ಯಾತ್ಮಿಕ ವ್ಯಕ್ತಿಯೆಂದು ತೀರ್ಮಾನಿಸಿದ. ರಾಮಕೃಷ್ಣರನ್ನು ಅರ್ಥಮಾಡಿಕೊಳ್ಳಲು, ಅವರ ಶಿಷ್ಯನಾಗಲು ಅವನು ಹಲವಾರು ವರ್ಷಗಳು ಸಂದೇಹದಿಂದ ತೊಳಲಾಡಿ ಸಾಧನೆ ಮಾಡಬೇಕಾಯಿತು. ತಂದೆ ದೈವಾಧೀನರಾಗಿ ನರೇಂದ್ರನ ಮನೆಯವರೆಲ್ಲ ಬಡತನದ ಹಿಂಸೆಗೆ ಸಿಕ್ಕಿಬಿದ್ದರು. ಅವನು ಕೆಲಸಕ್ಕಾಗಿ ಮಾಡಿದ ಪ್ರಯತ್ನವೆಲ್ಲಾ ನಿಷ್ಫಲವಾಯಿತು. ಆಗಲೂ ಹಣದ ಸಂಪಾದನೆಗೆ ಅವನು ದುರ್ಮಾರ್ಗ

ಹಿಡಿಯಲಿಲ್ಲ. ಸಾಮಾನ್ಯ ಮನುಷ್ಯನಂತೆ ಹಣ ಸಂಪಾದನೆ ಮಾಡಿ ಸಂಸಾರ ನಿರ್ವಹಿಸಲಿಲ್ಲ. ಯಾಕೆಂದರೆ ಮೃತ್ಯು ನುಂಗಿಹಾಕುವ ನಶ್ವರ ಜಗತ್ತಿನ ಐಶ್ವರ್ಯ, ಕೀರ್ತಿ, ಅಧಿಕಾರ ಪಡೆಯುವ ಆಸೆಯಿಂದ ಅವನು ದೂರವಾಗಿದ್ದ. ಆದರೆ ಮನೆಯ ಹಿರಿಯ ಮಗನಾಗಿ, ತಾಯಿ, ಸೋದರಿಯರನ್ನು ಕಾಪಾಡುವ ಭಾರ ಅವನು ಹೊರಲೇಬೇಕಾಯಿತು. ಕೆಲಸಕ್ಕಾಗಿ ಅಲೆದಾಡುವ ಸಂದರ್ಭ ದಲ್ಲಿ ಅವನಿಗೆ ಬಡವ ದುರ್ಬಲನಿಗೆ ಈ ಪ್ರಪಂಚದಲ್ಲಿ ಸ್ಥಾನವಿಲ್ಲ ಎನ್ನುವುದು ಮನದಟ್ಟಾಯಿತು. ಹೊಟ್ಟೆಗಿಲ್ಲದೆ ಎಷ್ಟೋ ದಿವಸಗಳು ಮನೆಯವರೊಂದಿಗೆ ನರೇಂದ್ರ ಉಪವಾಸ ಮಾಡಿದ. ಇಬ್ಬರು ಶ್ರೀಮಂತ ಮಹಿಳೆಯರು ಅವನಿಗೆ ಹಣದ ಆಕರ್ಷಣೆ ತೋರಿಸಿ ತಮ್ಮ ಪ್ರಿಯತಮನಾಗುವಂತೆ ಪ್ರಾರ್ಥಿಸಿದರು. ಬ್ರಹ್ಮಚರ್ಯ ನಿಷ್ಠೆಯನ್ನು ಹೊಂದಿದ್ದ ನರೇಂದ್ರ ಅತ್ಯಂತ ತಿರಸ್ಕಾರದಿಂದ ಅವರ ಬೇಡಿಕೆಯನ್ನು ನಿರಾಕರಿಸಿದ.

ನರೇಂದ್ರನು ಮನೆಯ ಕಷ್ಟಗಳನ್ನು ಪರಿಹರಿಸುವಂತೆ ಕಾಳಿಕಾದೇವಿಯಲ್ಲಿ ಪ್ರಾರ್ಥಿಸಿಕೊಳ್ಳಲು ತೀರ್ಮಾನಿಸಿದ. ಮೂರು ಸಲ ದೇವಿಯ ವಿಗ್ರಹದ ಮುಂದೆ ನಿಂತು ಭಕ್ತಿ, ಜ್ಞಾನ, ವಿವೇಕ, ವೈರಾಗ್ಯ ನೀಡೆಂದು ಅವನು ಪ್ರಾರ್ಥಿಸಿಕೊಂಡನೇ ಹೊರತು ಲೌಕಿಕ ಪ್ರಯೋಜನಗಳನ್ನು ಬೇಡುವುದು ಅವ ನಿಂದ ಸಾಧ್ಯವಾಗಲಿಲ್ಲ. ಸಂಕಟ ಪರಿಸ್ಥಿತಿಯಲ್ಲೂ ಅವನಿಗೆ ದೇವರಲ್ಲಿದ್ದ ನಂಬಿಕೆ ಕಡಿಮೆಯಾಗಲಿಲ್ಲ. ನಂತರ ವಿದ್ಯಾಸಾಗರ ಶಾಲೆಯಲ್ಲಿ ನರೇಂದ್ರನಿಗೆ ಉಪಾಧ್ಯಾಯನ ಕೆಲಸ ಸಿಕ್ಕಿ ಮನೆಯವರ ಆರ್ಥಿಕ ಮುಗ್ಗಟ್ಟು ಸ್ವಲ್ಪ ಚೇತ ರಿಸಿಕೊಂಡಿತು.

ಬ್ರಹ್ಮಸಾಕ್ಷಾತ್ಕಾರ ಪಡೆದುಕೊಂಡ ನರೇಂದ್ರ ಗುರು ರಾಮಕೃಷ್ಣರು ದೇಹ ತ್ಯಾಗ ಮಾಡಿದ ಮೇಲೆ ಒಂದು ರಾತ್ರಿ ಧೂನಿಯ ಮುಂದೆ ಭಗವಂತನ ಸಾಕ್ಷಿ ಯಾಗಿ ಎಲ್ಲರೆದುರಿನಲ್ಲಿ ಸನ್ಯಾಸವ್ರತವನ್ನು ಸ್ವೀಕರಿಸಿ, 'ವಿವೇಕಾನಂದ' ಎಂಬ ಹೆಸರನ್ನು ಧಾರಣೆ ಮಾಡಿ, ಧ್ಯಾನದಲ್ಲಿ ಆಸಕ್ತರಾಗಿ ಎಂದೆಂದಿಗೂ ನಾಶವಾಗದ ಸತ್ಯವನ್ನು ಹೊಂದಲು ಕಾರ್ಯೋನ್ಮುಖರಾದರು. ಬ್ರಹ್ಮಚರ್ಯಾಭ್ಯಾಸದಿಂದ ವಿದ್ಯಾಪಾರಂಗತರಾಗಿ ಸಂಪೂರ್ಣ ಪಾಂಡಿತ್ಯ ಪಡೆದುಕೊಂಡ ವಿವೇಕಾ ನಂದರು ಸನ್ಯಾಸಿಯಾದರೂ ಪ್ರಪಂಚವನ್ನು ಅಲಕ್ಷಿಸಲಿಲ್ಲ, ಜೀವನವನ್ನು ತುಚ್ಛವೆಂದು ಭಾವಿಸಲಿಲ್ಲ. ಅವರು ಗೊಡ್ಡು ಸನ್ಯಾಸಿಯಾಗಿರದೆ, ದೊಡ್ಡ

ಕಲೋಪಾಸಕರಾಗಿ ಸಾಹಿತ್ಯ ಮತ್ತು ಸಂಗೀತದಲ್ಲಿ ಅಪಾರ ಆಸಕ್ತಿ ಹೊಂದಿದರು.

ವಿವೇಕಾನಂದರು ೧೮೮೮ರಲ್ಲಿ ವರಾಹ ನಗರದ ಮಠದಿಂದ ಹೊರಟು ಕಾಶಿಗೆ ಬಂದು ಭಿಕ್ಷಾನ್ನದಿಂದ ಹೊಟ್ಟೆ ಹೊರೆದುಕೊಳ್ಳುತ್ತಾ ಜಪತಪ ಸಾಧು ಸಜ್ಜನರ ಸಂಗದಲ್ಲಿ ಮಗ್ನರಾದರು. ಶಾಸ್ತ್ರ, ಚಿಂತನೆ, ಚರ್ಚೆ, ಬೋಧನೆಗೂ ದಿನದ ಸ್ವಲ್ಪ ಭಾಗ ಮೀಸಲಾಗಿಟ್ಟರು. ಅವರು ಅನೇಕ ಸಂಸ್ಕೃತ ಗ್ರಂಥಗಳನ್ನು ಅಧ್ಯಯನ ಮಾಡುವುದರ ಜೊತೆಗೆ ಫ್ರೆಂಚ್ ಭಾಷೆಯನ್ನು ಕಲಿತುಕೊಂಡರು. ಸ್ವಾರ್ಥ, ಆಸೆ, ಆಕಾಂಕ್ಷೆಗಳನ್ನೆಲ್ಲ ಅವರು ಧ್ವಂಸ ಮಾಡಿ. ಹೊಸಹೊಸ ಭಾವನೆಗಳನ್ನು ಹೀರಿ, ಆಧ್ಯಾತ್ಮಿಕ ವಿಷಯಗಳನ್ನು ಸಂಗ್ರಹಿಸಿ ಸತ್ಯಸಾಕ್ಷಾತ್ಕಾರವನ್ನೇ ತಮ್ಮ ಗುರಿಯಾಗಿಟ್ಟುಕೊಂಡು ನಿರಂತರ ಹೋರಾಟ ನಡೆಸಿದರು. ಧ್ಯಾನ, ಅಧ್ಯಯನ ಮತ್ತು ಕರ್ಮಗಳಲ್ಲಿ ನಿಪುಣರಾದ ವಿವೇಕಾನಂದರು ಟೀಕೆ, ನಿಂದನೆಗಳನ್ನು ಲಕ್ಷಿಸದೆ ತಮ್ಮ ಪಾಲಿಗೆ ಬಂದ ಕರ್ತವ್ಯವನ್ನು ನಿಷ್ಠೆಯಿಂದ ನಿರ್ವಹಿಸಿದರು. ಅವರು ಏಕಾಂಗಿಯಾಗಿ ಕಾಲ್ನಡಿಗೆಯಲ್ಲೇ ಗುಜರಾತು, ಅಹಮದಾಬಾದು, ಜುನಾಗಡ, ಸೋಮನಾಥ, ಪೋರ್ಬಂದರ್, ಮಧುರ, ರಾಮೇಶ್ವರ, ತಿರುವಾಂಕೂರು, ಬೊಂಬಾಯಿ, ಪುಣೆ, ಬೆಳಗಾವಿ, ಬೆಂಗಳೂರು, ಮೈಸೂರು, ದ್ವಾರಕ ಮುಂತಾದ ಊರುಗಳಲ್ಲಿ ಸುತ್ತಾಡಿ ಅನುಭವದ ಬುತ್ತಿಯನ್ನು ತುಂಬಿಕೊಂಡರು. ಅವರಿಗೆ ದೇಶದ ಹಲವಾರು ಸಮಸ್ಯೆ ಮತ್ತು ಜನರ ದುಃಖ ದಾರಿದ್ರ್ಯಗಳ ದರ್ಶನವಾಯಿತು. ದೀನ ದರಿದ್ರರನ್ನು, ಆದರ್ಶಗಳನ್ನೆಲ್ಲ ಅಲಕ್ಷ್ಯ ಮಾಡಿ ಅಧೋಗತಿಗಿಳಿದಿರುವ ಜನರನ್ನು ಉದ್ಧಾರಮಾಡಲು ಅವರು ತೀರ್ಮಾನಿಸಿದರು.

ಹಿಂದೂಧರ್ಮದ ಪ್ರತಿನಿಧಿಯಾಗಿ ಸರ್ವಧರ್ಮ ಸಮ್ಮೇಳನದಲ್ಲಿ ಭಾಗವಹಿಸಲು ವಿವೇಕಾನಂದರು ಅಮೇರಿಕಾಕ್ಕೆ ಪ್ರಯಾಣ ಮಾಡಿದರು. ಸಕಲ ಧರ್ಮಗಳ ತತ್ತ್ವವನ್ನೂ ತಿಳಿದುಕೊಂಡು ಎಲ್ಲ ಧರ್ಮಗಳನ್ನೂ ಗೌರವಿಸುತ್ತಿದ್ದ ಸ್ವಾಮೀಜಿ ೧೮೯೩, ೧೧ ನೇ ಸೆಪ್ಟೆಂಬರ್ ಚಿಕಾಗೋದಲ್ಲಿ ನಡೆದ ಸಮ್ಮೇಳನದಲ್ಲಿ ಸರ್ವಧರ್ಮ ಸಮನ್ವಯವನ್ನು ಸೂಚಿಸಿ ಭಾಷಣ ಮಾಡಿ ಎಲ್ಲರ ಮನಸ್ಸನ್ನು ಸೂರೆಗೊಂಡರು. ಅವರು ಸನಾತನ ಹಿಂದೂಧರ್ಮದ ಧ್ವಜವನ್ನು ಎತ್ತಿಹಿಡಿದು ಒಂದೇ ಒಂದು ಭಾಷಣದಿಂದ ಅಪಾರ ಕೀರ್ತಿ

ಸಂಪಾದಿಸಿದರು. ಧರ್ಮಗಳು ಪರಸ್ಪರ ವಿರೋಧಿಸುವುದನ್ನು ಬಿಡಬೇಕು. ಎಲ್ಲ ಧರ್ಮಗಳೂ ಭಗವಂತನನ್ನೇ ಸೇರುತ್ತವೆ. ಆದ್ದರಿಂದ ಎಲ್ಲ ಧರ್ಮಗಳೂ ಶ್ರೇಷ್ಠ ಎಂದು ಹೇಳಿದ ಅವರ ಮಾತಿನ ಸತ್ಯ ಸಹಸ್ರ ಹೃದಯಗಳನ್ನು ಮುಟ್ಟಿತು. ಜಗತ್ತಿನ ದೃಷ್ಟಿಯಲ್ಲಿ ಕೀಳಾಗಿದ್ದ ಭರತಖಂಡಕ್ಕೆ ಅವರು ತಮ್ಮ ಅಮೃತವಾಣಿಯಿಂದ ಕೀರ್ತಿ ತಂದರು. ಜನರ ಒತ್ತಾಸೆಯ ಮೇಲೆ ವಿವೇಕಾನಂದರು ಅನೇಕ ಕಡೆಗಳಲ್ಲಿ ಎಲ್ಲಾ ಧರ್ಮಗಳ, ಸಾರವಾದ ಸರ್ವಧರ್ಮ ಸಮನ್ವಯ ತತ್ತ್ವದ ಬಗ್ಗೆ ಉಪನ್ಯಾಸಕೊಟ್ಟರು. ಅವರು ಉಪನ್ಯಾಸಕ್ಕೆ ಪ್ರಾರಂಭಿಸುವ ಮೊದಲು ಗುರು ರಾಮಕೃಷ್ಣರನ್ನು ಸ್ಮರಿಸಿ, ಮನಸ್ಸಿನಲ್ಲೇ ಸರಸ್ವತಿದೇವಿಗೆ ನಮಸ್ಕರಿಸುತ್ತಿದ್ದರು- ಭಾಷಣಗಳು, ಉಪನ್ಯಾಸಗಳು, ಕೀರ್ತಿಪ್ರಶಂಸೆಗಳ ಗಡಿಬಿಡಿಯಲ್ಲೂ ಅವರು ಆಧ್ಯಾತ್ಮಿಕ ಸಾಧನೆಗಳನ್ನು ಮರೆಯಲಿಲ್ಲ. ಧ್ಯಾನ, ಪೂಜೆ, ಜಪತಪಗಳನ್ನು ದಿನವೂ ತಪ್ಪದೆ ಮಾಡುತ್ತಿದ್ದರು.

ನಿಮಿಷ ಮಾತ್ರದಲ್ಲಿ ಅಪಾರ ಖ್ಯಾತಿ ಗಳಿಸಿದ ವಿವೇಕಾನಂದರು ಬಿಡುವಿನ ಸಮಯದಲ್ಲಿ ಪ್ರಾಚ್ಯ ಪಾಶ್ಚಾತ್ಯ ಸಂಸ್ಕೃತಿಗಳ ತಾರತಮ್ಯವನ್ನು ಪರಿಶೀಲಿಸಿದರು. ಆ ದೇಶದ ಸಾಮಾಜಿಕ, ರಾಜಕೀಯ ಜೀವನಗಳ ಅಧ್ಯಯನ ನಡೆಸಿ ಅಲ್ಲಿಯ ಶಿಲ್ಪಕಲೆ, ವಿಜ್ಞಾನ, ಯಂತ್ರಕಲೆಗಳನ್ನು ತಿಳಿಯಲು ಪ್ರಯತ್ನಿಸಿದ ಅವರು ಅಮೇರಿಕ ದೇಶದ ಅಮಿತ ಯಂತ್ರಶಕ್ತಿಯ ಹಿಂದಿರುವುದು ಟೊಳ್ಳೆಂದು ಬಹು ಬೇಗ ನಿರ್ಧರಿಸಿಬಿಟ್ಟರು. ಅವರ ಉಪನ್ಯಾಸಗಳು, ಪ್ರವಚನಾದಿಗಳು ಲಂಡನ್ನಿನಲ್ಲಿ ಎಲ್ಲರ ಮೆಚ್ಚುಗೆ ಸಂಪಾದಿಸಿದವು. ರಾಜಯೋಗ, ಕರ್ಮ, ಭಕ್ತಿ ಮುಂತಾದ ಆಧ್ಯಾತ್ಮಿಕ ವಿಚಾರಗಳನ್ನು ಸ್ವಾಮೀಜಿ ವೈಜ್ಞಾನಿಕವಾಗಿ ವಿವರಿಸಿದರು. ಗ್ರಂಥರೂಪದಲ್ಲಿ ಪ್ರಕಟವಾದ ಅವರ ಉಪನ್ಯಾಸಗಳೆಲ್ಲ ವಿದ್ವಾಂಸರ, ಓದುಗರ, ವಿಮರ್ಶಕರ ಪ್ರಶಂಸೆ ಗಳಿಸಿದವು. ಅವರೊಡನೆ ಚರ್ಚಿಸಲು ಬರುತ್ತಿದ್ದ ವಿದ್ವಾಂಸರು, ವಿಜ್ಞಾನಿಗಳು, ಶಾಸ್ತ್ರಜ್ಞರು ವಿವೇಕಾನಂದರ ವಿಶಾಲದೃಷ್ಟಿ, ಸರ್ವಧರ್ಮ ಸಮನ್ವಯ ತತ್ತ್ವ ಮತ್ತು ಗಹನವಾದ ತತ್ತ್ವ ವಿಚಾರಗಳನ್ನು ಕೇಳಿ ಬೆರಗಾದರು. ಪ್ಯಾರಿಸ್ಸಿನವರು ಅವರ ಉಪನ್ಯಾಸಗಳನ್ನು ಕೇಳಿ ಅವರನ್ನು 'ಹಿಂದೂ ಯೋಗಿ' ಎಂದರು. ಅಮೇರಿಕಾ ಪ್ರಜೆಗಳು 'ವಿದ್ಯುದ್ವಾಗ್ಮಿ', 'ಬಿರುಗಾಳಿ ಸನ್ಯಾಸಿ' ಎಂದು ಹೊಗಳಿದರು.

ಸತ್ಯವಾದಿ ವಿವೇಕಾನಂದರ ಭಾಷಣಗಳನ್ನು ಕೇಳಿದ ಪಾಶ್ಚಾತ್ಯರು 'ಭಾರತ ಎಂತಹ ಸುಸಂಸ್ಕೃತ ದೇಶ. ಇಂತಹ ಜನಾಂಗಕ್ಕೆ ಧರ್ಮ ಪ್ರಚಾರಕರನ್ನು ಕಳುಹಿಸುವುದು ಶುದ್ಧ ಮೂರ್ಖತನ' ಎಂದುಕೊಂಡರು. ಪಾಶ್ಚಾತ್ಯ ದೇಶಗಳಲ್ಲಿ ಧರ್ಮವನ್ನು ಬೋಧಿಸಿ, ಅಲ್ಲಿಂದ ಹಣ ತಂದು ಭರತಖಂಡದ ಪುನರುದ್ಧಾರ ಮಾಡಲು ನರೇಂದ್ರರು ತೀರ್ಮಾನಿಸಿದರು. ನ್ಯೂಯಾರ್ಕಿನಲ್ಲಿ ಸ್ವಾಮೀಜಿ 'ನ್ಯೂಯಾರ್ಕ್ ವೇದಾಂತ ಸಂಘ'ವನ್ನು ಸ್ಥಾಪಿಸಿ ಪಾಶ್ಚಾತ್ಯ ದೇಶಗಳಲ್ಲಿ ಹಿಂದೂ ಧರ್ಮದ ವಿಜಯ ವೈಜಯಂತಿಯನ್ನು ಸ್ಥಾಪಿಸಿ ಭಾರತಕ್ಕೆ ಹಿಂತಿರುಗಿದರು. ನಿದ್ರಿಸುತ್ತಿದ್ದ ಜನತೆಯನ್ನು ಬಡಿದೆಬ್ಬಿಸಿ ಅವರಲ್ಲಿದ್ದ ಅಜ್ಞಾನತೆಯನ್ನು ನಿರ್ಮೂಲ ಮಾಡಿ, ತಮ್ಮ ಭಾವನೆಗಳನ್ನು ಅನುಷ್ಠಾನಕ್ಕೆ ತರುವುದಕ್ಕಾಗಿ ಅವರು ಕಲ್ಕತ್ತಾದಲ್ಲಿ 'ಶ್ರೀ ರಾಮಕೃಷ್ಣ ಪ್ರಚಾರ ಸಂಘ'ವನ್ನು ಸ್ಥಾಪಿಸಿ, ಆ ಸಂಘಕ್ಕೆ ತಾವೇ ಸಭಾಪತಿಗಳಾದರು. ಜನರ ದೈಹಿಕ, ಮಾನಸಿಕ ಹಾಗೂ ಪಾರಮಾರ್ಥಿಕ ಏಳಿಗೆಗೆ ನೆರವಾಗುವುದು, ಜನಸಾಮಾನ್ಯರಲ್ಲಿ ವೇದಾಂತ ತತ್ತ್ವ ಪ್ರಚಾರ ಮಾಡುವುದು, ಸರ್ವಧರ್ಮ ಸಮನ್ವಯ ತತ್ತ್ವವನ್ನು ಪ್ರಚಾರಪಡಿಸುವುದು, ಇಹಪರ ಕಲ್ಯಾಣಕ್ಕಾಗಿ ವಿದ್ಯಾದಾನ ಮಾಡುವುದು, ಕಲೆ, ಕೈಗಾರಿಕೆಗಳನ್ನು ಅಭಿವೃದ್ಧಿಗೊಳಿಸುವುದು ಮತ್ತು ಶ್ರೀ ರಾಮಕೃಷ್ಣರು ಬೋಧಿಸಿದ ತತ್ತ್ವಗಳನ್ನು ಜೀವನದಲ್ಲಿ ಪ್ರತಿಪಾದಿಸಿ ಬೋಧಿಸಿ ಸಾಧಿಸುವುದು—ಇವೇ ಈ ಸಂಘದ ಪ್ರಮುಖ ಕಾರ್ಯಕ್ರಮಗಳು. ವಿವೇಕಾನಂದರು ಸ್ಥಾಪಿಸಿ ಸುವ್ಯವಸ್ಥೆಗೆ ತಂದ ಈ ಸಂಸ್ಥೆ ಜನರ ಹಿತಕ್ಕೆ, ಸುಖಕ್ಕೆ, ಮೋಕ್ಷ ಹಾಗೂ ಲೋಕ ಕಲ್ಯಾಣಕ್ಕಾಗಿ ದುಡಿದು ನಿರಾಶರಾಗಿದ್ದ ಜನರಿಗೆ ಭರವಸೆ ನೀಡಿ ಪ್ರೋತ್ಸಾಹಿಸಿತು. ಇಂತಹ ಅನೇಕ ಸಂಘ ಸಂಸ್ಥೆಗಳನ್ನು, ಮಠ ಆಶ್ರಮಗಳನ್ನು ಭಾರತದ ನಾನಾ ಕಡೆಗಳಲ್ಲಿ ಅವರು ಸ್ಥಾಪಿಸಿದರು. ಅನ್ನದಾನ, ವಿದ್ಯಾದಾನ ಮತ್ತು ಜ್ಞಾನದಾನ ಈ ಮೂರು ಭಾವಗಳ ಸಮನ್ವಯಕ್ಕಾಗಿ ಅವರು ಬೇಲೂರಿನಲ್ಲಿ ಒಂದು ಮಠವನ್ನು ಕಟ್ಟಿಸಿದರು.

ವಿವೇಕಾನಂದರ ಉಪನ್ಯಾಸಗಳಿಗೆ, ಧರ್ಮ ಚರ್ಚೆಗಳಿಗೆ ಬ್ರಾಹ್ಮ ಸಮಾಜದವರು, ಮಹಮ್ಮದೀಯರು, ಹಿಂದುಗಳು, ಆರ್ಯ ಸಮಾಜದವರು, ವಿಜ್ಞಾನಿಗಳು, ವಿದ್ವಾಂಸರು ಮತ್ತು ಪಂಡಿತರುಗಳು ಬರುತ್ತಿದ್ದರು. ಅವರ

ಉಪನ್ಯಾಸಗಳನ್ನು ಕೇಳಿದವರೆಲ್ಲ ಧನ್ಯರಾಗುತ್ತಿದ್ದರು, ಪುನೀತರಾಗುತ್ತಿದ್ದರು. ಬುದ್ಧಿಪ್ರಧಾನ ಪುರುಷರಾದ ಸ್ವಾಮೀಜಿ ಎರಡು ಬಾರಿ ವಿಶ್ವವನ್ನೆಲ್ಲ ಸುತ್ತಿ ಸರ್ವಧರ್ಮ ಸಮನ್ವಯ ತತ್ತ್ವವನ್ನು ನೆಲೆಗೊಳಿಸಿದರು. ಅವರು ಅನೇಕ ಮಠ, ಆಸ್ಪತ್ರೆ, ಮತ್ತು ಧರ್ಮಶಾಲೆಗಳನ್ನು ದೀನ ದರಿದ್ರರಿಗಾಗಿ ಸ್ಥಾಪಿಸಿ ದರು. ಶ್ರೀ ರಾಮಕೃಷ್ಣರ ಸಂದೇಶದ ವಿಶ್ವಪ್ರಚಾರಕ್ಕಾಗಿ 'ಉದ್ಬೋಧನ' ಮಾಸಪತ್ರಿಕೆಯನ್ನೂ ವಂಗಭಾಷೆಯಲ್ಲಿ ಹೊರಡಿಸಿದರು.

ಸ್ವಾಮೀಜಿಯವರ ಜೀವನದಲ್ಲಿ ಹಾಗೂ ಕಾರ್ಯ ಚಟುವಟಿಕೆಗಳಲ್ಲಿ ಸ್ವದೇಶ ವಾತ್ಸಲ್ಯ, ದೇಶಭಕ್ತಿ, ಉತ್ಕಟವಾದ ಸತ್ಯಪ್ರಿಯತೆ ಮತ್ತು ಬಡವರ ಸೇವೆಯನ್ನು ಸ್ಪಷ್ಟವಾಗಿ ಗುರುತಿಸಬಹುದು. ದೇಹದ ಆರೋಗ್ಯ ಕೆಡಲು ಪ್ರಾರಂಭವಾದ ಮೇಲೂ ಅವರು ತಮ್ಮ ಚಟುವಟಿಕೆಗಳನ್ನು ಕಡಿಮೆಮಾಡ ಲಿಲ್ಲ. ಬಳಿಗೆ ಬಂದವರನ್ನೆಲ್ಲ ವಿಶ್ವಾಸದಿಂದ ಬರಮಾಡಿಕೊಂಡು ಉಪದೇಶ ನೀಡಿದರು. ೧೯೦೨ ನೇ ಸಂವತ್ಸರದ ಜುಲೈ ನಾಲ್ಕನೆಯ ತಾರೀಕು ವಿವೇಕಾ ನಂದರು ಕಾಳೀಪೂಜೆ ಮಾಡಿ ಎಲ್ಲರೊಡನೆ ಸರಸವಾಗಿ ಮಾತನಾಡುತ್ತಾ ಊಟ ಮುಗಿಸಿ ಸಾಯಂಕಾಲ ಹೊರಗೆ ಸುತ್ತಾಡಿ ಬಂದು ಆ ರಾತ್ರಿ ಅನಂತ ನಿದ್ರೆಯಲ್ಲಿ ಮುಳುಗಿದರು. ಲೋಕವಿಖ್ಯಾತರೂ, ಶಾಶ್ವತ ವಿಶ್ವಶಕ್ತಿಯೂ. ಶ್ರೀ ರಾಮಕೃಷ್ಣರ ಪ್ರಿಯಶಿಷ್ಯರೂ ಆದ ಸ್ವಾಮಿ ವಿವೇಕಾನಂದರು ೩೯ನೇ ವಯಸ್ಸಿನಲ್ಲೇ ಗುರುಚರಣಸ್ಥರಾದರು.

ಭಾರತೀಯರ ಯಶಸ್ಸಿಗಾಗಿ, ಹಿಂದೂ ಧರ್ಮದ ಉದ್ಧಾರಕ್ಕಾಗಿ, ದೀನ ದರಿದ್ರರ ಏಳಿಗೆಗಾಗಿ ಜೀವಿತವನ್ನೇ ಮುಡುಪಾಗಿಟ್ಟ ವಿವೇಕಾನಂದರ ಶರೀರ ನಮ್ಮಿಂದ ಕಣ್ಮರೆಯಾಗಿದ್ದರೂ, ಅವರ ವೀರವಾಣಿ ಭಾರತ ಮಾತೆಯ ಹೃದ ಯದಲ್ಲಿ ಚಿರಮುದ್ರಿತವಾಗಿದೆ. 'ದರಿದ್ರರಿಗಾಗಿ ಮರುಗುವ ನಾನೊಬ್ಬ ದರಿದ್ರ' ಎಂದು ಅವರು ಆಗಾಗ್ಗೆ ಹೇಳುತ್ತಿದ್ದರು. ಬಡವರ ರಕ್ತ ಹೀರಿ ಸಂಪಾದಿಸುತ್ತಿದ್ದ ಶ್ರೀಮಂತರನ್ನು 'ನೀಚ ದ್ರೋಹಿಗಳು' ಎಂದು ಅವರು ಶಪಿಸುತ್ತಿದ್ದರು. 'ದರಿದ್ರ ನಾರಾಯಣ ಸೇವೆಯೇ ಶ್ರೀಮನ್ನಾರಾಯಣನ ಸೇವೆ' ಎಂಬ ತತ್ತ್ವವನ್ನು ಅವರು ಉಪದೇಶಿಸಿ ನಿರ್ಮಲ ಹೃದಯದಿಂದ, ಪ್ರೀತಿಯಿಂದ, ಉತ್ಸಾಹದಿಂದ ಶಕ್ತಿಯಿಂದ ದುಡಿದು, ಮುಕ್ತಿ ಪಡೆಯಿರೆಂದು ಜನರಿಗೆ ಸಲಹೆ ನೀಡಿದರು.

ಸ್ವಾಮೀಜಿಯವರ ಉಪನ್ಯಾಸಗಳು ತಮೋನಿದ್ರೆಯಲ್ಲಿರುವ ಹಿಂದೂ

ಸಮಾಜವನ್ನು ಎಚ್ಚರಿಸಿ, ಕರ್ಮರಂಗದಲ್ಲಿ ಸೊಂಟಕಟ್ಟಿ ನಿಲ್ಲುವಂತೆ ಜನತೆಯನ್ನು ಪ್ರೇರೇಪಿಸಿ, ಭಾರತೀಯನ ಧಮನಿಯಲ್ಲಿ ನವಶಕ್ತಿಸ್ಫೂರ್ತಿ ಸಂಚರಿಸುವಂತೆ ಮಾಡಬಲ್ಲವು. ಅವರು ಧರ್ಮ, ಭಗವಂತ, ಸಾಕ್ಷಾತ್ಕಾರ, ಸತ್ಯ-ಶಿವಂ-ಸುಂದರಂ, ವಿದ್ಯಾಭ್ಯಾಸ, ಸ್ತ್ರೀ ಸ್ಥಾನಮಾನಗಳು, ಗೀತೆ, ಉಪನಿಷತ್ತುಗಳಲ್ಲದೆ ವಿಜ್ಞಾನ, ಸಾಹಿತ್ಯ ಮುಂತಾದ ಲೌಕಿಕ ವಿಷಯಗಳ ಮೇಲೂ ಉಪನ್ಯಾಸಕೊಟ್ಟರು. ಅವರು ಮಾಡಿದ ಉಪನ್ಯಾಸಗಳೆಲ್ಲ 'ರಾಜಯೋಗ', 'ಭಕ್ತಿಯೋಗ' ಮತ್ತು 'ಕರ್ಮಯೋಗ' ಎಂಬ ಮೂರುಗ್ರಂಥಗಳಲ್ಲಿ ಪ್ರಕಟವಾಗಿವೆ. ದುರಾಲೋಚನೆಗಳನ್ನೆಲ್ಲ ನಿಗ್ರಹಿಸಿ ಮನಸ್ಸನ್ನು ಶಾಂತಗೊಳಿಸಿ ಏಕಾಗ್ರತೆಯಿಂದ ಜ್ಞಾನ ಸಂಪಾದಿಸುವುದು ರಾಜಯೋಗ. ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ ದೇವರನ್ನು ಪ್ರೀತಿಸಿ, ಭಕ್ತಿಯ ಮೂಲಕ ಜೀವಾತ್ಮ ಪರಮಾತ್ಮನ ಐಕ್ಯತೆಯನ್ನು ಸಂಪಾದಿಸುವುದು ಭಕ್ತಿಯೋಗ. ಕರ್ಮ, ಕರ್ತವ್ಯಗಳ ಮೂಲಕ ತನ್ನ ಪವಿತ್ರತೆಯನ್ನು ಅರಿತುಕೊಳ್ಳುವುದು ಅಥವಾ ದೇವರನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವುದು ಕರ್ಮಯೋಗ. ಅವರು ಜ್ಞಾನ, ಕರ್ಮ, ಭಕ್ತಿಯೋಗ, ರಾಜಯೋಗ, ವರ್ಣಾಶ್ರಮ, ವೇದ, ಉಪನಿಷತ್ತು, ಇತಿಹಾಸ ಪುರಾಣ, ತತ್ತ್ವಧರ್ಮ, ಸಮಾಜ, ಸಂಸ್ಕೃತಿ, ಕಲೆ ಇತ್ಯಾದಿ ವಿಷಯಗಳನ್ನು ಕುರಿತು ಮಾಡಿದ ಉಪನ್ಯಾಸ ಸಂಕಲನ 'ಪ್ರವಚನಾದಿ' ಗ್ರಂಥರೂಪದಲ್ಲಿ ಪ್ರಕಟವಾಗಿದೆ. ಹಿಂದೂಧರ್ಮದ ವೈಶಾಲ್ಯ ಮತ್ತು ವೇದಾಂತ ತತ್ತ್ವದ ಪರಿಚಯ ಆಕಾಶದಷ್ಟು ವಿಶಾಲ, ಸಾಗರದಷ್ಟು ಆಳವಾಗಿರುವ ವಿವೇಕಾನಂದರ ಉಪನ್ಯಾಸಗಳಿಂದ ಸಾಮಾನ್ಯರಿಗೂ ಆಗುತ್ತದೆ. ಜನರ ಅಜ್ಞಾನ, ಅಂಧಕಾರ, ಜಡತೆ, ಪಾಪ, ನಿರಾಶೆಗಳನ್ನೆಲ್ಲ ತೊಲಗಿಸಿ ವಿಶ್ವಮಾನವನ ಪ್ರತಿಷ್ಠಾಪನೆ ಮಾಡಿ, ಉದಾತ್ತ ಸಮನ್ವಯ ದೃಷ್ಟಿಯನ್ನು ಸೃಷ್ಟಿಸುವ ಶಕ್ತಿ ಅವರ ಉಪನ್ಯಾಸಗಳಿಗಿವೆ.

ಜ್ಞಾನ ಸಂಪಾದಿಸಿ ಮಾಯಾ ಜಗತ್ತಿನ ಹಿಂದಿರುವ ಆನಂದ ಸ್ವರೂಪವನ್ನು ಮುಟ್ಟುವುದೇ ಮಾನವನ ಗುರಿಯಾಗಬೇಕು. ಅವನು ಅಜ್ಞಾನ, ಅಸೂಯೆ, ಚಂಚಲತೆ, ಸೋಮಾರಿತನ, ಪ್ರಾಪಂಚಿಕ ವಸ್ತುಗಳೆಂಬ ಶತ್ರುಗಳಿಂದ ದೂರವಿರಬೇಕು. ಮೂಢನಂಬಿಕೆಗಳನ್ನು ತ್ಯಜಿಸಿ, ಮಂದಹಾಸದಿಂದ ಧೈರ್ಯಶಾಲಿಯಾಗಿ ನಿಜವಾದ ಗುರಿಯಾದ ದೇವರಲ್ಲಿ ಅಚಲನಾಗಿ ನಿಂತು ಭೌತಿಕ

ಪ್ರಪಂಚದ ನಶ್ವರತೆಯನ್ನು ಚೆನ್ನಾಗಿ ಅರ್ಥಮಾಡಿಕೊಂಡು, ಸಾಂಸ್ಕೃತಿಕ ದೃಷ್ಟಿಯನ್ನು ವಿಶಾಲಗೊಳಿಸಬೇಕು. ಅವನು ಕಲೆ ಮತ್ತು ವಿಜ್ಞಾನವನ್ನು ಕಲಿತು ಅವುಗಳಲ್ಲಿರುವ ಸತ್ತ್ವವನ್ನು ಹೀರಿಕೊಳ್ಳಬೇಕು ಎಂದು ಅವರು ಸಂದೇಶ ನೀಡಿದರು.

ದೇವರು ಸರ್ವಸ್ವ, ಈ ಪ್ರಪಂಚದ ಸೃಷ್ಟಿಕರ್ತ, ಸರ್ವವೂ ಬ್ರಹ್ಮಮಯ ಎಂದು ದೃಢವಾಗಿ ನಂಬಿದ್ದ ವಿವೇಕಾನಂದರು ಬ್ರಹ್ಮ, ತಾನು ಒಂದೇ, ಬೇರೆಯಲ್ಲ ಎನ್ನುವುದನ್ನು ಅರ್ಥಮಾಡಿಕೊಂಡು ದೇವರಲ್ಲಿ ಒಂದಾಗುವುದೇ ಮಾನವನ ಗುರಿಯಾಗಬೇಕೆಂದರು. ಜಗತ್ತನ್ನು ರಕ್ಷಿಸುತ್ತಿರುವ ದೇವರು, ಸತ್ಯ ಎರಡೇ ಈ ಪ್ರಪಂಚದ ರಾಜನೀತಿಗಳು, ಉಳಿದುದೆಲ್ಲ ಬರಿಯ ಐಲು ಎಂದು ಸ್ಪಷ್ಟಪಡಿಸಿದರು. ಸರ್ವವ್ಯಾಪಿ ಭಗವಂತನನ್ನು ಮಾನವ ಸಹಿಷ್ಣುತೆ ಬೆಳೆಸಿಕೊಂಡು ಸಮತೆಯಿಂದ ನೋಡುವ ಶಕ್ತಿಯನ್ನು ಸಂಪಾದಿಸ ಬೇಕು. ಅವನನ್ನು ಮುಟ್ಟುವ ಸಲುವಾಗಿ ಮಾನವರು ಅನೇಕ ದಾರಿಗಳಲ್ಲಿ ಹೆಜ್ಜೆ ಹಾಕುತ್ತಿದ್ದಾರೆ. ಆ ಗುರಿ ಮುಟ್ಟದಿದ್ದರೆ ಅವರು ನಾಶವಾಗುವುದು ಖಂಡಿತ ಎಂದು ಸ್ವಾಮೀಜಿ ಎಚ್ಚರಿಕೆ ಕೊಟ್ಟರು. ಭಗವಂತನೇ ಎಲ್ಲದರ ಕೇಂದ್ರ, ಎಲ್ಲದರ ಐಕ್ಯ, ಅದೇ ಸತ್‌ಚಿತ್ ಆನಂದ. ಭಗವಂತನಲ್ಲಿ ಒಂದಾದ ಮಾನವ ಪರಿಪೂರ್ಣ ಐಕ್ಯತೆ ಮತ್ತು ಪರಿಪೂರ್ಣ ಆನಂದವನ್ನು ಹೊಂದು ತ್ತಾನೆ. ಅಲ್ಲಿ ಮರಣ, ರೋಗ, ದುಃಖ, ಸಂಕಟ, ಅತೃಪ್ತಿ ಯಾವುದೂ ಇಲ್ಲ. ದೇವರು ಎಲ್ಲ ಧರ್ಮಗಳ ಕೇಂದ್ರ ಹಾಗೂ ಪ್ರೇಮ ಸ್ವರೂಪ. ಪ್ರೇಮ ವಿದ್ದಲ್ಲಿ ಅವನಿದ್ದೇ ಇರುತ್ತಾನೆ. 'ದೇವರು ಪ್ರತಿಯೊಬ್ಬನ ಜೀವದ ಜೀವ, ಆತ್ಮದ ಆತ್ಮ. ಆತ್ಮನನ್ನು ಮಾತ್ರ ಅರ್ಥಮಾಡಿಕೊಂಡು ಉಳಿದ ಮಾತುಗಳನ್ನೆಲ್ಲ ತ್ಯಜಿಸು' ಎಂದು ಸಾರುವ ಉಪನಿಷತ್ತಿನ ಸಂದೇಶವನ್ನು ಅವರು ಬಹಳವಾಗಿ ಮೆಚ್ಚಿಕೊಂಡರು.

ಭಗವಂತನಲ್ಲಿ ಶರಣಾಗತನಾದರೆ ಅವನು ಕೃಪೆ ತೋರಿ ನಮ್ಮನ್ನೆಲ್ಲ ಉದ್ಧಾರ ಮಾಡುತ್ತಾನೆ. ಅವನು ಮಾನವನನ್ನು ಅಸತ್ಯದಿಂದ ಸತ್ಯದ ಕಡೆಗೆ, ತಮಸ್ಸಿನಿಂದ ಜ್ಯೋತಿಯ ಕಡೆಗೆ, ಮೃತ್ಯುವಿನಿಂದ ಅಮರತ್ವದ ಕಡೆಗೆ ಕರೆ ದೊಯ್ಯುತ್ತಾನೆ. ಭಕ್ತಿ ಕರ್ಮದೊಡನೆ ಐಕ್ಯವಾದಾಗ ಪರಮಾತ್ಮನ ಸಾಕ್ಷಾ ತ್ಕಾರವಾಗುವುದು ಎಂದು ಉಪದೇಶಿಸಿದ ವಿವೇಕಾನಂದರು ಜನತೆಯ ಮುಂದೆ

ಬಂದು ಆದರ್ಶವನ್ನೇ ಇಟ್ಟರು. ಅಜ್ಞಾನಾಂಧಕಾರದಲ್ಲಿ ಮುಳುಗಿ ನರಳು ತ್ತಿರುವ ಅಸಂಖ್ಯಾತ ಭಾರತೀಯರಿಗಾಗಿ ತಮ್ಮ ಹೃದಯ ಮರುಗುವಂತೆ ಮಾಡಲೆಂದು ಅವರು ಭಗವಂತನನ್ನು ಪ್ರಾರ್ಥಿಸುತ್ತಿದ್ದರು.

ಮಾನವನ ಆತ್ಮ ಭಗವಂತನೆಂಬ ವಿಶ್ವ ಚೈತನ್ಯದ ಒಂದು ಅಂಶ. ಅದೇ ಜೀವನದ ಸತ್ಯ, ಮಾನವನ ಸುಸ್ವರೂಪ, ಸರ್ವವ್ಯಾಪಿ. ಆತ್ಮನ ದೃಷ್ಟಿಯಿಂದ ಪುನರ್ಜನ್ಮವೆನ್ನುವುದು ಒಂದು ಭ್ರಾಂತಿ. ಆತ್ಮಕ್ಕೆ ಹುಟ್ಟಿಲ್ಲ, ಸಾವಿಲ್ಲ. ಅದು ಬರುವುದೂ ಇಲ್ಲ, ಹೋಗುವುದೂ ಇಲ್ಲ. ಹುಟ್ಟುವ ಸಾಯುವ ನಶ್ವರ ದೇಹ ನಿಜವಾದ ಮನುಷ್ಯನಲ್ಲ. ಒಂದೇ ವ್ಯಕ್ತಿ ಸ್ವರೂಪ ವುಳ್ಳ ಆತ್ಮವನ್ನು ನಾಶಗೊಳಿಸುವುದು ಸಾಧ್ಯವಿಲ್ಲ. ಅದನ್ನು ಬೆಂಕಿ ಸುಡ ಲಾರದು, ಭರ್ಜಿ ತಿವಿಯಲಾರದು ಮತ್ತು ನೀರು ಕರಗಿಸಲಾರದು. ಆತ್ಮದ ಮೋಕ್ಷ ಸಾಧನೆಗಾಗಿ ಎಲ್ಲರೂ ದುಡಿಯಬೇಕು, ಮಡಿಯಬೇಕು ಎನ್ನುವ ಭಾವನೆ ಶಿಷ್ಯರ ಮನಸ್ಸಿನಲ್ಲಿ ಬೇರೂರುವಂತೆ ವಿವೇಕಾನಂದರು ಉಪದೇಶಿಸಿ ದರು.

ವಿವೇಕಾನಂದರು ಹಿಂದೂಧರ್ಮದ ಉದ್ಧಾರಕರು ಮತ್ತು ಪ್ರಚಾರಕರು. ಮಾನವ ಜನಾಂಗದ ಭವಿಷ್ಯವನ್ನು ನಿರ್ಧರಿಸಲು ಪ್ರಚಂಡ ಶಕ್ತಿ ಬೀರುತ್ತಿರುವ ಧರ್ಮದ ಬಗ್ಗೆ ಅವರು ಉಪನ್ಯಾಸಕೊಟ್ಟರು. ವ್ಯಾಸಂಗ ದೃಷ್ಟಿಯಿಂದ, ವಿಜ್ಞಾನ ದೃಷ್ಟಿಯಿಂದ ಧರ್ಮ ಮಾನವನ ಮನಸ್ಸಿಗೆ ಒಂದು ಆರೋಗ್ಯಕರ ವಾದ ಸಾಧನೆ. ಅಸೂಯೆ, ಜುಗುಪ್ಸೆ, ಅಂಧಶ್ರದ್ಧೆ, ಸಂಕುಚಿತ ದೃಷ್ಟಿ ಯಿಲ್ಲದ, ಎಲ್ಲ ಧರ್ಮಗಳೂ ಸಮನ್ವಯಗೊಂಡಿರುವ ಅವರ ಧರ್ಮವಾಣಿ ಸರ್ವರಿಗೂ ಜ್ಯೋತಿ ನೀಡುವುದರಲ್ಲಿ ಸಂದೇಹವಿಲ್ಲ. ಭರತಖಂಡದಲ್ಲಿ ಅವಶ್ಯಕ ವಾಗಿ ಧರ್ಮಕ್ರಾಂತಿಯಾಗಬೇಕು, ಧರ್ಮಬೋಧೆ ನೀರಸವಾಗಿ, ನಿರಂತರ ವಾಗಿ ನಡೆಯಬೇಕೆಂದು ಅವರು ಅಭಿಪ್ರಾಯಪಟ್ಟರು. ಪ್ರಕೃತಿಯ ಹಿಡಿತ ದಿಂದ ಪಾರಾಗಿ ಹೋಗುವ ಸಣ್ಣ ಪುಟ್ಟ ಪ್ರಯತ್ನಗಳನ್ನು ಕೈಗೊಳ್ಳುವುದೇ ಧರ್ಮದ ಗುರಿಯಾಗಬೇಕು. ಎಲ್ಲ ಧರ್ಮಗಳೂ ಸತ್ಯ ಎಂದು ಒಪ್ಪಿಕೊಂಡ ವಿವೇಕಾನಂದರು ಸ್ವಾರ್ಥಕ್ಕಾಗಿ, ಹಣ ಸಂಪಾದನೆಗಾಗಿ ಧರ್ಮವನ್ನೆಂದೂ ಬಳಸಿಕೊಳ್ಳಲಿಲ್ಲ. ಪ್ರಚಂಡ ಶಕ್ತಿ ಹಾಗೂ ಸ್ವಾತಂತ್ರ್ಯವಿರುವ ಧರ್ಮದ ಸತ್ಯವನ್ನು, ಸಾರವನ್ನು ಅವರು ಸರ್ವರಿಗೂ ಬೋಧಿಸಿ ವೀರಧರ್ಮವನ್ನು

ಪಡೆಯಿರಿ ಎಂದು ಶಿಷ್ಯರಿಗೆ ಉಪದೇಶಿಸಿದರು.

ವಿವೇಕಾನಂದರು ಸರ್ವರ ಸ್ವೀಕಾರಕ್ಕೂ ಯೋಗ್ಯವಾಗಿರುವಂತಹ, ಭಕ್ತಿಯುತವಾದ, ಸತ್ತ್ವಶಾಲಿಯಾದ ಧರ್ಮವನ್ನು ಪ್ರಚಾರಮಾಡಿದರು. ಧರ್ಮದ ಪ್ರಚಾರಕ್ಕಾಗಿ ಸಂಸ್ಥೆಗಳನ್ನು ಸ್ಥಾಪಿಸುವಂತೆ ತರುಣರನ್ನು ಅವರು ಪ್ರೋತ್ಸಾಹಿಸಿದರು. ಭಗವಂತನ ಸಾಕ್ಷಾತ್ಕಾರವೇ ಎಲ್ಲ ಧರ್ಮಗಳ ಗುರಿ. ಧರ್ಮಗಳೆಲ್ಲ ಒಂದೇ, ಅವುಗಳ ಗುರಿಯೂ ಒಂದೇ. ಹೂಮಾಲೆಯಲ್ಲಿರುವ ಒಂದೊಂದು ಹೂವಿನಂತೆ ಪ್ರತಿಯೊಂದು ಧರ್ಮದಲ್ಲೂ ಒಂದೊಂದು ವೈಶಿಷ್ಟ್ಯವನ್ನು ನೋಡಬಹುದು. ಧರ್ಮಗಳೆಲ್ಲ ಸತ್ಯದ ಕಡೆಗೆ, ಗುರಿ ಮುಟ್ಟಲು ಹೋಗುವ ಭಿನ್ನ ಭಿನ್ನ ಮಾರ್ಗಗಳು. ಆದ್ದರಿಂದ ನಮ್ಮ ಧರ್ಮವೇ ಶ್ರೇಷ್ಠ, ತಮ್ಮದೇ ಜಗತ್ತನ್ನು ಉದ್ಧರಿಸಬಲ್ಲದು ಎನ್ನುವ ಮಾನವನ ಸಂಕುಚಿತ ಮನೋಭಾವ ಹೋಗಬೇಕು. ಈ ಪವಿತ್ರ ಭಾರತ ಭೂಮಿಯಲ್ಲಿ ಧರ್ಮವೇ ಭಾರತೀಯರ ಬೆನ್ನೆಲಬು. ಧರ್ಮವೇ ನಿಧಿ ನಿಕ್ಷೇಪ. ಮಾನವನ ನಡತೆಯನ್ನು ತಿದ್ದಲು, ಅವನನ್ನು ಕೈ ಹಿಡಿದು ಸರಿಯಾದ ದಾರಿಯಲ್ಲಿ ನಡೆಸಲು ಧರ್ಮ ನೆರವಾಗುವುದು.

ಭಗವಂತನಂತೆ ಪವಿತ್ರಾತ್ಮರಾಗುವುದೇ ಹಿಂದೂ ಧರ್ಮದ ಗುರಿ. ಸ್ವಾಮೀಜಿ ಬೋಧಿಸಿದ ಸರ್ವಧರ್ಮ ಸಮನ್ವಯ ತತ್ತ್ವ ಪ್ರಪಂಚದ ಧರ್ಮಗಳಿಗೆಲ್ಲ ತಳಹದಿಯಾಗಬಲ್ಲದು. ಸಕಲ ಧರ್ಮಗಳನ್ನೂ ಪೂಜ್ಯಭಾವದಿಂದ ನೋಡುತ್ತಿದ್ದ ವಿವೇಕಾನಂದರು ಯಾವ ಧರ್ಮವನ್ನೂ ವಿರೋಧಿಸಲಿಲ್ಲ. ಎಲ್ಲರೂ ತಮ್ಮ ತಮ್ಮ ಧರ್ಮಗಳಲ್ಲಿರುವ ಪವಿತ್ರತೆಯನ್ನು ವ್ಯಕ್ತಗೊಳಿಸಬೇಕು, ವೃದ್ಧಿಗೊಳಿಸಬೇಕು ಎಂದು ಅವರು ಅಪೇಕ್ಷಿಸಿ ಧರ್ಮದ ತಿರುಳನ್ನೇ ಜನತೆಯ ಮುಂದಿಟ್ಟರು. ಭಾರತದ ಪ್ರಾಣದಂತಿರುವ ಧರ್ಮ ಹೋದರೆ ಸರ್ವನಾಶ ಖಂಡಿತ ಎಂದು ಎಚ್ಚರಿಸಿದ ವಿವೇಕಾನಂದರು ಧರ್ಮದ ತತ್ತ್ವವನ್ನು ಬೋಧಿಸಿ ಧಾರ್ಮಿಕ ಪ್ರವೃತ್ತಿ ಹೆಚ್ಚಬೇಕೆಂದು ಒತ್ತಿಹೇಳಿ ಧರ್ಮದ ಮಹತ್ವವನ್ನು ಎತ್ತಿ ಹಿಡಿದರು.

ಪ್ರತಿಯೊಂದು ಧರ್ಮವೂ ಸಹಾಯ, ಸ್ವೀಕಾರ, ಶಾಂತಿ, ಸಮನ್ವಯದ ಬಾವುಟ ಹಾರಿಸಬೇಕು ಎಂದು ಅವರು ಬಯಸಿದರು. ಅಪಾರ ದಯೆ, ಅನುಕಂಪವುಳ್ಳ ವಿವೇಕಾನಂದರು ದರಿದ್ರ ನಾರಾಯಣ ಸೇವಾರೂಪದ ಧರ್ಮ

ಸಾಧನೆಯನ್ನು ಲೋಕಕ್ಕೆ ಕಲಿಸಿಕೊಟ್ಟರು. ಹಿಂದೂ ನಾಗರಿಕತೆಯು ಅತ್ಯಂತ ಪ್ರಾಚೀನವಾದ, ಶ್ರೇಷ್ಠವಾದ ಧರ್ಮಗಳಿಂದ ಹುಟ್ಟಿರುವುದರಿಂದ ಅದು ಪ್ರತಿಯೊಂದು ಅಂಗದಲ್ಲೂ ಒಳ್ಳೆಯದೂ, ಶ್ರೇಷ್ಠವೂ, ಸುಂದರವೂ, ಆಧ್ಯಾತ್ಮಿಕವೂ ಆಗಿದೆ. ಧರ್ಮ ಕೇವಲ ಸಿದ್ಧಾಂತದ ಹೊರೆಯಾಗಿ ಉಳಿಯದೆ ನಮ್ಮ ಬಾಳನ್ನು ಪ್ರವೇಶಿಸಬೇಕು. ಧರ್ಮ ಜಾಗ್ರತಿಯ ಮೂಲಕ ಭರತಖಂಡ ಜಾಗ್ರತವಾಗಬೇಕು. ಧರ್ಮ ಯಾವ ವ್ಯಕ್ತಿಯ ವೈಶಿಷ್ಟ್ಯವನ್ನೂ ನಾಶಮಾಡದೆ ಇತರರೊಂದಿಗೆ ಸಾಮರಸ್ಯವನ್ನು ಕಾಣುವಂತೆ ಮಾಡಬಲ್ಲದು. ಮಾನವರ ಉತ್ಕೃಷ್ಟತೆಯನ್ನು ಮಹಿಮೆಯನ್ನು ಹಿಂದೂ ಧರ್ಮ ಉಚ್ಚ ರೀತಿಯಲ್ಲಿ ಹೇಳುವಂತೆ ಯಾವ ಧರ್ಮವೂ ಹೇಳುವುದಿಲ್ಲ ಎನ್ನುವ ವಿವೇಕಾನಂದರ ಧೀರವಾಣಿ ಪಾಶ್ಚಾತ್ಯರ ಕಣ್ಣಿಗೆ ಬೆಳಕು ಕೊಟ್ಟಿತು ಮತ್ತು ಅವರ ಸಂಕುಚಿತ ಹೃದಯವನ್ನು ವಿಶಾಲಗೊಳಿಸಿತು.

ವಿವೇಕಾನಂದರು ಸಾಧಿಸಿದ ಪ್ರಗತಿ ಬಹುಮುಖವಾದುದು. ವಜ್ರದಂತೆ ಕಠಿಣವೂ, ಹೂವಿನಂತೆ ಕೋಮಲವೂ, ಸಾಗರದಂತೆ ಆಳವಾಗಿ ವಿಸ್ತಾರವಾದ ಮನಸ್ಸುಳ್ಳ ಅವರು ಜನರ ಹೃದಯದಿಂದ ಅಜ್ಞಾನಾಂಧಕಾರವನ್ನು ಕಿತ್ತೊಗೆದು ಅಲ್ಲಿ ಜ್ಞಾನದ ಜ್ಯೋತಿಯನ್ನು ನೆಟ್ಟರು. ಜಾತಿ, ಮತ, ವರ್ಣಗಳನ್ನು ಲೆಕ್ಕಿಸದೆ ಬಡವರ ಸೇವೆ ಮಾಡಿದರು. ಭಕ್ತರಿಗೆ ಗಾಯಿತ್ರಿ ಮಂತ್ರವನ್ನು ಉಪದೇಶಿಸಿ ಯಜ್ಞೋಪವೀತವನ್ನು ದಾನ ಮಾಡಿದರು. ಧರ್ಮ ಶಾಸ್ತ್ರಗಳನ್ನು ಓದುವುದು, ಅರ್ಥಹೇಳುವುದು, ವೇದ ವೇದಾಂತಗಳಲ್ಲಿ ಬರುವ ಸಮಸ್ಯೆಗಳ ಮೇಲೆ ಉಪನ್ಯಾಸ ನೀಡುವುದು, ಶಾಸ್ತ್ರದ ಗೂಢಾರ್ಥವನ್ನು ವಾಕ್ಯಾರ್ಥ ಮಾಡುವುದರಲ್ಲೂ ವಿವೇಕಾನಂದರು ಅದ್ವಿತೀಯರು. ಹಿಂದೂ ಪುರಾಣಗಳಲ್ಲಿ ಬರುವ ಕಥೆಗಳನ್ನು ಮನಮುಟ್ಟುವ ರೀತಿಯಲ್ಲಿ ಹೇಳುತ್ತಾ ಅವರು ಅವುಗಳ ಮೂಲಕ ಗಹನವಾದ ವಿಚಾರಗಳನ್ನು ಸಾಮಾನ್ಯರಿಗೂ ಅರ್ಥವಾಗುವಂತೆ ವಿವರಿಸುತ್ತಿದ್ದರು. ಭಗವದ್ಗೀತೆ, ಉಪನಿಷತ್ತುಗಳು, ವ್ಯಾಸರ ವೇದಾಂತ ಸೂತ್ರಗಳು ಮುಂತಾದ ಗ್ರಂಥಗಳ ಬಗ್ಗೆ ಅವರು ಅನೇಕ ಉಪನ್ಯಾಸಗಳನ್ನು ನೀಡಿದರು. ವಿವೇಕಾನಂದರು ವಿಶಿಷ್ಟಾದ್ವೈತವನ್ನು ವಿವರಿಸಿ, ಅತ್ಯಂತ ಗಹನವಾದ ಅದ್ವೈತವು ಜನರ ನಿಜಜೀವನದಲ್ಲಿ ಸುಂದರ ಗೀತೆ ಪ್ರವೇಶಿಸುವಂತೆ ಮಾಡಿದರು. ಪಂಡಿತರ ಸ್ವತ್ತಾಗಿದ್ದು, ಗುಪ್ತವಾಗಿ, ಅತಿ

ಕ್ಲಿಷ್ಟವಾಗಿದ್ದ ತತ್ತ್ವಶಾಸ್ತ್ರಗಳು, ಉಪನಿಷತ್ತುಗಳನ್ನು ಅವರು ಸುಲಭ ರೀತಿಯಲ್ಲಿ ವಿವರಿಸಿ ಹೇಳುತ್ತಿದ್ದರು.

ಸೌಂದರ್ಯೋಪಾಸಕರೂ, ಜ್ಞಾನಿಯೂ, ಭಕ್ತರೂ ಆಗಿದ್ದ ವಿವೇಕಾನಂದರು ಜಡ ಸಂಪತ್ತಿನ ತಳುಕಿಗೆ, ಆಡಂಬರಕ್ಕೆ ಬೆರಗಾದವರಲ್ಲ, ಮೋಸ ಹೋದವರಲ್ಲ. ಅವರು ಅಂತರಂಗದ ಸಾಧನೆಯನ್ನು ಪ್ರೋತ್ಸಾಹಿಸಿ, ಬಾಹ್ಯ ಪೂಜೆಯನ್ನು ಖಂಡಿಸಿ, ಅಜ್ಞಾನಿಗಳ ದುಃಖಗಳನ್ನು ಪರಿಹರಿಸಿದರು. ವಿಶಾಲವಾದ ಪಾಂಡಿತ್ಯ, ಸರ್ವ ಮತಗಳನ್ನು ಪರಮ ಸತ್ಯದೆಡೆಗೆ ಒಯ್ಯುವ ಪಥ, ಉಜ್ವಲವಾದ ರಾಷ್ಟ್ರಪ್ರೇಮ ಅವರಲ್ಲಿ ಒಂದುಗೂಡಿದ್ದವು. ಭಾರತ ಅವರಿಗೆ ಪುಣ್ಯಭೂಮಿ, ಯಾತ್ರಾಸ್ಥಳ ಮತ್ತು ತೀರ್ಥಕ್ಷೇತ್ರವಾಗಿತ್ತು. ಅವರು ಭಾರತಮಾತೆಯ ಉದ್ಧಾರಕ್ಕಾಗಿ ದುಡಿದು ಅಂತ್ಯದಲ್ಲಿ ಆಕೆಗಾಗಿಯೇ ಮಡಿದರು. ಅವರ ದೇಹದಲ್ಲಿ ಹರಿಯುತ್ತಿದ್ದ ರಕ್ತದ ಪ್ರತಿಯೊಂದು ಕಣದಲ್ಲೂ ದೇಶಭಕ್ತಿ ಎದ್ದು ಕಾಣಿಸುತ್ತಿತ್ತು.

ಶ್ರೀ ರಾಮಕೃಷ್ಣ ಪರಮಹಂಸರನ್ನು ವಿವೇಕಾನಂದರು ಅವತಾರಪುರುಷರೆಂದು ಸಾರಿದರು. ದೇಹ, ಮನಸ್ಸು, ಆತ್ಮವನ್ನು ದುರ್ಬಲಗೊಳಿಸುವುದನ್ನೆಲ್ಲ ದೂರವಿಟ್ಟು ಉಪನಿಷತ್ತಿನ ಸತ್ಯಗಳನ್ನು ಅನುಷ್ಠಾನ ಮಾಡಿರೆಂದು ಅವರು ಜನತೆಗೆ ಬೋಧಿಸಿದರು. ಸ್ವಾಮೀಜಿಯವರ ಉಪನ್ಯಾಸಗಳು, ಪ್ರವಚನ, ಲೇಖನ, ಸಂಭಾಷಣೆಗಳೆಲ್ಲ ಪ್ರಕಟವಾಗಿವೆ. ಅವರ ಸಾಹಿತ್ಯಗಂಗೆ ಜನರ ಅಜ್ಞಾನವನ್ನು ಹೋಗಲಾಡಿಸುವುದು, ಪಾಪವನ್ನು ತೊಳೆಯಬಲ್ಲದು, ಮತ್ತು ಭಾರತೀಯನ ದೇಹಕ್ಕೆ ನೂತನ ಶಕ್ತಿ, ಸ್ಫೂರ್ತಿ ಕೊಟ್ಟು ಅವನನ್ನು ಸಿಂಹಪುರುಷನನ್ನಾಗಿ ಮಾಡಬಲ್ಲದು. ಜಾತಿಯಲ್ಲಿ ಯಾರೂ ಬ್ರಾಹ್ಮಣನಲ್ಲ. ಕರ್ಮದಲ್ಲಿ, ಭಾವದಲ್ಲಿ, ಹೃದಯದ ಔನ್ನತ್ಯದಲ್ಲಿ ಪ್ರತಿಮಾನವನೂ ಬ್ರಾಹ್ಮಣನಾಗಬೇಕು. ಈ ದೃಷ್ಟಿಯಿಂದ ಪ್ರತಿಯೊಬ್ಬನನ್ನೂ ಬ್ರಾಹ್ಮಣನನ್ನಾಗಿ ಮಾಡುವುದೇ ಅವರ ಗುರಿಯಾಗಿತ್ತು. ವಿಕಾಸವೇ ಜೀವನ, ಸಂಕೋಚ ಸಂಕುಚಿತ ಮನೋಭಾವವೇ ಮರಣ. ಎಲ್ಲರೂ ಒಂದೇ, ಎಲ್ಲರಲ್ಲೂ ಈಶ್ವರ ನಿದ್ದಾನೆ. ಆಹಾರದಲ್ಲಿ, ಆಲೋಚನೆಯಲ್ಲೂ ಸಮತ್ವವನ್ನು ಅನುಷ್ಠಾನಕ್ಕೆ ತರಬೇಕು. ಹೃದಯದಲ್ಲಿ ಕನಿಕರ ತುಂಬಿಕೊಂಡು, ಎಲ್ಲರೂ ನಿಮ್ಮ ಆತ್ಮದ ಅಂಶಗಳೆಂದು ತಿಳಿದು, ಎಲ್ಲವನ್ನೂ ತ್ಯಜಿಸಿ ಸನ್ಮಾರ್ಗದಲ್ಲಿ ಹೆಜ್ಜೆ ಹಾಕಿ ಎಂದು

ಅವರು ಜಗತ್ತಿಗೇ ಸಂದೇಶ ನೀಡಿದರು.

ವಿವೇಕಾನಂದರು ಬರೆದ ಪುಸ್ತಕಗಳಲ್ಲಿ ಬರುವ ಲಘು ಹಾಸ್ಯ, ಕಥನ ಶೈಲಿ, ವರ್ಣನೆ, ವಿಮರ್ಶಾತ್ಮಕ ದೃಷ್ಟಿ ಓದುಗರ ಮೆಚ್ಚುಗೆ ಗಳಿಸುವುದರಲ್ಲಿ ಸಂದೇಹ ವಿಲ್ಲ. ಹಿಂದೂಗಳೆಲ್ಲ ಪರಸ್ಪರ ಅಣ್ಣ ತಮ್ಮಂದಿರು. ಸಮಸ್ತ ಜೀವದಲ್ಲಿ, ಸಮಸ್ತ ವಸ್ತುಗಳಲ್ಲಿ, ನನ್ನಲ್ಲಿರುವ ಆತ್ಮ ಎಲ್ಲವೂ ಒಂದೇ ಎಂದು ತಿಳಿಯಬೇಕು. ಆತ್ಮ ಜ್ಞಾನ ಲಾಭವೇ ಸಕಲ ಸಾಧನೆಯ ಮುಖ್ಯ ಉದ್ದೇಶ್ಯ. ತ್ಯಾಗದಿಂದ, ಪೂರ್ಣ ವಿಕಾಸದಿಂದ ಬದುಕಿನ ಸಮಸ್ಯೆಯ ರಹಸ್ಯವನ್ನು ಭೇದಿಸುವುದು ಸಾಧ್ಯ. ತ್ಯಾಗವೇ ಮಾನವ ಜೀವನದ ಮೂಲ ಮಂತ್ರವಾಗಬೇಕೆಂದು ಸ್ವಾಮಿಜಿ ಉಪದೇಶಿಸಿದರು.

ಅಜ್ಞಾನ ಕೂಪದಲ್ಲಿ ಮುಳುಗಿರುವ ಜನರ ಉದ್ಧಾರಕ್ಕಾಗಿ ಹೆಣ್ಣು, ಹೊನ್ನಿನ ವ್ಯಾಮೋಹ ಬಂಧನದಿಂದ ಅವರನ್ನು ಪಾರುಮಾಡಲು ಆಧ್ಯಾತ್ಮಿಕ ಸಾಧನೆ, ಸಾಕ್ಷಾತ್ಕಾರ ಸಹಾಯ ಮಾಡುವುದೆಂದು ವಿವೇಕಾನಂದರು ಸ್ಪಷ್ಟ ಪಡಿಸಿದರು. ಸ್ವಮತಾಭಿಮಾನ, ಅನ್ಯಮತದ್ವೇಷ ಇವುಗಳಿಂದ ಜಗತ್ತು ಹಿಂಸೆಯಿಂದ ತುಂಬಿಕೊಂಡಿದೆ, ಸಂಸ್ಕೃತಿ ನಾಶವಾಗುತ್ತಿದೆ. ಇದು ಮಾನವ ಜನಾಂಗದ ಬೆಳವಣಿಗೆಗೇ ಅಡ್ಡಿಯಾಗಿ ನಿಂತಿದೆ ಎಂದು ಅವರು ಎಚ್ಚರಿಸಿದರು. ಎಲ್ಲರೂ ವಿದ್ಯಾವಂತರಾಗಿ ತಮ್ಮ ಕಾಲುಗಳ ಮೇಲೆ ತಾವು ನಿಂತು ಮನುಷ್ಯ ರಾಗಿ ಬಾಳಬೇಕು. ಸರ್ವತೋಮುಖಿಗಳನ್ನಾಗಿ ಮಾಡುವ ವಿದ್ಯಾಭ್ಯಾಸದ ಅಗತ್ಯ ನಮಗಿದೆ. ವಿದ್ಯಾಭ್ಯಾಸ ಸಾಮಾನ್ಯ ಜನರಿಗೆ ಜೀವನೋಪಾಯಕ್ಕೆ ಸಹಾಯ ಮಾಡಬೇಕು, ಚಾರಿತ್ರ್ಯ ಶುದ್ಧಿಗೆ ನೆರವು ನೀಡಬೇಕು, ಜೀವಿಯ ಹೃದಯದಲ್ಲಿ ಪರೋಪಕಾರದ ಭಾವನೆಯನ್ನು, ಸಿಂಹಧೈರ್ಯವನ್ನು ತುಂಬ ಬೇಕು. ವಿಷಯ ಸಂಗ್ರಹಣೆಯೇ ವಿದ್ಯಾಭ್ಯಾಸದ ಗುರಿಯಾಗಬಾರದು, ಬರೀ ಪುಸ್ತಕ ಪಾಂಡಿತ್ಯದಿಂದ ಏನೂ ಪ್ರಯೋಜನವಿಲ್ಲ. ವಿದ್ಯಾಭ್ಯಾಸದಿಂದ ವ್ಯಕ್ತಿಯ ಮಾನಸಿಕ ಶಕ್ತಿ ವೃದ್ಧಿಯಾಗಬೇಕು, ಬುದ್ಧಿ ವಿಕಾಸವಾಗಬೇಕು, ಸ್ವತಂತ್ರನಾಗಿ ಬಾಳುವಂತಹ ಸ್ಥಿತಿಗೆ ಬರಬೇಕು ಎಂದು ಅಭಿಪ್ರಾಯಪಟ್ಟ ವಿವೇಕಾನಂದರು 'ಈಗಿನ ವಿದ್ಯಾಭ್ಯಾಸ ಕೇವಲ ಗುಮಾಸ್ತನನ್ನು ತಯಾರು ಮಾಡುವ ಕಾರ್ಖಾನೆಯಂತಿದೆ' ಎಂದು ಟೀಕೆ ಮಾಡಿದರು. ಶಿಕ್ಷಣ ಕ್ರಮದ ಸುಧಾರಣೆಗಾಗಿ ಅವರು ಅನೇಕ ಸಲಹೆಗಳನ್ನೂ ನೀಡಿದರು. ಪ್ರತಿಯೊಬ್ಬನೂ

ವಿದ್ಯಾವಂತನಾಗಬೇಕು. ವಿದ್ಯಾಭ್ಯಾಸ ವ್ಯಕ್ತಿಯ ಭಾವಕ್ಕೆ ನಷ್ಟಮಾಡದೆ, ಅವನಲ್ಲಿರುವ ವಿಶಿಷ್ಟ ಗುಣವನ್ನು ಅಳಿಸದೆ ಅರಳಿಸಬೇಕು. ವ್ಯಕ್ತಿಯು ಊಟಕ್ಕೆ ಬಟ್ಟೆಗೆ ಸಾಕಷ್ಟು ಅನುಕೂಲ ವಿದ್ಯಾಭ್ಯಾಸದಿಂದ ಸಿಕ್ಷವಂತರಾದರೆ ದೇಶದ ಆರ್ಥಿಕ ಸಂಪತ್ತು ಹೆಚ್ಚಿ ಪುನರುದ್ಧಾರ ಸಾಧ್ಯ ಎಂದು ಅವರು ವಿದ್ಯಾಭ್ಯಾಸಕ್ಕೆ ಹೆಚ್ಚಿನ ಮಹತ್ವ ನೀಡಿದರು. ತಮ್ಮ ಶಿಷ್ಯರ ಬೆಳವಣಿಗೆಗೆ ಅವರು ಬೇಕಾದಷ್ಟು ಸ್ವಾತಂತ್ರ್ಯವನ್ನು ಕೊಟ್ಟರಲ್ಲದೆ ದೇವರನ್ನು ಪ್ರಾರ್ಥಿಸಿ ದುಃಖಗಳಿಂದ ಪಾರಾಗಿ ಎಂದು ಬೋಧಿಸಿದರು. ರಾಮಕೃಷ್ಣ ಗುರುವಿನ ಉಪದೇಶವೆಂಬ ಕಡೆಗೋಲಿನಿಂದ ಅವರು ತಮ್ಮ ಮನಸ್ಸನ್ನು ಕಡೆದು ಅದರಲ್ಲಿ ಬೆಣ್ಣೆಯಂತೆ ಹುದುಗಿರುವ ಆತ್ಮಜ್ಞಾನವನ್ನು ಪಡೆದುಕೊಂಡರು.

ಸ್ವಾಮಿ ವಿವೇಕಾನಂದರು ಸ್ತ್ರೀಯರಿಗೆ ಪವಿತ್ರ ಸ್ಥಾನಮಾನ ನೀಡಿದರು. ತಾಯಿಯ ಆದರ್ಶದಲ್ಲಿ ಸ್ತ್ರೀ ತ್ಯಾಗಮೂರ್ತಿ, ಗೃಹದೇವತೆ, ಆದಿಶಕ್ತಿಯ ಆವಿರ್ಭಾವ. ಸ್ತ್ರೀಯನ್ನು ಗೌರವಿಸದ, ಪೂಜಿಸದ ಪಾಪಿ ಕೀರ್ತಿ ಸಂಪಾದಿಸಲು, ಮುಕ್ತಿ ಹೊಂದಲು ಸಾಧ್ಯವಿಲ್ಲ. ತಾಯ್ತನವೇ ಶ್ರೇಷ್ಠಕರ- ಆಕೆಯ ಇಚ್ಛೆಯೇ ದೈವೇಚ್ಛೆ, ಆಕೆಯ ವಾಣಿಯೇ ದೇವವಾಣಿ. ಭೂಮಿಯ ಮೇಲೆ ತಾಯಿಯಲ್ಲದೆ ಬೇರೆ ದೇವರಿಲ್ಲ. ಆಕೆಯೇ ಪ್ರತ್ಯಕ್ಷ ದೇವರು. ಪ್ರಪಂಚದಲ್ಲೆಲ್ಲಾ ಮಾತೃಸ್ಥಾನ ಅತ್ಯಂತ ಉನ್ನತವಾದ ಸ್ಥಾನ, ಆದಕ್ಕಿಂತ ಮಿಗಿಲಾದದ್ದು ಭಗವತ್ಪ್ರೇಮವೊಂದೇ. ಹೆಂಡತಿಗಿಂತ ತಾಯಿ ಹೆಚ್ಚು, ಯಾಕೆಂದರೆ ತಾಯಿಯ ಪ್ರೀತಿಯಲ್ಲಿ ಯಾವ ಪ್ರತಿಫಲಾಪೇಕ್ಷೆಯೂ ಇಲ್ಲ, ತಾಯಿಯೇ ಸೃಷ್ಟಿಯ ಆದಿ, ಅಂತ್ಯ. ಆಕೆಯ ಪ್ರೀತಿ ಎಂದೆಂದಿಗೂ ನಾಶವಾಗುವುದಿಲ್ಲ. ಆಕೆಯ ಶಕ್ತಿ ಎಲ್ಲ ಕಡೆಯಲ್ಲೂ ವ್ಯಕ್ತವಾಗುವುದು. ತಾಯಿಯನ್ನು ಸುಖವಾಗಿಟ್ಟುಕೊಳ್ಳುವುದು ಮಕ್ಕಳ ಕರ್ತವ್ಯ ಎಂದು ಸ್ವಾಮೀಜಿ ಸ್ಪಷ್ಟಪಡಿಸಿದರು.

ಇಂಡಿಯಾ ದೇಶದ ಪತನಕ್ಕೆ ಮಹಿಳಾ ಜನಾಂಗದ ಬಗ್ಗೆ ನಾವು ತೋರಿಸುತ್ತಿರುವ ಅಸಡ್ಡೆಯೇ ಕಾರಣ. ಯಾಕೆಂದರೆ ಒಂದು ಜನಾಂಗ ಎಷ್ಟರ ಮಟ್ಟಿಗೆ ಮುಂದುವರಿದಿವೆ ಎನ್ನುವುದನ್ನು ತಿಳಿಯಬೇಕಾದರೆ ಅವರು ಸ್ತ್ರೀಯರನ್ನು ಯಾವ ದೃಷ್ಟಿಯಿಂದ ನೋಡುವರು ಎನ್ನುವುದೇ ಒರೆಗಲ್ಲು ಎಂದು ವಿವೇಕಾನಂದರು ಸ್ಪಷ್ಟಪಡಿಸಿದರು. ನಮ್ಮ ದೇಶದ ಸ್ತ್ರೀಯರನ್ನು ನಾವು

ಅಲಕ್ಷ್ಯಮಾಡಿದ್ದೇವೆ. ಸ್ವಾತಂತ್ರ್ಯವಿಲ್ಲದೆ, ವಿದ್ಯಾಭ್ಯಾಸವಿಲ್ಲದೆ ಅವರು ಅನೇಕ ದಾರುಣವಾದ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲಾರದೆ ತೊಳಲುತ್ತಿದ್ದಾರೆ. ಅದು ನಮ್ಮ ದೌರ್ಬಲ್ಯವೇ ಆಗಿದೆ. ಸ್ತ್ರೀಗೆ ಸರಿಯಾದ ವಿದ್ಯಾಭ್ಯಾಸ ಸಿಕ್ಕಿದರೆ ಅವಳು ಆದರ್ಶನಾರಿಯಾಗುವುದರಲ್ಲಿ ಸಂದೇಹವಿಲ್ಲ. ಆದ್ದರಿಂದ ಸ್ತ್ರೀಗೆ ವಿದ್ಯಾಭ್ಯಾಸ ಕೊಡಬೇಕು, ಪುರುಷನೊಂದಿಗೆ ಸಮಾನ ಹಕ್ಕು ನೀಡಬೇಕು, ಪೂಜ್ಯದೃಷ್ಟಿಯಿಂದ ನೋಡಬೇಕು, ಆಕೆಯ ಆತ್ಮಜ್ಞಾನ ಮತ್ತು ಅವರ ಬೆಳವಣಿಗೆಗೆ ಎಲ್ಲ ಅವಕಾಶಗಳನ್ನೂ ಒದಗಿಸಬೇಕು. ಹಿಂದೂಸಮಾಜದಲ್ಲಿ ಸ್ತ್ರೀಗೆ ಪವಿತ್ರಸ್ಥಾನ ಮೀಸಲಾಗಿದೆ ಎಂದು ಹೇಳಿದ ವಿವೇಕಾನಂದರು ಈ ಆದರ್ಶದ ಅತಿರೇಕವಾದ ಸಹಗಮನ ಪದ್ಧತಿಯನ್ನು ಕಟುವಾಗಿ ಖಂಡಿಸಿದರು.

ಶಕ್ತಿಸ್ವರೂಪಿಯಾದ ಸ್ತ್ರೀ ತೃಪ್ತಳಾಗಿ ಅನುಗ್ರಹಿಸಿದರೆ ಮನುಷ್ಯ ಮುಕ್ತಿ ಹೊಂದುತ್ತಾನೆ. ಹೆಂಗಸರನ್ನು ಮೇಲೇಳದಂತೆ ತುಳಿದು, ಮಕ್ಕಳನ್ನು ನಾವು ಜಾತಿಬಂಧನದಿಂದ ನುಚ್ಚುನೂರು ಮಾಡಿದ್ದೇವೆ. ದೇವರ ಸಮಾನಳಾದ ತಾಯಿಯನ್ನು ಮನೆಯಲ್ಲೇ ಕೂಳೆ ಹಾಕಿ ಮಕ್ಕಳನ್ನು ಹೆರುವ ಯಂತ್ರವನ್ನಾಗಿ ಮಾಡಿದ್ದೇವೆ. ಸ್ತ್ರೀತ್ವದ ಪೂರ್ಣ ಆದರ್ಶವೇ ಪೂರ್ಣ ಸ್ವಾತಂತ್ರ್ಯ ಎಂದು ಅವರು ಸ್ತ್ರೀಯರ ಬಗ್ಗೆ ಅದರಲ್ಲೂ ಭಾರತೀಯ ಸ್ತ್ರೀ ಬಗ್ಗೆ ಅನುಕಂಪ ತೋರಿಸಿದರು. ವಿದ್ಯಾರ್ಥಿನಿಯರಿಗೆ ತಪಸ್ಸು, ತ್ಯಾಗ, ಇಂದ್ರಿಯನಿಗ್ರಹವೇ ಆದರ್ಶವಾಗಿರಬೇಕು. ಜೀವಾವಧಿ ಅವರು ಸೇವಾಧರ್ಮವನ್ನು ಪಾಲಿಸಬೇಕು. ಪ್ರತಿಯೊಬ್ಬ ಹೆಂಗಸೂ ಸೀತೆಯಂತೆ ಪರಿಶುದ್ಧಳಾಗಿ, ತ್ಯಾಗಿಯಾಗಿ, ಕಷ್ಟಸಹಿಷ್ಣುತೆಯಿಂದಿರಬೇಕು ಎಂದು ಅವರು ಸ್ತ್ರೀ ಆದರ್ಶದ ಬಗ್ಗೆ ಉಪದೇಶಿಸಿದರು. ಪುರುಷ ಹೆಂಡತಿಯನ್ನಲ್ಲದೆ ಪರಸ್ತ್ರೀ ಆಲೋಚನೆ ಮಾಡಬಾರದು. ಆಕೆಯನ್ನು ಮನಸ್ಸಿನಿಂದ ಮುಟ್ಟಿದರೂ ಅವನಿಗೆ ನರಕವೇ ಗತಿ. ಗೃಹಸ್ಥ ಸ್ತ್ರೀಯರ ಮುಂದೆ ಅನುಚಿತವಾದ ಮಾತುಗಳನ್ನೂ ಆಡಬಾರದು. ಅವಳ ಪ್ರೇಮವನ್ನು ಸಂಪಾದಿಸಿ ಗೃಹಸ್ಥಧರ್ಮದಲ್ಲಿ ಸಿದ್ಧಿ ಹೊಂದಬೇಕೆಂದು ಸ್ವಾಮೀಜಿ ಗೃಹಸ್ಥನಿಗೂ ಮೇಲ್ಪಂಕ್ತಿ ಹಾಕಿಕೊಟ್ಟರು. ಅಮೇರಿಕಾ ದೇಶದ ಮಹಿಳೆಯರ ಪರಿಶುದ್ಧತೆ, ಸ್ವಾತಂತ್ರ್ಯ, ಆತ್ಮವಿಶ್ವಾಸ, ಮೃದುಹೃದಯಕ್ಕೆ ಅವರು ಮಾರುಹೋದರು. ತಾವು ಸಂಪಾದಿಸಿದ ಹಣದ ಸ್ವಲ್ಪ ಭಾಗವನ್ನು ಅವರು ವರಾಹ ನಗರದಲ್ಲಿ ಹಿಂದೂ ವಿಧವೆಯರಿಗೆ ತೆರೆಯಲಿದ್ದ

ಸಂಸ್ಥೆಯೊಂದಕ್ಕೆ ಕಳುಹಿಸಿದರು.

ಬಡತನ, ಪೌರೋಹಿತ್ಯ ದಬ್ಬಾಳಿಕೆಗೆ ಬಲಿಯಾಗಿದ್ದ ಭಾರತೀಯರಿಗಾಗಿ ವಿವೇಕಾನಂದರು ಮರುಗಿದರು. ಅವರು ವಿದೇಶಗಳಲ್ಲಿ ವೇದಾಂತ ಪ್ರಚಾರ ಕಾರ್ಯವನ್ನು ಪ್ರಾರಂಭಿಸಿದರು. ಮಾನವರೆಲ್ಲ ಸಮಾನರು, ಒಂದೇ ತಾಯಿಯ ಮಕ್ಕಳು ಎಂದು ಪ್ರತಿಯೊಬ್ಬನೂ ಭಾವಿಸಿ, ನಿಃಸ್ವಾರ್ಥಿಯಾಗಿ, ಪ್ರಾಮಾಣಿಕ ನಾಗಿ ಎಲ್ಲರನ್ನು ಪ್ರೀತಿಸುತ್ತಾ, ಮೃತ್ಯುವಿಗೂ ಅಂಜದೆ ಎಲ್ಲರ ಸೇವೆಗೆ ಬದ್ಧ ಕಂಕಣನಾಗಿ ನಿಲ್ಲಬೇಕು. ಅಧಿಕಾರ, ಅಸೂಯಾಭಾವನೆಯನ್ನು ತ್ಯಜಿಸಿ, ಸೋಮಾರಿತನವನ್ನು ದೂರವಿಟ್ಟು ಇಹಪರ ಭೋಗಗಳನ್ನೆಲ್ಲ ಬಿಟ್ಟು, ಆಳು ವುದಕ್ಕೆ ಪ್ರಯತ್ನಿಸದೆ, ನಮ್ರ ಸೇವಕನಂತೆ ಪ್ರತಿಯೊಬ್ಬನೂ ಬಾಳಬೇಕು. ಕಡಲಿನಷ್ಟು ಆಳ, ಆಕಾಶದಷ್ಟು ವಿಶಾಲವಾದ ಹೃದಯವನ್ನು ಹೊಂದಿ, ನಮ್ಮಲ್ಲಿರುವ ಮಹಾಶಕ್ತಿಯನ್ನು ಸರ್ವಸ್ವವನ್ನು ಧಾರೆಯೆರೆದು ಅಜ್ಞಾನ ಹಾಗೂ ದಾರಿದ್ರ್ಯದ ಸುಳಿಯಲ್ಲಿ ಮುಳುಗಿಹೋಗುತ್ತಿರುವವರನ್ನು ಉದ್ಧಾರ ಮಾಡಬೇಕು ಕರ್ಮಫಲವನ್ನು ತ್ಯಜಿಸಿ, ಶುದ್ಧವಾದ ಹೃದಯದಿಂದ, ಸ್ವಪ್ರಯತ್ನ, ಸತತ ಸಾಧನೆಗಳಿಂದ ಮಾನವ ಆಧ್ಯಾತ್ಮಿಕ ಜೀವನದಲ್ಲಿ ಸತ್ಯವೆಂಬ ಗುರಿ ಮುಟ್ಟಲು ಸಾಧ್ಯ. ಸಾಕ್ಷಾತ್ಕಾರವಾದ ಮೇಲೆ ಮಾನವನಿಗೆ ದುಃಖವಿಲ್ಲ, ಅಸೂಯೆಯಿಲ್ಲ, ಸಾವು ನೋವುಗಳಿಲ್ಲ. ಅವನು ನಿತ್ಯತೃಪ್ತ, ಸದಾಸುಖಿ. ಪ್ರತಿಯೊಬ್ಬನೂ ತನ್ನ ಸಾಮರ್ಥ್ಯಕ್ಕೆ ತಕ್ಕಂತೆ ಆದರ್ಶವನ್ನಿಟ್ಟು ಕೊಂಡು ಅದರ ಸಿದ್ಧಿಗಾಗಿ ಪ್ರಯತ್ನಪಡಬೇಕೆಂದು ಸ್ವಾಮೀಜಿ ಜಗತ್ತಿಗೇ ಸಂದೇಶ ನೀಡಿದರು.

ಲೋಕೋದ್ಧಾರಕ್ಕೆಂದು ವಿವೇಕಾನಂದರು ಸ್ಥಾಪಿಸಿದ 'ಶ್ರೀ ರಾಮಕೃಷ್ಣ ಸೇವಾಸಂಘ' ಈಗ ಪ್ರಪಂಚದಲ್ಲೆಲ್ಲಾ ವ್ಯಾಪಿಸಿ ಉದಾತ್ತ ಕಾರ್ಯದಲ್ಲಿ ತೊಡಗಿ ಐಹಿಕ ಮತ್ತು ಪಾರಮಾರ್ಥಿಕ ಎರಡು ಕ್ಷೇತ್ರಗಳಲ್ಲೂ ಗಣನೀಯ ವಾದ ಕಾರ್ಯಸಾಧನೆ ಮಾಡಿದೆ, ಮಾಡುತ್ತಿದೆ. ಪರಂಪರೆಯಲ್ಲಿ ನಂಬಿಕೆ ಯಿಟ್ಟು ಅದರಲ್ಲಿರುವ ಪವಿತ್ರ ಹಾಗೂ ಪ್ರಮುಖ ಅಂಶಗಳನ್ನೆಲ್ಲ ಸ್ವಾಮೀಜಿ ಹೀರಿಕೊಂಡು ದೇಶಕ್ಕೆ ಉಜ್ವಲವಾದ ಭವಿಷ್ಯ ತೋರಿಸಿದರು. ಈ ಮಹಾಪುರು ಷರ ದಿವ್ಯವಾಣಿ, ಸಂದೇಶ ಮಾನವನ ಬುದ್ಧಿಗೆ ಪುಷ್ಟಿಕೊಡುತ್ತದೆ, ಹೃದಯಕ್ಕೆ ತೃಪ್ತಿ ನೀಡುತ್ತದೆ. ಜನತೆಯ ವ್ಯಕ್ತಿತ್ವವನ್ನು ವಿಕಾಸಗೊಳಿಸಿ ಉದ್ಧರಿಸುವ

ಔದಾರ್ಯ ಅವರ ಸಂದೇಶದಲ್ಲಿದೆ. ಅವರ ಜೀವನ ಮತ್ತು ಸಂದೇಶ ಜನರ ಜೀವನದ ಅಂಧಕಾರವನ್ನು ಹೋಗಲಾಡಿಸುವುದು, ಜೀವತ್ತ್ವನಿಗೆ ನೂತನ ಸ್ಫೂರ್ತಿ ಕೊಡುವುದು. ನಮ್ಮ ಹಿಂದೂಧರ್ಮ ಸಂಸ್ಕೃತಿಯ ಪ್ರತಿರೂಪವಾದ ಸ್ವಾಮೀಜಿಯ ಜೀವನದಲ್ಲಿ ಪವಾಡ ಉತ್ಪ್ರೇಕ್ಷೆಯಿಲ್ಲದಿದ್ದರೂ ರಸಭರಿತವಾಗಿ ರೋಮಾಂಚನಕಾರಿಯಾಗಿದೆ. ಕೋಟ್ಯಾಂತರ ಜನರ ಹೃದಯದಲ್ಲಿ ನೆಲ ಸಿರುವ ವಿವೇಕಾನಂದರ ಸಂದೇಶ ಜನತೆಯ ಮೇಲೆ ಬೀರಿದ ಪ್ರಭಾವವನ್ನು ಕುರಿತು ಗಾಂಧಿ ಮತ್ತು ಶ್ರೀ ಅರವಿಂದರು 'ಅಂತರ ರಾಷ್ಟ್ರೀಯ ಭಾವನೆ ವಿಶ್ವಮೈತ್ರಿಯನ್ನು ಹುಟ್ಟಿಸುತ್ತದೆ' ಎಂದು ಮುಕ್ತಕಂಠದಿಂದ ಹೊಗಳಿದರು.

ಗುರು ಶ್ರೀ ರಾಮಕೃಷ್ಣಪರಮಹಂಸರ ಸಂಪೂರ್ಣ ಅನುಗ್ರಹ, ಆಶೀರ್ವಾದ ವನ್ನು ಹೊಂದಿದ್ದ ವಿವೇಕಾನಂದರು ಭಾರತವರ್ಷದ ಪುರಾತನ ಸಂಸ್ಕೃ ತಿಯ ಹಿರಿಮೆ, ಮಹಿಮೆ, ಲಾವಣ್ಯಗಳನ್ನು ಬೆಳೆಸಿದರು. ವಿಚಾರ ದೃಷ್ಟಿಗೆ, ಜೀವನದ ಅನೇಕ ಸಮಸ್ಯೆಗಳ ಪರಿಹಾರಕ್ಕೆ ಅವರ ಬದುಕು ಮತ್ತು ಸಾಧನೆ ಸ್ಫೂರ್ತಿದಾಯಕ, ಹಾಗೂ ಚೇತೋಹಾರಿ. ಸ್ವಾಮೀಜಿ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಪ್ರಗತಿಶೀಲ ಕ್ರಾಂತಿಯನ್ನುಂಟುಮಾಡಿದ ದೇಶಭಕ್ತರು ಮತ್ತು ಧರ್ಮಪ್ರಚಾರಕರು. ಅವರ ಲೇಖನ, ಭಾಷಣ, ಮಾತುಗಳ ಪ್ರಭಾವಕ್ಕೆ ಸಿಕ್ಕಿದ ಸಂಸಾರಿಯೂ ತ್ಯಾಗದ, ಯೋಗದ ವೈಭವವನ್ನು ಕಾಣಲು ಸಾಧ್ಯ. ರಾಮಕೃಷ್ಣರ ಜೀವನವೇ ಉಪನಿಷತ್ತು. ಸ್ವಾಮೀಜಿಯವರ ಬದುಕೇ ಭಾಷ್ಯ. ಇವರಿಬ್ಬರ ಜೀವನ ವೇದವನ್ನು ಓದುವ ಸಾಮರ್ಥ್ಯ ಪಡೆದುಕೊಂಡರೆ ಸಮಸ್ತಶಾಸ್ತ್ರದ ರಹಸ್ಯಗಳನ್ನೆಲ್ಲ ಅರ್ಥಮಾಡಿಕೊಂಡಂತೆಯೇ ಆಗುತ್ತದೆ.

ವಿವೇಕಾನಂದರು ಶ್ರದ್ಧೆಯಿಂದ, ಸತತ ಸಾಧನೆಯಿಂದ, ತಪಸ್ಸಿನಿಂದ, ಮಾನವಪ್ರೇಮದಿಂದ, ಭಗವಂತನ ಹಂಬಲದಿಂದ, ಆತನ ದರ್ಶನದಿಂದ ತಮಗಾದ ಆನಂದವನ್ನು, ಆತ್ಮಾನುಭವವನ್ನು ನಿಃಸ್ವಾರ್ಥತೆಯಿಂದ ಇತರ ರಿಗೆ ಹಂಚಿ ಮಹಾಪುರುಷರೆನಿಸಿಕೊಂಡರು. ಸ್ವಾಮೀಜಿ ವೇದಾಂತ ಧರ್ಮದ ರಹಸ್ಯವನ್ನು ಪಾಶ್ಚಾತ್ಯ ಪ್ರಪಂಚಕ್ಕೆ ಬೋಧಿಸಿ, ಅವರ ಅನುಕಂಪೆ, ಗೌರವ, ಮೆಚ್ಚುಗೆಗಳನ್ನು ಸೆಳೆದುಕೊಂಡರು. ಆಲಸ್ಯದಿಂದ ಮಲಗಿದ್ದ ಭಾರತೀಯರನ್ನು ಅವರು ತಮ್ಮ ದಿವ್ಯ ಸಂದೇಶದಿಂದ ಎಚ್ಚರಗೊಳಿಸಿ, ಹಲವಾರು ಜಾತಿ, ಮತ, ಆಚಾರ, ವಿಚಾರಗಳಿಂದ ತುಂಬಿಕೊಂಡಿದ್ದ ಭಾರತವನ್ನು ಒಂದು

ರಾಷ್ಟ್ರವನ್ನಾಗಿ ಬೆಸೆಯಲು ಶ್ರಮಪಟ್ಟರು. ಆಧ್ಯಾತ್ಮಿಕ ಭವ್ಯ ಆದರ್ಶವನ್ನು ಜಗತ್ತಿನ ಮುಂದಿಟ್ಟ ವಿವೇಕಾನಂದರು ಇಡೀ ವಿಶ್ವವನ್ನೇ ತಮ್ಮ ಘನವ್ಯಕ್ತಿತ್ವ ದಿಂದ ವಶಪಡಿಸಿಕೊಂಡರು.

ಈ ಮಹಾಪುರುಷರ ಜೀವನ ಮತ್ತು ಸಂದೇಶವನ್ನು ನಮ್ಮ ಯುವ ಜನಾಂಗ ಆದರ್ಶವನ್ನಾಗಿ ಮಾಡಿಕೊಂಡು ಧನ್ಯರಾಗಬೇಕು. ಉದಾತ್ತ ನಮ್ಮ ಸ್ವಯಂ ದೃಷ್ಟಿಯನ್ನು ಪ್ರಜ್ವಲಿಸುವ ಶಕ್ತಿಯುಳ್ಳ ವಿವೇಕಾನಂದರ ಅಸಂಖ್ಯಾತ ಉಪನ್ಯಾಸಗಳಿಂದ ಹಿಂದೂಧರ್ಮದ ವೈಶಾಲ್ಯ ಮತ್ತು ವೇದಾಂತ ತತ್ತ್ವದ ಗಂಭೀರತೆಯ ಪರಿಚಯವಾಗುವುದು. ಅವರು ಅಮೂಲ್ಯವಾದ ಧರ್ಮಧನ ವನ್ನು ರಕ್ಷಿಸುವುದರಿಂದಲೇ ಜನಾಂಗದ ಏಳಿಗೆ ಸಾಧ್ಯ ಎಂದರು. ನಮ್ಮ ರಾಷ್ಟ್ರದ ಜೀವಾಳ ಧರ್ಮದಲ್ಲಿದೆ. ಎಲ್ಲರೂ ಒಂದು ಎಂಬ ಅದ್ವೈತ ಸಿದ್ಧಾಂತ ವನ್ನು ತಿಳಿದುಕೊಳ್ಳುವುದರಿಂದ ಖಂಡಿತವಾಗಿ ಪ್ರಚಂಡ ಇಚ್ಛಾಶಕ್ತಿಯನ್ನು ಸೃಷ್ಟಿಸಬಹುದು. ಹೃದಯ ತೆರೆದು, ಆತ್ಮನಲ್ಲಿರುವ ಪವಿತ್ರತೆಯನ್ನು ಜಾಗೃತ ಗೊಳಿಸಿ ಒಂದು ಮಹಾ ಆದರ್ಶಕ್ಕಾಗಿ ಬಾಳಿ, ದುಡಿದು ಮಡಿಯಿರಿ. ಪ್ರತಿ ಯೊಬ್ಬ ಸ್ತ್ರೀಪುರುಷರನ್ನೂ ದೇವರಂತೆ ನೋಡಿ ಜ್ಞಾನಪ್ರಸಾರ ಮಾಡಿ. ಅಮರವಾದ ಜೀವಾತ್ಮನಲ್ಲಿ ಶ್ರದ್ಧೆ ಹೊಂದಿ. ಉಪನಿಷತ್, ಶಾಸ್ತ್ರ, ಪುರಾಣ ಗಳಲ್ಲಿರುವ ಅದ್ಭುತ ಸತ್ಯಗಳನ್ನು ಪ್ರಚಾರ ಮಾಡಿರೆಂದು ಅವರು ಉಪದೇಶಿಸಿ ದರು.

ಭರತಖಂಡವನ್ನು ಯೋಗ್ಯ ಆಧ್ಯಾತ್ಮಿಕ ಶಿಖರಕ್ಕೆ ಸಾಗಿಸುವ ಶಕ್ತಿ ಇಂದಿನ ಯುವಜನಾಂಗಕ್ಕಿದೆ. ಶ್ರದ್ಧೆ, ಉತ್ಸಾಹಗಳಿಂದ ಯುವಜನಾಂಗ ಸನಾತನ ತತ್ತ್ವಗಳನ್ನು ಜಗತ್ತಿಗೆಲ್ಲಾ ಪ್ರಚಾರಮಾಡಬೇಕು. ಅಂಜದೆ, ಗುರಿ ಮುಟ್ಟುವವರೆಗೆ ಕಾರ್ಯ ಸಾಧಿಸಬೇಕು. ಪಾಶ್ಚಾತ್ಯರ ಊಟ, ಉಡುಗೆ, ನಡತೆಯ ಅಂಧಾನುಕರಣೆಯಿಂದ ಏಳಿಗೆ ಸಾಧ್ಯವಿಲ್ಲ ಎಂದು ವಿವೇಕಾನಂದರು ಇಂದಿನ ಯುವಜನಾಂಗಕ್ಕೆ ಕರೆಯಿತ್ತರು. ಸ್ವಾಮಿ ವಿವೇಕಾನಂದರ ಸಂದೇಶ ಎಲ್ಲರೆದೆಗಳಲ್ಲಿ ಕೆಚ್ಚು ನೆಡುತ್ತದೆ, ವ್ಯಕ್ತಿತ್ವದ ಸಮಸ್ತವನ್ನೂ ವಿಕಾಸಗೊಳಿಸು ತ್ತದೆ. ಅವರ ಮಹೋನ್ನತ ಸಂದೇಶವನ್ನು ಅನುಷ್ಠಾನಕ್ಕೆ ತರುವ ಶಕ್ತಿ ಭಗವಂತನು ನಮಗೆಲ್ಲ ಕರುಣಿಸಲಿ.

# ರವೀಂದ್ರನಾಥ ಠಾಕೂರ್

## ೧೮೬೧—೧೯೪೧

ಈ ಭಾರತದೇಶದ ಮಹಾಪುರುಷರ ಜೀವನ ಮತ್ತು ಕಾರ್ಯಕ್ಷೇತ್ರಗಳನ್ನು ತಿಳಿದುಕೊಳ್ಳುವವರಿಗೆಲ್ಲ ಕವಿಶ್ರೇಷ್ಠರಲ್ಲಿ ರವೀಂದ್ರರೂ ಒಬ್ಬರು ಎನ್ನುವುದು ಸರ್ವವಿದಿತ. ಭರತ ವರ್ಷದ ಕಾರಣಪುರುಷರಾದ ರವೀಂದ್ರರು ನಮ್ಮ ದೇಶದ ಆದರ್ಶಗಳ ಬಾವುಟವನ್ನು ಎತ್ತಿಹಿಡಿದು, ಭಾರತೀಯರ ಆಸೆ, ಆಕಾಂಕ್ಷೆ, ಸಂಸ್ಕೃತಿಯ ಹಿರಿಮೆಯನ್ನು ಪ್ರಪಂಚಕ್ಕೆಲ್ಲಾ ಪರಿಚಯ ಮಾಡಿಕೊಟ್ಟರು, ಜನತೆಗೆ ಪ್ರಾಜ್ಞರು ಮತ್ತು ಮಾರ್ಗದರ್ಶಕರಾದ ರವೀಂದ್ರರು ಸಾಹಿತ್ಯ ಸೇವೆಗೆ ತಮ್ಮ ಜೀವಿತವನ್ನೇ ಮೀಸಲಾಗಿಟ್ಟರು.

ಕ್ರಿ. ಶ. ೧೮೬೧ ನೇ ಮೇ ೭ನೇ ದಿನ ರವೀಂದ್ರನಾಥ್ ಠಾಕೂರರು ಕಲ್ಕತ್ತೆಯ ದ್ವಾರಕಾನಾಥಠಾಕೂರ್ ಬೀದಿಯ ಆರನೇ ನಂಬರಿನ ಮನೆಯಲ್ಲಿ ಜನಿಸಿದರು. ತಂದೆ ದೇವೇಂದ್ರನಾಥ ಠಾಕೂರ್ ಮತ್ತು ತಾಯಿ ಶಾರದಾದೇವಿಯವರ ಹದಿನಾಲ್ಕನೆಯ ಹಾಗೂ ಕಡೆಯ ಮಗುವಾಗಿ ರವೀಂದ್ರರು ಜನ್ಮ ತಾಳಿದರು. ಬಾಲ್ಯದಲ್ಲಿ ಒಬ್ಬ ಸೇವಕನೇ ಅವರ ವಿಶಿಷ್ಟ ಯೋಗಕ್ಷೇಮವನ್ನು ಮಮತೆಯಿಂದ ನೋಡಿಕೊಳ್ಳುತ್ತಿದ್ದರೂ ಅವರಿಗೆ ಸ್ವಾತಂತ್ರ್ಯವಿರಲಿಲ್ಲ, ಮನೆಬಿಟ್ಟು ಹೊರಗೆ ಮನಸ್ಸಿಗೆ ಬಂದಂತೆ ಸುತ್ತಾಡುವ ಅವಕಾಶವಿರಲಿಲ್ಲ. ಬಾಲ್ಯದಲ್ಲಿ ಅವರು ಬಾಹ್ಯ ಪ್ರಪಂಚದ ಅನುಭವದಿಂದ ದೂರವಾಗಿದ್ದರು. ಒಂಟಿಯಾಗಿ ಮನೆಯಲ್ಲಿ ಆಟವಾಡಿಕೊಳ್ಳುತ್ತಿದ್ದ ರವೀಂದ್ರರು ಸೌಂದರ್ಯೋಪಾಸಕರಾಗಿದ್ದರು. ಮನೆಯ ಸುತ್ತಲಿದ್ದ ಸುಂದರವಾದ ತೋಟ, ಹೂಗಿಡಗಳು, ನೀರು, ಎಲೆ, ಆಕಾಶ ಎಲ್ಲವೂ ಅವರ ಮನಸ್ಸನ್ನು ಆಕರ್ಷಿಸುತ್ತಿದ್ದವು. ಮಹದಾನಂದ ಹಾಗೂ ಪರಿಪೂರ್ಣ ತೃಪ್ತಿ ನೀಡುತ್ತಿದ್ದ ಪ್ರಕೃತಿ ಸೌಂದರ್ಯವನ್ನು ನೋಡುತ್ತಿದ್ದಂತೆ ಮೈ ಮರೆಯುತ್ತಿದ್ದ ರವೀಂದ್ರರು ಸ್ವಭಾವತಃ ಏಕಾಂತ ಪ್ರಿಯರು, ಪ್ರಖರವಾದ ವಿಚಾರಶಕ್ತಿಯುಳ್ಳವರು ಮತ್ತು ಅವರ ಗ್ರಹಣಶಕ್ತಿ ತುಂಬಾ ಸೂಕ್ಷ್ಮವಾಗಿತ್ತು.

ನಾರ್ಮಲ್ ಶಾಲೆಗೆ ಸೇರಿಕೊಂಡ ಠಾಕೂರರಿಗೆ ಶಾಲೆಯ ವಾತಾವರಣ

ಸತ್ವಹೀನ, ಕೃತಕ ಮತ್ತು ನೀರಸವಾಗಿ ಕಂಡಿತು. ಶಾಲೆ ಅವರ ಪಾಲಿಗೆ ಮನೆಗಿಂತ ಕಠಿಣವಾದ ಮತ್ತೊಂದು ಸೆರೆಮನೆಯಾಗಿ ಪರಿಣಮಿಸಿತು. ಅವರು ತುಂಬಾ ಧಾರಾಳಿ ಹಾಗೂ ನಿರ್ಗತಿಕರನ್ನು ಕಂಡರೆ ಅವರಿಗೆ ವಿಶೇಷ ಪ್ರೀತಿ, ಅನುಕಂಪ. ಭಿಕ್ಷೆ ಬೇಡಲು ಮನೆಯ ಬಾಗಿಲಿಗೆ ಬಂದವರಿಗೆ ಅವರು ಕೈಗೆ ಸಿಕ್ಕಿದ ಸಾಮಾನುಗಳನ್ನು ಕೊಟ್ಟುಬಿಡುತ್ತಿದ್ದರು. ಅನೇಕ ಸಲ ಬೆಲೆ ಬಾಳುವ ವಸ್ತುಗಳನ್ನು ದಾನಮಾಡಿ ಮನೆಯವರಿಂದ ಬೈಯಿಸಿಕೊಳ್ಳು ತ್ತಿದ್ದರು. ಮೃದು ಮಧುರ ಹೃದಯದ ಹೆಂಗರುಳು ಸ್ವಭಾವದ ಠಾಕೂರರು ಸೇವಕರು ಹೇಳುತ್ತಿದ್ದ ರಾಮಾಯಣ ಕಥೆಯಲ್ಲಿ ದುಃಖದ ಸನ್ನಿವೇಶ ಬಂದಾಗಲೆಲ್ಲಾ ಮನಸ್ಸಿನ ಭಾವೋದ್ವೇಗಗಳಿಗೆ ಕಡಿವಾಣ ಹಾಕಲಾರದೆ ಬಿಕ್ಕಿ ಬಿಕ್ಕಿ ಅಳುತ್ತಿದ್ದರು. 'ಬೇಂಗಾಲ್ ಅಕಾಡೆಮಿ' ಎಂಬ ಆಂಗ್ಲೋ ಇಂಡಿ ಯನ್ ವಿದ್ಯಾಸಂಸ್ಥೆಗೆ ರವೀಂದ್ರರು ಸೇರಿಕೊಂಡರು. ಉಪನಯನವಾದ ಮೇಲೆ ಅವರಿಗೆ ಗಾಯತ್ರಿ ಜಪಮಾಡುವುದರಲ್ಲಿ ತುಂಬಾ ಆಸಕ್ತಿ ಹುಟ್ಟಿತು.

ವಿಖ್ಯಾತ ಶ್ರೀಮಂತ ಮನೆತನದಲ್ಲಿ ಹುಟ್ಟಿದ ದೇವೇಂದ್ರನಾಥ ಠಾಕೂರರು ತುಂಬಾ ನಿಷ್ಠೆಯುಳ್ಳ ಮನುಷ್ಯ. ತಂದೆ ಮಾಡಿದ ಸಾಲದಿಂದ ಬಿಡುಗಡೆ ಹೊಂದಲು ಆಸ್ತಿಯನ್ನು ಮಾರಲೂ ಅವರು ಹಿಂತೆಗೆಯಲಿಲ್ಲ. ಆತನ ಸರಳಜೀವನ, ನಿರ್ಮಲ ಭಕ್ತಿಯನ್ನು ಕಂಡು ಊರಿನವರೆಲ್ಲಾ ಅವರನ್ನು 'ಮಹರ್ಷಿ' ಗಳೆಂದೇ ಗೌರವದಿಂದ ಕರೆಯುತ್ತಿದ್ದರು. ಅವರು ದೇಶಯಾತ್ರೆ ಮಾಡಿ ಹಿಮಾಲಯಕ್ಕೆ ಹೋಗಿ ತಪಸ್ಸು ಮಾಡಿ ಭಗವಂತನ ಸಾನ್ನಿಧ್ಯ ಪಡೆದುಕೊಂಡುಬಂದು ಬ್ರಹ್ಮಸಮಾಜವನ್ನು ಸ್ಥಾಪನೆ ಮಾಡಿದರು. ಹಿಂದೂ ಧರ್ಮದ ರಕ್ಷಣೆಗಾಗಿ ದೇವೇಂದ್ರನಾಥರು ಒಂದು ಸಭೆಯನ್ನು ಏರ್ಪ ಡಿಸಿದ್ದರು. ತಂದೆ ವಿಚಾರಧಾರೆ ಮತ್ತು ನೈತಿಕ ಜೀವನಗಳತ್ತ ಮಗನ ಗಮನ ವನ್ನು ಹರಿಸಿದರು. ಉಪದೇಶದಿಂದ, ಪ್ರೇಮ ಪ್ರೋತ್ಸಾಹಗಳಿಂದ ಅವರು ಮಾರ್ಗದರ್ಶನ ನೀಡಿ ರವೀಂದ್ರರ ಬುದ್ಧಿ ಮತ್ತು ಹೃದಯವಿಕಾಸಕ್ಕೆ ಸಮಾನ ಅವಕಾಶ ಕಲ್ಪಿಸಿಕೊಟ್ಟರು. ಸಾಹಿತ್ಯ ಪ್ರೇಮಿಗಳಾದ ದೇವೇಂದ್ರ ನಾಥರು 'ತತ್ತ್ವ ಬೋಧಿನಿ' ಎನ್ನುವ ಪತ್ರಿಕೆಯನ್ನು ನಡೆಸುತ್ತಿದ್ದರು. ಲೇಖ ಕರಿಗೆ ಆತ ಕೈಲಾದ ನೆರವು ನೀಡಿ ಪ್ರೋತ್ಸಾಹಿಸುತ್ತಿದ್ದರು. ಅವರ ಮನೆಯಲ್ಲಿ ಆಗಾಗ್ಯೆ ಸಾಹಿತಿಗಳ, ರಸಿಕರ, ಸಾಹಿತ್ಯ ಪ್ರೇಮಿಗಳ, ವಿದ್ವಾಂಸರ ಗೋಷ್ಠಿ

ಸೇರುತ್ತಿತ್ತು. ಅವರೆಲ್ಲರೂ ಸಾಹಿತ್ಯ, ಸಂಸ್ಕೃತಿ, ವೇದಾಂತ, ಧರ್ಮ ಮುಂತಾದ ವಿಷಯಗಳ ಬಗ್ಗೆ ಚರ್ಚಿಸುತ್ತಿದ್ದರು.

ರವೀಂದ್ರನಾಥರಿಗೆ ತಂದೆಯವರಲ್ಲಿ ವಿಶೇಷವಾದ ಭಕ್ತಿ ಗೌರವಗಳಿದ್ದವು. ದೇವೇಂದ್ರನಾಥರು ಮಗನಿಗೆ ಇಂಗ್ಲೀಷು ಮತ್ತು ಸಂಸ್ಕೃತಪಾಠ ಹೇಳುತ್ತಿದ್ದರು, ಓದುವಂತೆ ಪ್ರೋತ್ಸಾಹಿಸುತ್ತಿದ್ದರು. ಖಗೋಳ ಶಾಸ್ತ್ರದ ಲಘು ಪರಿಚಯವನ್ನು ಅವರು ಬಾಲ್ಯದಲ್ಲೇ ಮಗನಿಗೆ ಮಾಡಿಕೊಟ್ಟರು. ಸಸ್ಯ ಶಾಸ್ತ್ರದಲ್ಲೂ ಮಗನಿಗೆ ಅಭಿರುಚಿ ಬರುವಂತೆ ಅತ ಶ್ರಮಿಸಿದರು. ಪ್ರತಿಭಾಶಾಲಿಗಳೂ, ಕಲಾವಂತರೂ, ಕ್ರಿಯಾಶಾಲಿಗಳೂ ಆದ ಅಣ್ಣಂದಿರಿಂದ ರವೀಂದ್ರರು ವಿಪುಲ ಜ್ಞಾನ ಸಂಪಾದಿಸಿದರು, ಅನುಭವ ಪಡೆದುಕೊಂಡರು. ಒಟ್ಟಿನಲ್ಲಿ ಅವರ ಜೀವನ ವಿಸ್ತಾರಕ್ಕೆ, ಜ್ಞಾನ ವಿಕಾಸಕ್ಕೆ, ಕಾವ್ಯಸ್ಫೂರ್ತಿಗೆ ತಂದೆ ಅಣ್ಣಂದಿರು ಅಸಾಧಾರಣ ಪ್ರಭಾವ ಬೀರಿದರು. 'ಕಲಾಪ್ರಜ್ಞೆಯುಳ್ಳ ಸೋದರರು ಉಡುಗೆಯಲ್ಲಿ, ನಡತೆಯಲ್ಲಿ, ಹಾಡಿನಲ್ಲಿ, ಕಲೆಯಲ್ಲಿ, ನಾಟಕದಲ್ಲಿ, ಜೀವನದ ಎಲ್ಲಾ ಕ್ಷೇತ್ರಗಳಲ್ಲಿ ಪೂರ್ಣವಾದ ಹಾಗೂ ಸಾಮರಸ್ಯದ ರಾಷ್ಟ್ರೀಯ ಸಂಸ್ಕೃತಿಯನ್ನು ನಿರ್ಮಿಸುತ್ತಿದ್ದರು' ಎಂದು ರವೀಂದ್ರರೆ ಒಡಹುಟ್ಟಿದವರ ಬಗ್ಗೆ ಹೇಳಿದ್ದುಂಟು. ಆ ಕಾಲದಲ್ಲಿ ಜನರೆಲ್ಲ ಮಾತೃಭಾಷೆಯನ್ನು ಕಡೆಗಣಿಸಿ ಇಂಗ್ಲೀಷು ಭಾಷೆಯ ವ್ಯಾಮೋಹಕ್ಕೆ ಒಳಗಾಗಿದ್ದರೂ ಹಿರಿಯಣ್ಣನ ಪ್ರೋತ್ಸಾಹದಿಂದ ಠಾಕೂರರು ಮಾತೃಭಾಷೆಯಾದ ಬಂಗಾಳೀ ಭಾಷೆಯಲ್ಲಿ ಒಳ್ಳೆಯ ಪಾಂಡಿತ್ಯ ಸಂಪಾದಿಸಿದರು.

ಠಾಕೂರರ ಮನೆ ಸಾಹಿತ್ಯ ಹಾಗೂ ಕಲೆಗೆ ಕೇಂದ್ರವಾಗಿತ್ತು. ಐಶ್ವರ್ಯ, ವಿದ್ಯೆ, ಸಂಸ್ಕೃತಿ ಸೌಂದರ್ಯಗಳಿಂದ ತುಂಬಿ ತುಳುಕುತ್ತಿದ್ದ ಮನೆಯ ವಾತಾವರಣ ಬಾಲ್ಯದಿಂದ ರವೀಂದ್ರರ ಮೇಲೆ ಅಗಾಧ ಪರಿಣಾಮವನ್ನುಂಟು ಮಾಡಿತು. ನೆಂಟರಿಷ್ಟರಲ್ಲಿ ಗದ್ಯಲೇಖಕರು, ಕವಿಗಳು, ಸಂಸ್ಕೃತ ವಿದ್ವಾಂಸರು, ಕಲಾವಂತರು ಇದ್ದುದರಿಂದ ಅವರ ಸಂಪರ್ಕದಿಂದ ರವೀಂದ್ರರ ವ್ಯಕ್ತಿತ್ವ ನಾನಾಮುಖವಾಗಿ ಬೆಳೆಯಲು ಸಾಧ್ಯವಾಯಿತು. ಅಣ್ಣನ ಗೆಳೆಯ ಅಕ್ಷಯ ಚೌಧುರಿ ಎಂಬ ಸುಪ್ರಸಿದ್ಧ ಬಂಗಾಳಿ ಲೇಖಕ ರವೀಂದ್ರರ ಕಾವ್ಯರಚನೆಗೆ ಪ್ರೋತ್ಸಾಹ ಕೊಟ್ಟನು. ಮನೆಗೆ ಬರುತ್ತಿದ್ದ ಭಿನ್ನಾಭಿರುಚಿಯುಳ್ಳ ಜನರ ಸಂಪರ್ಕ ಹಾಗೂ ಸಮಕಾಲೀನ ಜೀವನದಲ್ಲಿ ಪ್ರಮುಖರಾದ ಹಲವರ ಪರಿ

ಚಯವೂ ಅವರಿಗಾಯಿತು.

ಠಾಕೂರ್ ಮನೆತನದವರು ಧಾರ್ಮಿಕ ಜಾಗೃತಿ, ಸಂಸ್ಕೃತಿಯ ಏಳಿಗೆ, ರಾಷ್ಟ್ರೀಯ ಚಳುವಳಿಗಳಲ್ಲೂ ಪ್ರಮುಖ ಪಾತ್ರವಹಿಸಿ ದೇಶಸೇವೆ ಮಾಡಿದರು. ಪ್ರತಿಭಾವಂತರ ಸಂಪರ್ಕದಿಂದ ಪಾಂಡಿತ್ಯ ಹಾಗೂ ಅನುಭವಗಳಿಂದ ತುಂಬಿ ಕೊಂಡಿದ್ದ ಠಾಕೂರರ ಮನಸ್ಸು ವಿಸ್ತಾರಗೊಂಡಿತು. ವಿಕಾಸಹೊಂದಿತು. ರವೀಂದ್ರರು ಸಂಸ್ಕೃತ ಭಾಷೆಯನ್ನು ಕಲಿತುಕೊಂಡು ಕಾಳಿದಾಸನ ಕೃತಿಗಳನ್ನೆಲ್ಲ ಓದಿ ಮೆಚ್ಚಿಕೊಂಡರು. ಉಪನಿಷತ್ತುಗಳ ತತ್ತ್ವಗಳನ್ನೂ ಓದಿ ಅರ್ಥ ಮಾಡಿಕೊಂಡರು. ಅವರು ಅರ್ಥವಾಗದಿದ್ದರೂ 'ಗೀತ ಗೋವಿಂದ' ವನ್ನು ಶ್ರದ್ಧೆಯಿಂದ ಅಧ್ಯಯನ ಮಾಡಿದರು.

ರವೀಂದ್ರರು ಪ್ರಾರಂಭದಲ್ಲಿ ಬರೆದ ಪದ್ಯಗಳು 'ಜ್ಞಾನಾಂಕುರ' ಎಂಬ ಪತ್ರಿಕೆಯಲ್ಲಿ ಪ್ರಕಟವಾದವು. ಎಳೆತನದಲ್ಲಿ ಅವರು ಪ್ರಕೃತಿಸೌಂದರ್ಯ, ತಾರುಣ್ಯದ ಪ್ರೇಮ, ಸಂಗೀತ, ಸಮಾಜದ ಪರಿಸ್ಥಿತಿಯನ್ನು ಕುರಿತು ಪದ್ಯಗಳನ್ನು ರಚಿಸಿದರು. ಹದಿನೇಳನೆಯ ವಯಸ್ಸಿನಲ್ಲಿ ಬ್ಯಾರಿಸ್ಟರಾಗಲು ಇಂಗ್ಲೆಂಡಿಗೆ ಹೋದರು. ಹದಿನೆಂಟು ವರ್ಷಗಳಾಗುವುದರಲ್ಲಿ ಅವರು ಸುಮಾರು ಏಳುಸಾವಿರ ಸಾಲುಗಳಷ್ಟು ಪದ್ಯಸಾಹಿತ್ಯವನ್ನೂ, ಅನೇಕ ಗದ್ಯಪ್ರಬಂಧಗಳನ್ನೂ ಬರೆದರು. ಹದಿನೇಳನೆಯ ವಯಸ್ಸಿನಲ್ಲಿ ರವೀಂದ್ರರು 'ವನಫುಲ್' ಎಂಬ ಕಾವ್ಯವನ್ನೂ, 'ರುದ್ರಚಂದ್ರ' 'ಭಗ್ನ ಹೃದಯ' ಎಂಬ ನಾಟಕಗಳನ್ನು 'ಸಂಧ್ಯಾ ಸಂಗೀತ' ಎಂಬ ಕವಿತೆಯನ್ನು 'ಪ್ರಭಾತ ಸಂಗೀತ' ಎಂಬ ಪದ್ಯ ಗ್ರಂಥವನ್ನು ಮತ್ತು ವಿವಿಧ ಭಾಷಾಕೃತಿಗಳನ್ನು ಕುರಿತಾದ ವಿಮರ್ಶೆಯನ್ನು ಬರೆದರು.

ಇಂಗ್ಲೆಂಡಿನಿಂದ ಕಲ್ಕತ್ತಾಗೆ ಹಿಂತಿರುಗಿದ ಮೇಲೆ ರವೀಂದ್ರರಿಗೆ ಇಪ್ಪತ್ತೆರಡನೆಯ ವಯಸ್ಸಿನಲ್ಲಿ ಮದುವೆಯಾಯಿತು. ಅವರ ಪತ್ನಿಯ ನಿಜವಾದ ಹೆಸರು ಮೃಣಾಲಿನೀದೇವಿ. ರವೀಂದ್ರರು ಹೆಂಡತಿಯನ್ನು 'ಛೋಟೋ ಬೌ' ಅಂದರೆ 'ಚಿಕ್ಕ ವಧು' ಎಂದು ಕರೆಯುತ್ತಿದ್ದರು. ಜಹಗೀರು ಗ್ರಾಮದ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವಂತೆ ತಂದೆ ರವೀಂದ್ರರನ್ನು ನೇಮಿಸಿದರು. ಆ ಸಂದರ್ಭದಲ್ಲಿ ಅವರು 'ಚಿತ್ರಾಂಗದಾ' ನಾಟಕವನ್ನು ಬರೆದರು. ಹೆತ್ತ ತಾಯಿ ಮತ್ತು ತಾಯಿಯಂತೆ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದ

ಅತ್ತಿಗೆಯರ ಸಾವು ರವೀಂದ್ರರನ್ನು ಶೋಕದ ಕೊಳದಲ್ಲಿ ಮುಳುಗಿಸಿತು. ಗಿಲಲ್ಲಾರಲ್ಲಿ 'ಬಾಲಕ' ಎಂಬ ಸಚಿತ್ರ ಮಕ್ಕಳ ಮಾಸಪತ್ರಿಕೆಯನ್ನು ಮಕ್ಕಳಿಗಾಗಿ ಅವರು ಪ್ರಾರಂಭಿಸಿದರು. ಅವರಿಗೆ ಇಪ್ಪತ್ತೈದನೆಯ ವಯಸ್ಸಿನಲ್ಲಿ ಮೊದಲನೆಯ ಮಗು 'ಬೇಲಾ' ಜನಿಸಿತು. ನಂತರ ಇಬ್ಬರು ಗಂಡು ಮಕ್ಕಳು ಇಬ್ಬರು ಹೆಣ್ಣು ಮಕ್ಕಳೂ ಹುಟ್ಟಿದರು. ಒಳ್ಳೆಯ ಈಜುಗಾರರಾದ ರವೀಂದ್ರರು ಮಕ್ಕಳಿಗೂ ಈಜುವುದನ್ನು ಕಲಿಸಿದರು. ಮಕ್ಕಳಿಗೆ ಪಾಠ ಹೇಳಲು ಅಧ್ಯಾಪಕರುಗಳನ್ನು ಗೊತ್ತು ಮಾಡಿದ್ದರೂ ಬಂಗಾಳಿ ಭಾಷೆಯನ್ನು ತಾವೇ ಹೇಳಿಕೊಡುತ್ತಿದ್ದರು. ಜಮೀನ್ದಾರಿಗಳ ಕೇಂದ್ರವಾದ ಶೆಲೈಡದಲ್ಲಿ ಅವರು ನಡೆಸಿದ ಜೀವನ ಆನಂದಮಯವಾಗಿತ್ತು. ಬಂಗಾಳದ ಗ್ರಾಮಜೀವನದ ಸಂಪರ್ಕ, ಪದ್ಮಾನದಿಯಿಂದ ಸ್ಫೂರ್ತಿಗೊಂಡ ರವೀಂದ್ರರ ಸಾಹಿತ್ಯ ನಿರ್ಮಾಣ ಭರದಿಂದ ಸಾಗಿತು. ದಿನವೆಲ್ಲಾ ಕುಳಿತು, ಊಟ ತಿಂಡಿಯನ್ನೂ ತೆಗೆದುಕೊಳ್ಳದೆ ಬರೆಯುತ್ತಿದ್ದರು. ಶೆಲೈಡಾದಲ್ಲಿದ್ದಾಗ ಅವರು ಅನೇಕ ಕಥೆ, ಕಾದಂಬರಿ, ನಾಟಕ, ಹಾಡು, ಕವಿತೆ, ಭಾಷಣಗಳನ್ನು ಬರೆದರು. ಜಮೀನ್ದಾರಿಯ ಕೆಲಸಗಳನ್ನೂ ಶ್ರದ್ಧೆಯಿಂದ ಮಾಡುತ್ತಿದ್ದರು. 'ಭಾರತಿ' ಪತ್ರಿಕೆಗೆ ಅವರು ಸಂಪಾದಕರಾದರು. ತಮ್ಮ ನಲವತ್ತನೆ ವಯಸ್ಸಿನಲ್ಲಿ 'ವಂಗ ದರ್ಶನ' ಎಂಬ ಪತ್ರಿಕೆಯನ್ನು ಠಾಕೂರರು ಪುನರಾರಂಭಗೊಳಿಸಿದರು.

ಲಂಡನ್ ಕಾಲೇಜಿನಲ್ಲಿ ರವೀಂದ್ರರಿಗೆ ಐರೋಪ್ಯ ಸಾಹಿತ್ಯದ ಪರಿಚಯವಾಯಿತು. ಪಾಶ್ಚಾತ್ಯ ಸಂಗೀತವೂ ಅದರನ್ನು ಸಾಕಷ್ಟು ಆಕರ್ಷಿಸಿ ಸ್ವಲ್ಪ ಮಟ್ಟಿಗೆ ಅವರು ಸಂಗೀತವನ್ನೂ ಅಭ್ಯಾಸ ಮಾಡಿದರು. ಜಮೀನ್ದಾರಿ ಕೆಲಸ, ವ್ಯವಹಾರ ಉದ್ಯಮಗಳಲ್ಲಿ ಮಾತ್ರವಲ್ಲದೆ ರಾಷ್ಟ್ರಜೀವನದ ನಿತ್ಯದ ಚಟುವಟಿಕೆಗಳಲ್ಲೂ ಅವರು ಆಸಕ್ತಿಯಿಂದ ಭಾಗವಹಿಸುತ್ತಿದ್ದರು.

ರವೀಂದ್ರನಾಥ ಠಾಕೂರರ ಕಾರ್ಯಕ್ಷೇತ್ರ ಕೇವಲ ಸಾಹಿತ್ಯ ಲೋಕಕ್ಕೇ ಮೀಸಲಾಗಿರಲಿಲ್ಲ. 'ಶಾಂತಿನಿಕೇತನ', 'ಶ್ರೀ ನಿಕೇತನ' ಮತ್ತು 'ವಿಶ್ವ ಭಾರತಿ' ಸಂಸ್ಥೆಗಳನ್ನು ಅವರು ಸ್ಥಾಪಿಸಿದರು. ಈ ಮೂರು ಸಂಸ್ಥೆಗಳು ಆಧ್ಯಾತ್ಮಿಕ ಸ್ವಾತಂತ್ರ್ಯ, ಸಾಮಾಜಿಕ ಪುರೋಭಿವೃದ್ಧಿ ಮತ್ತು ವಿಶ್ವ ಮಾನವತ್ವವನ್ನು ಪ್ರತಿನಿಧಿಸುತ್ತವೆ. ತಂದೆ ಮಹರ್ಷಿ ದೇವೇಂದ್ರನಾಥರು

ತಪಸ್ಸು ಮಾಡಿ ಸಿದ್ಧಿ ಪಡೆದ ಶಾಂತಿನಿಕೇತನದಲ್ಲಿ ರವೀಂದ್ರರು ೧೯೦೨ರಲ್ಲಿ ಪಾಠಶಾಲೆಯನ್ನು ಪ್ರಾರಂಭಿಸಿದರು. ನಾಲ್ಕು ವಿದ್ಯಾರ್ಥಿಗಳೊಂದಿಗೆ ಶಾಂತಿನಿಕೇತನದಲ್ಲಿ ರವೀಂದ್ರರು ಪ್ರಾರಂಭಿಸಿದ ಆದರ್ಶ ಶಾಲೆಯಲ್ಲಿ ಪಾಠಗಳು ಕಟ್ಟಡದ ಹೊರಗಡೆ ಪ್ರಕೃತಿಯ ಸಂಪರ್ಕದಲ್ಲಿ ನಡೆಯುವಂತೆ ವ್ಯವಸ್ಥೆಯಾಯಿತು. ಈ ವಿದ್ಯಾಪೀಠದಲ್ಲಿ ಕಲಿಯುವವರಲ್ಲಿ ಸ್ವತಂತ್ರ ವಿಚಾರಶೀಲ, ಮನೋದಾರ್ಢ್ಯ, ಸ್ವಾವಲಂಬನಪರತೆಗಳು ನೆಲೆಗೊಳ್ಳಲು ಎಲ್ಲ ಅವಕಾಶಗಳನ್ನೂ ಅವರು ಒದಗಿಸಿದರು. ಕ್ಷಯದಿಂದ ಮಗಳು ಸತ್ತಳು, ಕಿರಿಯ ಮಗನೂ ಕಾಲರಾದಿಂದ ಕಾಲವಾದ. ಅವರಿಗೆ ಸಾವಿನ ನಿಜ ಸ್ವರೂಪದ ದರ್ಶನವಾಯಿತು. ಕಾಯಿಲೆ ಬಿದ್ದ ಹೆಂಡತಿಗೆ ಪ್ರೀತಿಯಿಂದ ರವೀಂದ್ರರೇ ಶುಶ್ರೂಷೆ ಮಾಡಿ ಮಕ್ಕಳ ಮನಸ್ಸನ್ನು ಚೆನ್ನಾಗಿ ಅರ್ಥಮಾಡಿಕೊಂಡು ಸಹಾನುಭೂತಿಯಿಂದ ಅವರನ್ನು ನೋಡಿಕೊಂಡರು. ಅದೇ ವರ್ಷ ಅವರ ಹೆಂಡತಿ ತೀರಿಕೊಂಡರು. ಶಾಂತಿನಿಕೇತನ ರವೀಂದ್ರರ ಶಾಂತಿದಾಯಕ ನಿವಾಸವಾಯಿತು.

ಶಾಂತಿನಿಕೇತನದ ಚಟುವಟಿಕೆಗಳಿಗೆ ರವೀಂದ್ರರು ತಮ್ಮ ಬದುಕನ್ನೆಲ್ಲಾ ಮುಡಿಪಾಗಿಟ್ಟರು. ಅವರ ಜೀವಿತದಲ್ಲಿಯೇ ಈ ಶಾಲೆ ಬಹಳ ದೊಡ್ಡದಾಗಿ ಬೆಳೆಯಿತು. ಅವರು ಚಿತ್ರಕಲೆ, ಸಂಗೀತ, ನೃತ್ಯ ಮುಂತಾದ ವಿಭಾಗಗಳನ್ನೂ ಪ್ರಾರಂಭಿಸಿದರು. "ಹಳತು ಹೊಸತರ ಸಂಗಮವಾಗಬೇಕು, ಪೂರ್ವ ಪಶ್ಚಿಮ ಸಂಸ್ಕೃತಿಗಳ ಮಿಲನವಾಗಬೇಕು, ವಿಶ್ವ ಕಲ್ಯಾಣವಾಗಬೇಕು" ಇದು ರವೀಂದ್ರರು ಶಾಂತಿ ನಿಕೇತನದಲ್ಲಿ ಕಂಡ ಕನಸು. ಈ ಕನಸನ್ನು ನನಸು ಮಾಡಲು ಅವರು ವಿರಾಮವಿಲ್ಲದೆ ದುಡಿದರು. ಶಾಂತಿನಿಕೇತನದಲ್ಲಿ ವಿದ್ಯಾರ್ಥಿಗಳೇ ನಡೆಸುವ ನ್ಯಾಯಾಲಯವಿತ್ತು ಮತ್ತು ಅಲ್ಲಿಯವರಿಗೆಲ್ಲ ಸ್ನೇಹಮಯವಾದ ವಾತಾವರಣವಿತ್ತು. ಉಚಿತ ಊಟ, ವಿದ್ಯಾಭ್ಯಾಸ ವಿದ್ಯಾರ್ಥಿಗಳಿಗೆ ಸಿಕ್ಕುತ್ತಿತ್ತು. ಗುರುಶಿಷ್ಯರ ನಡುವೆ ಭಯ ಹಾಗೂ ಸಂಕೋಚದ ಅಡ್ಡಗೋಡೆಯಿರಲಿಲ್ಲ. ಸರಳವಾದ ಆಶ್ರಮದ ಜೀವನ ನಡೆಸುತ್ತಿದ್ದ ವಿದ್ಯಾರ್ಥಿಗಳ, ವಿದ್ವಾಂಸರ ಗುರಿ ಸತ್ಯಶೋಧನೆಯಾಗಿತ್ತು. ಅಲ್ಲಿಯ ನಿವಾಸಿಗಳು ಬಾಹ್ಯಾಡಂಬರಕ್ಕೆ ಮನಸ್ಸು ಕೊಡದೆ ಪ್ರಕೃತಿಯನ್ನು ಪ್ರೇಮಿಸುತ್ತಾ ಸಕಲ ಜೀವರಾಶಿಗಳನ್ನೂ ಗೌರವಿಸುತ್ತಿದ್ದರು.

ರವೀಂದ್ರರ ಶಾಲೆಯಲ್ಲಿ ಸಾಹಿತ್ಯಕ್ಕೆ ಪ್ರಾಮುಖ್ಯತೆ ನೀಡಲಾಗಿತ್ತು. ಜೀವನದ ಎಲ್ಲಾ ವಿಧವಾದ ಚಟುವಟಿಕೆಗಳಲ್ಲೂ ಉತ್ಸಾಹದಿಂದ ಸಂತೋಷ ದಿಂದ ಭಾಗವಹಿಸುವಂತೆ ಠಾಕೂರರು ವಿದ್ಯಾರ್ಥಿಗಳನ್ನು ಹುರಿದುಂಬಿಸು ತ್ತಿದ್ದರು. ಅವರು ಶಾಂತಿನಿಕೇತನದ ಶಾಲೆಯನ್ನು ಕುರಿತು 'ಮಕ್ಕಳಿಗಾಗಿ ನಿಜ ವಾದ ಮನೆಯೊಂದನ್ನು ನಿರ್ಮಿಸಿದೆ' ಎನ್ನುತ್ತಿದ್ದರು. ಪಾಶ್ಚಾತ್ಯ ಪದ್ಧತಿ ಗಳನ್ನು, ಭಾರತದ ಸಂಪ್ರದಾಯ ಸಂಸ್ಕೃತಿಗಳನ್ನು ಒಂದುಗೂಡಿಸಿದ ಠಾಕೂ ರರು ಶಾಂತಿನಿಕೇತನದಲ್ಲಿ ನೂತನ ರೀತಿಯ ಶಿಕ್ಷಣ ಪದ್ಧತಿಯನ್ನು ಜಾರಿಗೆ ತಂದರು. ಶಾಂತಿನಿಕೇತನದ ಆರ್ಥಿಕ ಮುಗ್ಗಟ್ಟನ್ನು ಸುಧಾರಿಸಲು ಅವರು ಹೆಂಡತಿಯ ಒಡವೆಗಳನ್ನೆಲ್ಲಾ ಮಾರಿದರು. ಹೆಂಡತಿ, ಮಕ್ಕಳನ್ನು ಕಳೆದು ಕೊಂಡು ಅನೇಕ ಕಷ್ಟಗಳಿಗೆ ಸಿಕ್ಕಿ ಬಿದ್ದರೂ ಧೈರ್ಯದಿಂದ ಧೃತಿಗೆಡದೆ ಶ್ರಮಿ ಸಿದರು. ವಿದ್ಯಾರ್ಥಿಗಳನ್ನು ರವೀಂದ್ರರು ಸತ್ಯವನ್ನು ಪ್ರೀತಿಸುವಂತೆ, ಸೌಂದರ್ಯವನ್ನು ಆರಾಧಿಸುವಂತೆ ಸಂಗೀತ, ಸಾಹಿತ್ಯ, ಭಾರತೀಯ ನಾಗರೀಕತೆ, ಸಂಪ್ರದಾಯಗಳ ಬಗ್ಗೆ ತಿಳಿದುಕೊಳ್ಳುವಂತೆ ಪ್ರೋತ್ಸಾಹಿಸಿ ದರು. ಶಾಂತಿನಿಕೇತನ ವೃಕ್ಷವು ತನ್ನ ಬೇರುಗಳ ಮೂಲಕ ಪಾಶ್ಚಾತ್ಯ ದೇಶದ ಸಾರವನ್ನು ಹೀರಡ ಯೋಗ್ಯ ಫಲಪುಷ್ಪಗಳಿಂದ ಶೋಭಿಸಲಾರದು ಎಂದವರು ಧೃಢವಾಗಿ ನಂಬಿದ್ದರು.

ಶಾಂತಿನಿಕೇತನ ಸ್ಥಾಪಿಸಿದ ಇಪ್ಪತ್ತು ವರ್ಷಗಳ ನಂತರ ೧೯೨೧ರಲ್ಲಿ ಠಾಕೂರರು "ವಿಶ್ವಭಾರತಿ" ಯನ್ನು ಸ್ಥಾಪಿಸಿದರು. ವಿಶ್ವಭಾರತಿಯನ್ನು ಪ್ರಪಂಚದ ವಿಶ್ವವಿದ್ಯಾನಿಲಯವನ್ನಾಗಿ ಮಾಡಲು, ಇತರ ದೇಶಗಳ ಸಂಸ್ಕೃತಿ, ವಿಜ್ಞಾನವನ್ನು ಭಾರತ ದೇಶದ ಸಂಸ್ಕೃತಿ ವಿಜ್ಞಾನದೊಂದಿಗೆ ರೂಪಿಸಲು ರವೀಂದ್ರರು ಪ್ರಯತ್ನಿಸಿದರು. ಸತ್ಯಪ್ರೇಮಿಗಳಿಗೆ, ವಿಶ್ವಮಾನವರಿಗೆಲ್ಲಾ ಅಲ್ಲಿ ಪ್ರವೇಶ ಸಿಕ್ಕಿತು. ವಿಶ್ವಭಾರತಿಯಲ್ಲಿ ಜಾತಿಭೇದವಿಲ್ಲ. ಅಲ್ಲಿಯ ವಿದ್ಯಾರ್ಥಿ ಗಳಿಗೆ ಈಗಲೂ ಸರ್ವಧರ್ಮ ತತ್ತ್ವಗಳನ್ನು ಬೋಧಿಸಲಾಗುತ್ತಿದೆ. ಕವಿ ಕಂಡ ವಿಶ್ವಭಾರತಿಯ ಕನಸು ಇನ್ನೂ ಸಂಪೂರ್ಣವಾಗಿ ನನಸಾಗಿಲ್ಲ. ಆ ವಿದ್ಯಾ ಪೀಠದಲ್ಲಿ ವಿದ್ಯಾರ್ಥಿಗಳ ವಿಚಾರಶಕ್ತಿಯನ್ನು ಪ್ರಚೋದಿಸುವಂತೆ, ಅವರ ಸಹಜ ಶಕ್ತಿ ಆಸಕ್ತಿ ವಿಕಾಸಹೊಂದುವಂತೆ, ಸೌಂದರ್ಯ ಪ್ರೇಮವನ್ನು ಬೆಳೆಸುವಂತೆ, ಪ್ರಕೃತಿಯೊಂದಿಗೆ ನಿಕಟ ಸಂಪರ್ಕ ಹೊಂದುವಂತೆ ವಾತಾ

ವರಣವನ್ನು ಒದಗಿಸಲಾಗಿದೆ. ಮಕ್ಕಳಿಗೆ ನೇಯ್ಗೆ, ವ್ಯವಸಾಯ, ಆರೋಗ್ಯ ಸಾಧನೆ, ಅಂಗಸಾಧನೆಯ ವಿಷಯಗಳಲ್ಲಿ ಈಗಲೂ ಶಿಕ್ಷಣವನ್ನು ನೀಡಲಾಗುತ್ತಿದೆ. ಇತ್ತೀಚೆಗೆ ಶಿಶುವಿಭಾಗವನ್ನೂ ತೆರೆಯಲಾಗಿದೆ. ವಿದ್ಯಾರ್ಥಿಗಳು, ಗುರುಗಳು ಒಟ್ಟಾಗಿ ಉಂಡು, ಹಾಡಿ, ಕುಣಿದು ಆಟವಾಡಿ ಸ್ವತಂತ್ರವಾಗಿ ನಲಿಯುವ ಅವಕಾಶವಿದೆ. ಗುರುಕುಲವೆನಿಸಿರುವ ಆ ಶಾಲೆಯಲ್ಲಿ ವ್ಯಾಸಂಗ ಮಾಡಲು ಜನ ವಿವಿಧ ದೇಶಗಳಿಂದ ಬರುತ್ತಾರೆ. ವಿಶ್ವಶಾಂತಿ, ವಿಶ್ವಭಾಂಧವ್ಯಗಳನ್ನು ಸಾಧಿಸುವುದು ವಿಶ್ವಭಾರತಿ ಸಂಸ್ಥೆಯ ಗುರಿ. ಹಳ್ಳಿಯ ಕಸಬುಗಳು, ಗ್ರಾಮಸ್ಥರ ಜೀವನವನ್ನು ಉತ್ತಮಪಡಿಸುವ ಮಾರ್ಗಗಳನ್ನು ವಿದ್ಯಾರ್ಥಿಗಳಿಗೆ ಬೋಧಿಸಲಾಗುತ್ತಿದೆ. ಕವಿ ರವೀಂದ್ರರು ಬರೆದ ನಾಟಕಗಳನ್ನು ವಿದ್ಯಾರ್ಥಿಗಳು ಆಡುತ್ತಾರೆ ಮತ್ತು ಅವರು ಬರೆದ ಗೀತೆಗಳನ್ನು ಹಾಡುತ್ತಾರೆ. ಅಲ್ಲಿ ವಿಭೂತಿ ಪುರುಷರ ವರ್ಧಂತಿಗಳನ್ನು ಆಚರಿಸಲಾಗುತ್ತಿತ್ತು. ಠಾಕೂರರು ತಮ್ಮೆಲ್ಲ ಆಸ್ತಿ, ಆದಾಯವನ್ನೂ ತಮ್ಮ ಪುಸ್ತಕಗಳ ಮೇಲಿನ ಹಕ್ಕುಗಳನ್ನು 'ವಿಶ್ವಭಾರತಿ' ವಿದ್ಯಾಸಂಸ್ಥೆಗೆ ದಾನಮಾಡಿದರು.

ರವೀಂದ್ರನಾಥ ಠಾಕೂರರು ಸುರುಲ್‌ನಲ್ಲಿ 'ಶ್ರೀನಿಕೇತನ' ಎನ್ನುವ ಸಂಸ್ಥೆಯನ್ನು ಗ್ರಾಮೋದ್ಧಾರಕ್ಕಾಗಿ ಸ್ಥಾಪಿಸಿದರು. ಗ್ರಾಮ್ಯಗಳ ಉದ್ಧಾರ ಮತ್ತು ಹಳ್ಳಿಗಳು ಸೌಂದರ್ಯ, ಆರೋಗ್ಯ, ಐಶ್ವರ್ಯಗಳ ತೌರೂರಾಗಬೇಕೆಂಬುದೇ ಆ ಸಂಸ್ಥೆಯ ಧ್ಯೇಯ. ನಮ್ಮ ದೇಶ ಸುಖವಾಗಿರಬೇಕಾದರೆ ಹಳ್ಳಿಗಳ ಪುನರ್ನಿರ್ಮಾಣವಾಗಬೇಕೆಂದು ರವೀಂದ್ರರು ಧೃಢವಾಗಿ ನಂಬಿದ್ದರು. ಜೇನು-ಕೋಳಿ ಸಾಕಣೆ, ದನ-ಕುರಿಗಳ ಪೋಷಣೆ ಮುಂತಾದ ಕೆಲಸಗಳಲ್ಲಿ ಹಳ್ಳಿಯವರಿಗೆ ತರಬೇತು ಕೊಡುವುದೂ ಆ ಸಂಸ್ಥೆಯ ಹಲವಾರು ಉದ್ದೇಶ್ಯಗಳಲ್ಲಿ ಒಂದಾಯಿತು.

೧೯೦೭ರಲ್ಲಿ ಬಂಗಾಳ ಸಾಹಿತ್ಯ ಸಮ್ಮೇಳನದ ಮೊದಲನೆಯ ಅಧಿವೇಶನಕ್ಕೆ ರವೀಂದ್ರರು ಅಧ್ಯಕ್ಷರಾದರು. ೧೯೦೧ ರಿಂದ ೧೯೦೭ರ ನಡುವೆ ಅವರು ಅನೇಕ ಕಾದಂಬರಿಗಳನ್ನು ಬರೆದರು. ೧೯೧೮ ರಲ್ಲಿ ಬಂಗಾಳಿ ಗೃಹ ವಿಶ್ವವಿದ್ಯಾನಿಲಯ ಪುಸ್ತಕ ಭಂಡಾರವನ್ನು ಸ್ಥಾಪಿಸಿ ಸಾಂಸ್ಕೃತಿಕ ಶಿಕ್ಷಣವನ್ನು ಜನರಿಗೆ ಕೊಡುವ ವ್ಯವಸ್ಥೆಯನ್ನು ರವೀಂದ್ರರು ಮಾಡಿದರು. ಅಮೇರಿಕ, ಇಂಗ್ಲೆಂಡು, ಜಪಾನಿನಲ್ಲಿ ಪ್ರವಾಸ ಮಾಡಿ ರಾಷ್ಟ್ರೀಯತೆಯ ಮೇಲೆ ಅವರು

ಅನೇಕ ಉಪನ್ಯಾಸಗಳನ್ನು ಕೊಟ್ಟರು. ವಿದೇಶಿ ವಿಶ್ವವಿದ್ಯಾನಿಲಯಗಳಲ್ಲಿ ಅವರು ಭಾಷಣ ಮಾಡಿ ಅಪಾರ ಮೆಚ್ಚುಗೆ ಸಂಪಾದಿಸಿದರು. ಸಿಂಹಳ, ಆಸ್ಟ್ರಿಯ, ನಾರ್ವೆ, ಡೆನ್ಮಾರ್ಕ್, ಯುಗೋಸ್ಲೋವಿಯ, ರುಮೇನಿಯ, ಗ್ರೀಸ್, ಈಜಿಪ್ಟ್, ಮಲಯ, ಜಾವ, ಸಯಾಮ್ ದೇಶಗಳನ್ನು ಸಂದರ್ಶಿಸಿ ಅಪಾರ ಅನುಭವ ಸಂಪತ್ತನ್ನು ಗಳಿಸಿದರು. ಠಾಕೂರರು ಬಂಗಾಳಿಯಲ್ಲಿ ಬರೆದ 'ಗೀತಾಂಜಲಿ'ಯ ಅನುವಾದ ಇಂಗ್ಲಿಷ್ 'ಗೀತಾಂಜಲಿ'ಗೆ ೧೯೧೩ ರಲ್ಲಿ ಸ್ವೀಡನ್ ದೇಶದ ನೋಬೆಲ್ ಬಹುಮಾನ ಸಿಕ್ಕಿತು. ಆ ಪ್ರಶಸ್ತಿ ಸಿಕ್ಕಿ ಸನ್ಮಾನಿತರಾದ ಮೇಲೆ ರವೀಂದ್ರರು ವಿಶ್ವವಿಖ್ಯಾತರಾದರು. ಪ್ರಪಂಚದ ನಾನಾ ಭಾಗಗಳಲ್ಲಿದ್ದ ಅನೇಕರು ಅವರಿಗೆ ಮಿತ್ರರಾದರು. ಅವರ ಜೀವನ ಪ್ರಪಂಚದ ಸ್ವತ್ತಾಯಿತು. ನೋಬೆಲ್ ಪಾರಿತೋಷಕದ ಹಣವನ್ನೆಲ್ಲ ಅವರು ಶಾಂತಿನಿಕೇತನಕ್ಕಾಗಿ ವೆಚ್ಚಮಾಡಿದರು. 'ವಿಶ್ವಭಾರತಿ'ಗಾಗಿ ಹಣ ಕೂಡಿಡಲು ದೇಶ ವಿದೇಶಗಳಲ್ಲಿ ಸಂಚರಿಸಿದರು.

ಹತ್ತಾರು ಸಲ ಪ್ರಪಂಚವನ್ನೆಲ್ಲ ಸುತ್ತಿ, ಸಾಹಿತ್ಯದ ಎಲ್ಲಾ ಪ್ರಾಕಾರಗಳಲ್ಲೂ ಶ್ರಮಿಸಿ ಹೆಸರು ಗಳಿಸಿದ ರವೀಂದ್ರರಿಗೆ ೧೯೧೫ ರಲ್ಲಿ ಚಕ್ರವರ್ತಿ ಸಾರ್ವಭೌಮರು 'ನೈಟ್‌ಹುಡ್' ಪ್ರಶಸ್ತಿಯನ್ನು ನೀಡಿದರು. 'ಕವಿ ಸಾಮ್ರಾಟ' 'ಭಾರತ ಭಾಸ್ಕರ' ಎಂಬ ಬಿರುದುಗಳು, ಸನ್ಮಾನ ಪ್ರಶಸ್ತಿಗಳು ಅವರಿಗೆ ದೊರೆತವು. ಅನೇಕ ವಿಶ್ವವಿದ್ಯಾನಿಲಯಗಳು ಅವರಿಗೆ ಗೌರವ ಡಾಕ್ಟರೇಟ್ ಪ್ರಶಸ್ತಿಗಳನ್ನು ಕೊಟ್ಟವು. ಅಂತರಾಷ್ಟ್ರೀಯ ವಿಶ್ವವಿದ್ಯಾಲಯವನ್ನು ಸ್ಥಾಪಿಸಿ, ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಹುಮ್ಮಸ್ಸಿನಿಂದ ಭಾಗವಹಿಸಿ ಲೋಕ ವಿಖ್ಯಾತರಾದ ರವೀಂದ್ರರು ೧೯೨೩ರಲ್ಲಿ 'ವಿಶ್ವಭಾರತಿ ತ್ರೈಮಾಸಿಕ' ಪತ್ರಿಕೆಯನ್ನು ಪ್ರಾರಂಭಿಸಿದರು. ೧೯೧೯ರ ನಂತರದ ಅವರ ಜೀವನವು ದೇಶಾಟನೆ ಹಾಗೂ ವಿವಿಧ ಕಾರ್ಯಗಳಿಂದ ತುಂಬಿಕೊಂಡಿತು.

೧೯೩೦ರಲ್ಲಿ ವಿದೇಶಯಾತ್ರೆ ಮಾಡಿದ ಸಂದರ್ಭದಲ್ಲಿ ರವೀಂದ್ರರು 'ಭಾನುಸಿಂಹ' ಎಂಬ ಕಾವ್ಯನಾಮವನ್ನಿಟ್ಟುಕೊಂಡು ಅನೇಕ ಭಾಷಣಗಳನ್ನು ಮಾಡಿ ಕೀರ್ತಿ ಸಂಪಾದಿಸಿ ಪ್ರಚಂಡ ವಾಗ್ಮಿ ಎನ್ನಿಸಿಕೊಂಡರು. ಬ್ರಹ್ಮಸಮಾಜ, ತತ್ತ್ವಶಾಸ್ತ್ರಜ್ಞರ ಮತ್ತು ಸರ್ವಧರ್ಮ ಸಮ್ಮೇಳನಗಳಲ್ಲಿ ಅವರು ಮಾಡಿದ ಭಾಷಣಗಳ ಸಂಗ್ರಹ ಪ್ರಕಟವಾಯಿತು. ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯ

ದವರಿಂದ ಆಹ್ವಾನಿತರಾದ ರವೀಂದ್ರರು ಅನೇಕ ಉಪನ್ಯಾಸಗಳನ್ನು ಕೊಟ್ಟರು. ಅವು 'ಮಾನವಧರ್ಮ' ಎನ್ನುವ ಹೆಸರಿನಲ್ಲಿ ಪ್ರಕಟವಾದವು. ಮಾಸ್ಕೊ ಲೇಖಕರ ಸಂಘ ಅವರನ್ನು ಸತ್ಕರಿಸಿ 'ಪ್ರಪಂಚದ ಜೀವಂತವಾಗಿ ರುವ ಮಹಾಕವಿ ದಾರ್ಶನಿಕರಲ್ಲಿ ಒಬ್ಬರು' ಎಂದು ರವೀಂದ್ರರನ್ನು ಪ್ರಶಂಸಿ ಸಿತು.

ರವೀಂದ್ರನಾಥ ಠಾಕೂರರು ಚಿತ್ರಕಲೆಯಲ್ಲೂ ಸಾಕಷ್ಟು ಯಶಸ್ಸ ಸಂಪಾದಿಸಿದರು. ಸಂಪ್ರದಾಯ ರೀತಿಯಲ್ಲಿ ಯಾರ ಹತ್ತಿರ ಕಲಿಯದಿದ್ದರೂ ಚಿತ್ರಕಲೆಯಲ್ಲಿ ಅವರು ಹೊಸಮಾರ್ಗವನ್ನೇ ಸೃಷ್ಟಿಸಿದರು. ಅವರು ಬರೆದ ಚಿತ್ರಗಳು ದೊಡ್ಡ ದೊಡ್ಡ ನಗರಗಳಲ್ಲಿ ಪ್ರದರ್ಶಿತವಾದವು. ಪ್ಯಾರಿಸ್ಸಿನಲ್ಲಿ ಪ್ರದರ್ಶಿಸಲ್ಪಟ್ಟ ಅವರ ಚಿತ್ರಗಳು ಫ್ರೆಂಚ್ ಕಲಾವಿದರ ಮೆಚ್ಚುಗೆಯನ್ನು ಸಂಪಾದಿಸಿದವು. ರವೀಂದ್ರರ ಎಪ್ಪತ್ತನೆಯ ಹುಟ್ಟುಹಬ್ಬ ಠಾಯ್ನಾಡಿನಲ್ಲಿ ವೈಭವದಿಂದ ನಡೆಯಿತು. ಆ ಸಂದರ್ಭದಲ್ಲಿ 'ಠಾಕೂರ್ ಸ್ವರ್ಣ ಗ್ರಂಥ' ಎಂಬ ಪ್ರಶಸ್ತಿ ಗ್ರಂಥವನ್ನು ಅವರಿಗೆ ಅರ್ಪಿಸಲಾಯಿತು. ಎಪ್ಪತ್ತು ತುಂಬಿ ದೇಹ ಕ್ಷೀಣಿಸುತ್ತಿದ್ದರೂ ಠಾಕೂರರ ಮನಸ್ಸು ನಿತ್ಯಯೌವನವನ್ನು ಹೊಂದಿತ್ತು. ಅನೇಕ ಸಾರ್ವಜನಿಕ ಸಮ್ಮೇಳನಗಳಲ್ಲಿ ಅವರು ಭಾಗವಹಿಸಿ ಶಾಂತಿ, ಜನಾಂಗ, ಪ್ರೇಮ, ಸ್ವಾತಂತ್ರ್ಯ, ಸಾಹಸಗಳನ್ನು ಕುರಿತು ಭಾಷಣ ಮಾಡಿದರು. ಹಲವು ರಾಜಕೀಯ ಮತ್ತು ಸಾಹಿತ್ಯ ಸಂಘಗಳಲ್ಲಿ ರವೀಂದ್ರರು ಶ್ರದ್ಧೆಯಿಟ್ಟು ಕೆಲಸಮಾಡಿ, ಭಾರತ ದೇಶದ ಸಂಸ್ಕೃತಿಯನ್ನು ಪ್ರಪಂಚ ದಲ್ಲೆಲ್ಲಾ ಪ್ರಚಾರ ಮಾಡಿ, ರಾಷ್ಟ್ರ ರಾಷ್ಟ್ರಗಳ ಸೌಹಾರ್ದವನ್ನು ಬೆಳೆಸಿದರು. ಶಾಂತಿನಿಕೇತನದಲ್ಲಿ ಅವರು 'ಚೀನಾಭವನ'ವನ್ನು ಸ್ಥಾಪಿಸಿ ಚೀನಾದೊಡನೆ ಸಾಂಸ್ಕೃತಿಕ ಸಂಪರ್ಕ ಪಡೆಯುವ ಪ್ರಯತ್ನ ನಡೆಸಿದರು. ಬ್ರಿಟಿಷ್ ಸರ್ಕಾರ ಅನುಸರಿಸುತ್ತಿದ್ದ ಧೋರಣೆಯನ್ನು ಕಟುವಾಗಿ ಟೀಕಿಸಿದ ರವೀಂದ್ರರಿಗೆ ಮಹಾತ್ಮ ಗಾಂಧಿಯವರ ಪರಿಚಯವಾಯ್ತು. ಈ ಮಹಾಪುರುಷರಿಬ್ಬರ ಸ್ನೇಹಲತೆ ಬೆಳೆಯಿತು, ಬಲಿಯಿತು. ಗಾಂಧೀಜಿ 'ಮಹಾ ರಕ್ಷಕ ಭಟ' ಎಂಬ ಬಿರುದನ್ನು ರವೀಂದ್ರರಿಗಿತ್ತು ದೇಶಕ್ಷೇಮಕ್ಕೆ ವಿಪತ್ತು ಬಾರದಂತೆ ಈತ ರಕ್ಷಿಸ ಬಲ್ಲ ಎಂದರು. ೧೯೪೦ರಲ್ಲಿ ರವೀಂದ್ರರು ಶಾಂತಿನಿಕೇತನದಲ್ಲಿ ಗಾಂಧೀಜಿ ಮತ್ತು ಕಸ್ತೂರಿಬಾರವರಿಗೆ ಸ್ವಾಗತ ಸಮಾರಂಭವನ್ನು ಏರ್ಪಡಿಸಿದರು.

ಅವರು ತಮ್ಮ ಬದುಕಿನ ಅಂತ್ಯ ದಿನಗಳಲ್ಲಿ ವಿದೇಶ ಯಾತ್ರೆ ಮಾಡದಿದ್ದರೂ ಭಾರತ ದೇಶದಲ್ಲೆಲ್ಲಾ ಸಂಚರಿಸಿದರು. ಸ್ವಾಗತ, ಸನ್ಮಾನ, ಸತ್ಕಾರ, ಭಾಷಣಗಳ ಬಿಡುವಿಲ್ಲದ ಕಾರ್ಯಕ್ರಮಗಳಿಂದ ಬಳಲಿದರೂ ಅವರು ಬರೆಯುವುದನ್ನು ನಿಲ್ಲಿಸಲಿಲ್ಲ. ಅನೇಕ ಕಥೆಗಳು, ಕವಿತೆಗಳು, ವಿಮರ್ಶೆ, ಕಾದಂಬರಿ, ನಾಟಕಗಳನ್ನು ಬರೆದರು. ತಾವು ಬರೆದ ನಾಟಕಗಳಲ್ಲಿ ತಾವೇ ಮುಖ್ಯ ಪಾತ್ರ ವಹಿಸಿ ಅವುಗಳನ್ನು ಸೊಗಸಾಗಿ ನಿರ್ದೇಶಿಸಿದರು. ಅವರು ಬರೆದ ಕೃತಿಗಳು ವಿಶ್ವದ ವಿವಿಧ ಭಾಷೆಗಳಿಗೆ ಭಾಷಾಂತರಗೊಂಡವು. ಅವರಿಗೆ ಎಂಭತ್ತು ವರ್ಷ ತುಂಬಿದಾಗ ಶಾಂತಿನಿಕೇತನದಲ್ಲಿ ಅವರ ಹುಟ್ಟುಹಬ್ಬದ ಸಂಭ್ರಮದ ಸಮಾರಂಭ ನಡೆಯಿತು. ಅನಾರೋಗ್ಯದಿಂದ ಹಾಸಿಗೆ ಹಿಡಿದು ಮಲಗಿದ್ದರೂ ರವೀಂದ್ರರು ಶಾಂತಿನಿಕೇತನ, ವಿಶ್ವಭಾರತಿಯ ಯೋಗಕ್ಷೇಮ ಚಟುವಟಿಕೆಗಳನ್ನು ಕುರಿತು ವಿಚಾರಿಸುತ್ತಿದ್ದರು. ಶಾಂತಿನಿಕೇತನ, ಅಲ್ಲಿಯ ಮಕ್ಕಳು, ಗಿಡಮರಗಳನ್ನೆಲ್ಲ ಅವರು ಆಳವಾಗಿ ಪ್ರೀತಿಸುತ್ತಿದ್ದರು. ಶಸ್ತ್ರ ಚಿಕಿತ್ಸೆ ಮಾಡಿಸಿಕೊಂಡ ರವೀಂದ್ರರು ೧೯೪೧ರ ಆಗಸ್ಟ್ ಏಳರಂದು ತೀರಿ ಕೊಂಡು ಇಡೀ ಪ್ರಪಂಚವನ್ನೆ ಶೋಕದ ಕೊಳದಲ್ಲಿ ಮುಳುಗಿಸಿದರು. ಕವಿ ಯನ್ನು ಕಳೆದುಕೊಂಡ ವಿಶ್ವ 'ಶ್ರೇಷ್ಠ ಲೇಖಕ', 'ಶ್ರೇಷ್ಠ ದೇಶಭಕ್ತ' ಮತ್ತು 'ಮಾನವಕುಲದ ಸೇವಕ' ಎಂದು ಅವರನ್ನು ಕೊಂಡಾಡಿ ಕಂಬನಿಗರೆಯಿತು.

ರಾಷ್ಟ್ರಕವಿ ರವೀಂದ್ರರ ಕೃತಿಗಳು ಎಂದೆಂದಿಗೂ ಬತ್ತಿ ಬಾಡಿಹೋಗದ, ಕುಂದಿ ಕೆಡದ ಸುಮಧುರ ವಾಸನೆಯುಳ್ಳ ಸುಂದರ ಪುಷ್ಪಗಳಂತಿವೆ. ಅವರ ಲೇಖನಧಾರೆ ಅತ್ಯಂತ ಚಿಕ್ಕ ವಯಸ್ಸಿನಿಂದ ಅವರ ಜೀವನಧಾರೆಯ ಜೊತೆ ಯಲ್ಲಿ ಅವಿಚ್ಛಿನ್ನವಾಗಿ ನಡೆದು ಬಂತು. ನೂರಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಬಂಗಾಲಿ ಭಾಷೆಯಲ್ಲಿ ಅವರು ಗ್ರಂಥಗಳನ್ನು ಬರೆದು, ಆ ಭಾಷೆಗೆ ನವಚೇತನ ತುಂಬಿ ಮಾನ್ಯತೆ ದೊರಕಿಸಿಕೊಟ್ಟರು. ಅವರು ಸಾಹಿತ್ಯ ಸ್ವರೂಪ, ಉದ್ದೇಶ್ಯ, ಸಾಮಗ್ರಿ, ರುಚಿ, ಸೌಂದರ್ಯ ಕಲ್ಪನೆ ಮೊದಲಾದ ವಿಷಯ ಗಳನ್ನು ಚರ್ಚಿಸಿ ಪ್ರಬಂಧಗಳನ್ನು ಬರೆದರು. 'ಪಂಚ ಭೂತ' 'ವಿಚಿತ್ರ ಪ್ರಬಂಧ' 'ಸಾಹಿತ್ಯ' 'ಸ್ವದೇಶ' 'ಸಮಾಜ' 'ಧರ್ಮ' 'ಮಾನವಧರ್ಮ' 'ಶಾಂತಿನಿಕೇತನ' 'ವಿಶ್ವ ಪರಿಚಯ' ಮುಂತಾದ ವಿಮರ್ಶಾತ್ಮಕ ಗ್ರಂಥ ಗಳನ್ನೂ ಅವರು ಬರೆದರು. ಅವರ ದೃಷ್ಟಿಯಲ್ಲಿ ಸಾಹಿತ್ಯದ ವಸ್ತು ಮಾನವ

ಹೃದಯ ಮತ್ತು ಮಾನವ ಚರಿತ್ರೆ ಎಂದು ಹೇಳಬಹುದು. ಮಾನವ ಹೃದಯವನ್ನು ಅರ್ಥಮಾಡಿಕೊಳ್ಳಲು ಕವಿ ನಿರಂತರ ಪ್ರಯತ್ನವನ್ನು ಮಾಡುತ್ತಾನೆ. ಸಾಹಿತ್ಯ ಕೇವಲ ಪ್ರಕೃತಿಯ ಪ್ರತಿಬಿಂಬವಲ್ಲ. ಪ್ರಾಕೃತಿಕ ವಸ್ತುವನ್ನು ಮನಸ್ಸು ತೆಗೆದುಕೊಂಡು ಅದನ್ನು ಸಾಹಿತ್ಯಿಕವಾಗಿ ಮಾಡುತ್ತದೆ. ಸಾಹಿತ್ಯ ಯಾರೊಬ್ಬ ವ್ಯಕ್ತಿಯದಲ್ಲ, ರಚಿಸಿದವನದೂ ಅಲ್ಲ, ಅದು ದೈವವಾಣಿ. ಸಾಹಿತ್ಯಲೋಕದ ಪ್ರಗತಿ ,ರಾಜಪದವಿಗೆ ಸಮಾನ ಎನ್ನುತ್ತಿದ್ದ ರವೀಂದ್ರರ ಸೃಷ್ಟಿ ಸಾಹಿತ್ಯ ಅದ್ಭುತವಾದದ್ದು, ಅತ್ಯಾಶ್ಚರ್ಯಕರವಾದದ್ದು. ಸಾಹಿತ್ಯ ಕಲೆಗಳಲ್ಲಿ ಒಂದು. ಸಾಹಿತ್ಯ ಸಾಹಿತಿಯ ಅನುಭವವನ್ನು ಹೇಳಿದರೂ ಅವನು ಇತರರ ಒಪ್ಪಿಗೆಯನ್ನು ಬಯಸುತ್ತಾನೆ. ತನ್ನೊಳಗೆ ಅಡಗಿರುವ ಸತ್ಯವನ್ನು ಸಾಹಿತಿ ಹೊರಗಿನ ಸತ್ಯವನ್ನಾಗಿ ಮಾಡುತ್ತಾನೆ. ಚೆಲುವಿನ ಸ್ವರೂಪ ಕಂಡು, ಅದರ ಸುಧೆಯನ್ನು ಬದುಕಿನಲ್ಲಿ ಉಂಡು, ಸುಖ ಹೊಂದಿ ಕೃತಿಗಳ ಮೂಲಕ ಸಾಹಿತಿ ಓದುಗರ ಮುಂದಿಡುತ್ತಾನೆ ಎಂದು ಧೃಡವಾಗಿ ನಂಬಿದ್ದ ರವೀಂದ್ರರು ವಿಶ್ವಸಾಹಿತಿಯೆಂದು ಪ್ರಸಿದ್ಧರಾದರು.

ಠಾಕೂರರು ಪ್ರಥಮತಃ ಪದ್ಯಕವಿ. ಸುಮಾರು ಮುಕ್ಕಾಲು ಶತಮಾನ ಭಾರತದ ಕಾವ್ಯಾಕಾಶದ ರವಿಯಾಗಿ ಬೆಳಗಿದ ಅವರ ಪ್ರಸಿದ್ಧಿಗೆ ಕಾವ್ಯವೇ ಆಧಾರಸ್ತಂಭ ಎನ್ನಬಹುದು. ಕವಿಶ್ರೇಷ್ಠ ರವೀಂದ್ರರು ತಮ್ಮ ಬದುಕನ್ನೇ ಒಂದು ಗೀತೆಯೆಂದು ಭಾವಿಸಿ ಹಕ್ಕಿಯಂತೆ ಹಾಡಿ, ಹಿಗ್ಗಿನಿಂದ ಬಾಳಿ ಜನತೆಯನ್ನು ಅಮರ ಪ್ರಜೆಗಳನ್ನಾಗಿ ಮಾಡಿದರು. ಮಾತೃಭಾಷಾಪ್ರೇಮಿ ರವೀಂದ್ರರು ಆಡುಮಾತಿನಲ್ಲಿ, ಸುಲಭವಾಗಿ ಎಲ್ಲರೂ ಅರ್ಥಮಾಡಿಕೊಳ್ಳುವಂತಹ ಶೈಲಿಯಲ್ಲಿ ಕಾವ್ಯಗಳನ್ನು ಬರೆದು ಪ್ರಸಿದ್ಧರಾದರು. 'ಸಂಧ್ಯಾ ಸಂಗೀತ,' 'ಪ್ರಭಾತ ಸಂಗೀತ,' 'ಮಾನಸಿ' 'ಅಹಲ್ಯ' 'ಶಿಶು' 'ಭಕ್ತಿಗೀತೆಗಳು' 'ಶೋಕ ಹಾಗೂ ಸ್ಮರಣ ಗೀತೆಗಳು' 'ಕಥಾ' 'ಗೀತಾಂಜಲಿ' 'ಬಲಾಕಾ' ಪೂರಬೀ, ನವಜಾತಕ, ಪುನಶ್ಚ, ಪ್ರಾಂತಿಕ', ಮುಂತಾದ ಕಾವ್ಯಗಳನ್ನು ಅವರು ಬರೆದರು. ಅವರು ರಚಿಸಿದ ಭಾವನಾಮಯವಾದ ಕಾವ್ಯಗಳಲ್ಲಿರುವ ಕಲೆಗಾರಿಕೆ, ನಾದ ಮಾಧುರ್ಯ, ಛಂದೋನೈಪುಣ್ಯಕ್ಕೆ ಸಾಮಾನ್ಯ ಮಾನವನೂ ಮೆಚ್ಚುಗೆಯಿಂದ ತಲೆತೂಗಬೇಕು. ಅನೇಕ ನದಿಗಳ ಸುಂದರ ಸಂಗಮದಂತಿರುವ ವೈವಿಧ್ಯಮಯ ಹಾಗೂ ವಿಸ್ತಾರವಾದ ಅವರ ಕಾವ್ಯ

ವಸ್ತುವಿನಲ್ಲಿ ಪ್ರಕೃತಿಗೆ ಪ್ರಮುಖ ಸ್ಥಾನವಿದೆ. ನಲವತ್ತು ದಾಟಿದ ಮೇಲೆ ಅವರು ರಚಿಸಿದ ಕಾವ್ಯಗಳಲ್ಲಿ ನೋವು, ಆಳವಾದ ಪ್ರಪಂಚ ಜ್ಞಾನ, ದೈವೀ ಚಿಂತನೆ ಸ್ಪಷ್ಟವಾಗಿದೆ. ಸಮಸ್ತ ಜೀವನ, ಸಮಸ್ತ ಸೃಷ್ಟಿ, ಪ್ರಕೃತಿ ಸೌಂದರ್ಯ, ತತ್ತ್ವವಿಚಾರಗಳನ್ನು ಕುರಿತು ಅವರು ಅನೇಕ ಕವಿತೆಗಳನ್ನು ರಚಿಸಿದರು. ಅವರು ಬರೆದ ದುಃಖದ ಕವಿತೆಗಳು ಅವರ ಮನಸ್ಸನ್ನು ಭಗವಂತನತ್ತ ಕೊಂಡೊಯ್ದಂತಿವೆ.

ಋಷಿಸಮಾನರೂ, ತತ್ತ್ವಜ್ಞಾನಿಗಳು ಮತ್ತು ಆಳವಾದ ಪ್ರಪಂಚದ ಅನುಭವವುಳ್ಳ ರವೀಂದ್ರರಿಗೆ ಕವಿಹೃದಯ ದೈವದತ್ತವಾಗಿ ಬಂದಿತ್ತು. ಕವನಗಳಲ್ಲಿ ಅವರು ಪರೋಕ್ಷವಾಗಿ ಸಮಾಜದ ನ್ಯೂನತೆಗಳನ್ನು ಟೀಕಿಸಿದ್ದಾರೆ. ವಿಡಂಬನೆಗೆ ಹಾಸ್ಯ, ಚತುರೋಕ್ತಿಗಳನ್ನು ಅವರು ಸಾಧನವನ್ನಾಗಿ ಬಳಸಿಕೊಂಡು ಕಪಟಿಗಳು, ಅಜ್ಞಾನಿಗಳು, ವಿಚಾರಹೀನರು, ಇಂಗ್ಲೀಷ್ ಪ್ರೇಮಿಗಳನ್ನು ಅಲ್ಲಗಳೆದಿದ್ದಾರೆ. ಸಮಾಜದ ಲೋಪ ದೋಷಗಳನ್ನು ನಿಂದಿಸುವ ಕವನಗಳನ್ನೂ ಅವರು ಬರೆದಿದ್ದಾರೆ. ಪ್ರಪಂಚವನ್ನು ಬಹಳವಾಗಿ ಪ್ರೀತಿಸುತ್ತಿದ್ದ ಠಾಕೂರರ ಕವಿತೆಗಳು ಬಹುಮುಖವಾದ ಅರ್ಥವನ್ನೊಳಗೊಂಡಿದೆ. ಕವಿಯ ಮನಸ್ಸಿನ ನೂರಾರು ಭಾವಗಳನ್ನು, ಅಲೆಗಳನ್ನು ಅವರ ಕಾವ್ಯಗಳು ಚಿತ್ರಿಸುತ್ತವೆ. ಕಾವ್ಯ ನಿರ್ಮಾಣದಲ್ಲಿ ಅವರಿಗೆ ಮಹದಾನಂದವಿತ್ತು ಎನ್ನುವುದನ್ನು ಪ್ರಚಂಡ ಶಕ್ತಿ ಹೊಂದಿ ಉನ್ನತ ಶಿಖರ ಮುಟ್ಟಿದ ಅವರ ಪ್ರತಿಯೊಂದು ಕಾವ್ಯವೂ ಸ್ಪಷ್ಟಪಡಿಸುತ್ತದೆ.

ಠಾಕೂರರಿಗೆ ನೋಬೆಲ್ ಪ್ರಶಸ್ತಿ ತಂದುಕೊಟ್ಟ 'ಗೀತಾಂಜಲಿ'ಯಲ್ಲಿ ಲೌಕಿಕ ಜೀವನದಲ್ಲಿ ಅವರಿಗಿದ್ದ ಆಸಕ್ತಿ ಹಾಗೂ ಮಾನವ ಪ್ರೇಮವನ್ನು ಓದುಗರು ಸುಲಭವಾಗಿ ಗುರುತಿಸಬಹುದು. ಸಾಹಿತ್ಯದ ಎಲ್ಲಾ ಪ್ರಾಕಾರಗಳಲ್ಲಿ ಕೆಲಸಮಾಡಿ ಯಶಸ್ಸು ಸಂಪಾದಿಸುವುದು ಅಸಾಧ್ಯ, ಅಪೂರ್ವ. ಆದರೆ ಠಾಕೂರರು ಕವಿತೆ, ಕಥೆ, ಕಾದಂಬರಿ, ನಾಟಕ, ವಿಮರ್ಶೆ ಮುಂತಾದ ಎಲ್ಲಾ ಪ್ರಾಕಾರಗಳಲ್ಲಿ ಕೈಯ್ಯಾಡಿಸಿ ಒಂದೇ ಸಮನಾದ ಯಶಸ್ಸನ್ನು ಸಂಪಾದಿಸಿದರು. ಅವರು 'ಗೋರಾ' 'ಚತುರಂಗ', 'ಯೋಗಾಯೋಗ' 'ನೌಕಾ ಡುಬಿ' 'ಘತಿಬ್ಯಾರೆ' 'ಶೆಷೆರ್ ಕವಿತಾ' 'ಗಲ್ಪ ಗುಚ್ಛ', 'ಜೋಖೆರ್ ಬಾಲಿ' ಮುಂತಾದ ಕಥೆ, ಕಾದಂಬರಿಗಳನ್ನು ಬರೆದರು. ಹಿರಿಯ ಸಾಹಿತಿ,

ಸಮಾಜ ಸುಧಾರಕ, ದೇಶಭಕ್ತರಾದ ರವೀಂದ್ರರು ಕೇವಲ ಸ್ವಪ್ನಜೀವಿಗಳಲ್ಲ. ಮಾನವನ ಸಮಸ್ಯೆಗಳು, ಹೃದಯದ ನೋವು, ಸಮಾಜದಲ್ಲಿ ಹೆಂಗಸರಿಗೆ ಆಗುತ್ತಿರುವ ಅನ್ಯಾಯ, ವಿಧವಾ ಸಮಸ್ಯೆ ಮುಂತಾದ ಎಲ್ಲಾ ಬಗೆಯ ಸಮಸ್ಯೆಗಳೂ ವಿಶಾಲವ್ಯಾಪ್ತಿಯಲ್ಲಿ ಅವರು ಬರೆದ ಕಥೆಗಳಲ್ಲಿ ಸ್ಪಷ್ಟವಾಗಿದೆ. ರಾಜಕೀಯ, ಧಾರ್ಮಿಕ, ವೈಜ್ಞಾನಿಕ, ಶೈಕ್ಷಣಿಕ ಮುಂತಾದ ವಿಷಯಗಳ ಬಗ್ಗೆ ಅವರಿಗಿದ್ದ ಅಭಿಪ್ರಾಯಗಳು ಅವರ ಕೃತಿಗಳಲ್ಲಿ ಪ್ರತಿಬಿಂಬಿತವಾಗಿವೆ. ಬಂಗಾಳಿ ಜನಜೀವನದ ಸಮಗ್ರ ಹಾಗೂ ಸರಳ ಸುಂದರ ನಿರೂಪಣೆ, ವಿವಿಧ ರೀತಿಯ ಅಭಿವ್ಯಕ್ತಿ ಅವರ ಕಥೆ, ಕಾದಂಬರಿಗಳಲ್ಲಿ ಕಾಣಬಹುದು. ಕವಿಗಳು ಸುಧಾರಕ ಮನೋಭಾವ ಹಾಗೂ ಹಾಸ್ಯ ಪ್ರವೃತ್ತಿಯ ಪರಿಣದು ಅವರ ಕಥೆಗಳ ಮೂಲಕ ಓದುಗರು ತಿಳಿಯಲು ಸಾಧ್ಯ. ಅವರ ಕೃತಿಗಳಲ್ಲಿ ಪ್ರಕೃತಿ ಹಾಗೂ ಹೃದಯದ ಪ್ರೇಮ ಎದ್ದು ಕಾಣಿಸುತ್ತವೆ. ವಿಶಿಷ್ಟವನ್ನೂ, ಎಲ್ಲ ವಿಷಯ ಕ್ಷೇತ್ರಗಳನ್ನೂ ಒಳಗೊಂಡ ಅವರ ಸಣ್ಣಕಥೆಗಳ ಪ್ರಪಂಚ ವಿಸ್ತಾರವಾದದ್ದು. ವಸ್ತುವೈವಿಧ್ಯತೆ, ವಿವೇಚನೆ, ವಿಮರ್ಶೆ ಹಾಗೂ ರೀತಿ ವೈವಿಧ್ಯತೆಯನ್ನು ಗುರುತಿಸಬಹುದು. ಕಥೆ, ಕಾದಂಬರಿಗಳಲ್ಲಿ ಬರುವ ಪಾತ್ರಗಳ ಪ್ರತಿಮೆಗಳು ರವೀಂದ್ರರ ಉದಾತ್ತ ಭಾವನೆಗಳನ್ನು ಪ್ರಪಂಚ ಜ್ಞಾನವನ್ನು, ಸ್ವಭಾವವನ್ನು ಪರಿಚಯ ಮಾಡಿಕೊಡುತ್ತವೆ. ಸಮಕಾಲೀನ ಸಮಸ್ಯೆಗಳನ್ನೂ, ನಾಗರಿಕ ಸ್ತ್ರೀ ಪುರುಷರ ಜೀವನವನ್ನು ಅವರು ತಮ್ಮ ಉತ್ಕೃಷ್ಟ ಹಾಗೂ ಜನಪ್ರಿಯ ಕಥೆಗಳಲ್ಲಿ ಚಿತ್ರಿಸಿದ್ದಾರೆ. ಸಮಾಜದ ಪ್ರತಿಬಿಂಬದಂತಿರುವ ಅವರ ಕೆಲವು ಕಥೆಗಳನ್ನು ಪ್ರಪಂಚದ ಅತ್ಯುತ್ತಮ ಕಥೆಗಳ ಗುಂಪಿಗೆ ಸೇರಿಸಲಾಗಿದೆ. ಛಂದಸ್ಸಿನ ಮಾರ್ಗ ಅವರಿಗೆ ಅತ್ಯಂತ ಪ್ರಿಯವಾದದ್ದು. ಹಳೆಯಕಾಲದ ಸಂಸ್ಕೃತ ಬಾಹುಳ್ಯವುಳ್ಳ ಶೈಲಿ ಮತ್ತು ಹೊಸ ಶೈಲಿ ಎರಡರಲ್ಲೂ ಅವರು ಪರಿಣತರಾಗಿದ್ದರು.

ರವೀಂದ್ರರು 'ವಾಲ್ಮೀಕಿ ಪ್ರತಿಭಾ' 'ರಾಜ ಓ ರಾಣಿ' 'ವಿಸರ್ಜನೆ' 'ಹಾಸ್ಯ ಕೌತುಕ' 'ಶಾರದೋತ್ಸವ' 'ಮುಕ್ತಧಾರಾ' 'ನಟೀರ್‌ಪೂಜಾ' 'ನೃತ್ಯನಾಟ್ಯ ಚಿತ್ರಾಂಗದಾ' ಮುಂತಾದ ನಾಟಕಗಳನ್ನು ರಚಿಸಿದ್ದಾರೆ. ನಾಟಕಗಳಲ್ಲಿ ಬರುವ ಆಳವಾದ ತಿಳುವಳಿಕೆಯುಳ್ಳ ಪಾತ್ರಗಳು ಆಧ್ಯಾತ್ಮಿಕ ಜೀವನವನ್ನು, ತತ್ವಾರ್ಥವನ್ನು ಪ್ರತಿಪಾದಿಸುತ್ತವೆ. ಅವರು ಜೀವನ ಸಮಸ್ಯೆ

ಗಳನ್ನು, ಜೀವಾತ್ಮ ಪರಮಾತ್ಮ ಸಂಬಂಧಗಳನ್ನು ಚಿತ್ರಿಸುವ ನಾಟಕಗಳಲ್ಲಿ ಕೆಲವು ಭಾವನಾಪ್ರಧಾನವಾಗಿದ್ದು ರಂಗಭೂಮಿಗೆ ತಕ್ಕದಲ್ಲ ಎನ್ನುವ ಆಪಾದನೆಗೂ ಗುರಿಯಾಗಿವೆ. ಠಾಕೂರರು ಸ್ವತಃ ಪ್ರತಿಭಾವಂತ ನಟರು. ಅಣ್ಣಂದಿರೊಂದಿಗೆ ಚಿಕ್ಕಂದಿನಿಂದಲೂ ಅನೇಕ ನಾಟಕಗಳಲ್ಲಿ ಪಾತ್ರವಹಿಸಿ ಸಭಿಕರ ಮೆಚ್ಚುಗೆ ಸಂಪಾದಿಸಿದರು. ಭಾರತ ಸಂಸ್ಕೃತಿಯಿಂದ ಪ್ರಭಾವಿತರಾದ ಅವರ ಕೃತಿಗಳಲ್ಲಿ ಗೀತೆ, ಉಪನಿಷತ್ತುಗಳು ಮತ್ತು ವಾಲ್ಮೀಕಿ, ಕಾಳಿದಾಸ ಕವಿಗಳ ಸ್ಮರಣೆ ಕಾಣಿಸಿಕೊಳ್ಳುತ್ತವೆ.

ಪಾಶ್ಚಾತ್ಯ ಸಂಸ್ಕೃತಿಯನ್ನು ಅಭ್ಯಾಸಮಾಡಿದ ರವೀಂದ್ರರು ಪ್ರಾಚೀನ ಉದ್ಗ್ರಂಥಗಳನ್ನು ವಿಮರ್ಶಿಸಿದ್ದಾರೆ. ಆನಂದದಾಯಕ, ಜ್ಞಾನದಾಯಕ ಮತ್ತು ಹಾಸ್ಯ ಪ್ರಧಾನವಾದ ಕಾವ್ಯಗಳನ್ನು, ದೇಶಪ್ರೇಮ ಗೀತೆಗಳನ್ನೂ ಅವರು ರಚಿಸಿದ್ದಾರೆ. ಅವರು ಬರೆದ ಗೀತೆ 'ಜನಗಣಮನ ಅಧಿನಾಯಕ' ರಾಷ್ಟ್ರಗೀತೆಯಾಗಿದೆ. ರವೀಂದ್ರರು ಶ್ರೇಷ್ಠಮಟ್ಟದ ಉಪನ್ಯಾಸಕರು ಮತ್ತು ಭಾಷಣಕಾರರು. ಇಂಪಾದ ಧ್ವನಿ, ಮುದ್ದಾದ ಮಾತುಗಳಲ್ಲಿ ಗಹನವಾದ ವಿಷಯಗಳನ್ನೂ ಸರಳವಾಗಿ, ಸ್ಪಷ್ಟವಾಗಿ ಅವರು ವಿವರಿಸುತ್ತಿದ್ದ ರೀತಿ ಸಭಿಕರನ್ನು ಮುಗ್ಧಗೊಳಿಸುತ್ತಿತ್ತು. ಚಿತ್ರಕಲೆಯಲ್ಲಿ ಆಸಕ್ತಿಹೊಂದಿ ಅನೇಕ ಚಿತ್ರಗಳನ್ನು ಬರೆದು ವಿಖ್ಯಾತರಾದ ರವೀಂದ್ರರು ಚಿತ್ರಕಲೆಯ ಬಗ್ಗೆ ಬಹಳ ಸ್ವಾರಸ್ಯವಾಗಿ ಮಾತನಾಡುತ್ತಿದ್ದರು. 'ಚಿತ್ರಗಳಲ್ಲಿ ಕಲೆಗಾರ ಸತ್ಯದ ಭಾಷೆಯನ್ನು ಸೃಷ್ಟಿಸುತ್ತಾನೆ. ಚಿತ್ರಗಳೇ ತಮ್ಮಲ್ಲಿರುವ ಅರ್ಥವನ್ನು ಪ್ರಕಟಮಾಡಬೇಕು. ಅವುಗಳಲ್ಲಿರುವ ಅರ್ಥವನ್ನು ಬಿಡಿಸಿ ಹೇಳಲು ನಾನು ಅಸಮರ್ಥ' ಎಂದವರು ಹೇಳುತ್ತಿದ್ದರು. ಮಾನವ ಪ್ರಪಂಚವನ್ನು ಅನುಭವಿಸುತ್ತಾನೆ. ಈ ಅನುಭವ ಕಾವ್ಯದಲ್ಲಿ ಆಕಾರ ಪಡೆದು ಕಲೆಯ ಸೃಷ್ಟಿಯಾಗುವುದು. ಆತ್ಮನ ಸಂಪತ್ತಿನ ಹೊರಹೊಮ್ಮೋ ಕಲೆ ಎಂದೂ ಅವರು ಸ್ಪಷ್ಟಪಡಿಸಿದರು.

ಬಂಗಾಳದ ಆದಿಕವಿ, ಅಗ್ರಕವಿ, ವಿಶ್ವಕವಿ ರವೀಂದ್ರರು ದೇಶಪ್ರೇಮಿಯಾಗಿದ್ದರೂ ಕಪಟ ಸಂಕುಚಿತ ದೇಶಪ್ರೇಮವನ್ನು ಅವರು ಬಹಿರಂಗವಾಗಿ ಪ್ರತಿಭಟಿಸಿದರು. ರಾಜಕೀಯದಿಂದ ದೂರವಾಗಿ ನಿಂತು ತಮ್ಮ ಪ್ರೇಮವನ್ನು ದೇಶಕ್ಕಾಗಿ ಧಾರೆಯೆರೆದ ಅವರ ದೇಶಭಕ್ತಿಯಲ್ಲಿ ಸಣ್ಣತನವಾಗಲೀ, ಸಂಕುಚಿತ ಮನೋಭಾವವಾಗಲಿ ಇರಲಿಲ್ಲ. ನಮ್ಮ ರಾಷ್ಟ್ರೀಯತೆಗೆ ಅಂತರ ರಾಷ್ಟ್ರೀಯ

ಯ ದೃಷ್ಟಿವೈಶಾಲ್ಯವನ್ನು ಅವರು ನೀಡಿದರು. ಅವರು ಪೂರ್ವ-ಪಶ್ಚಿಮ, ಧುನಿಕ-ಸಂಪ್ರದಾಯಿಕತೆ, ಹೊಸತು-ಹಳೆಯದು ಇವುಗಳ ನಡುವೆ ೇತುವೆಯಂತಿದ್ದರು. ನವಚೇತನದ ಪ್ರತೀಕವಾಗಿದ್ದ ರವೀಂದ್ರರು ದೇಶದ ುತ್ತು ವಿಶ್ವದ ಧಾರ್ಮಿಕ, ರಾಜಕೀಯ, ಸಾಮಾಜಿಕ ಸುಧಾರಣೆಗಳಲ್ಲಿ ಶೇಷ ಸೇವೆ ಸಲ್ಲಿಸಿದರು. ಮಾನವ ಸ್ವಾರ್ಥವನ್ನು ನಾಶಮಾಡಿ ವಿಶ್ವ ್ರೇಮಕ್ಕಾಗಿ ಶ್ರಮಿಸಿ ವಿಶ್ವಜೀವನದ ಬಿಂಬವನ್ನು ಜೀವನದಲ್ಲಿ ಕಾಣಬೇ ಂದು ಅವರು ಜನತೆಗೆ ಸಂದೇಶ ನೀಡಿದರು. ಮಹಾಸಾಧಕರಾದ ರವೀಂದ್ರರು ಾನವತಾಧರ್ಮವನ್ನು ಸಾರಿದ ಆದೇಶಪುರುಷರು. ಸಂಕಲ್ಪ, ನಿಷ್ಠೆ, ದ್ಧೆ, ನಿಷ್ಕಾಮಕರ್ಮಗಳಲ್ಲಿ ಅವರಿಗೆ ಅನನ್ಯಭಕ್ತಿ. ಪ್ರಪಂಚದ ಎಲ್ಲಾ ರ್ಮಗಳ ಪರಿಚಯವಿದ್ದ ಠಾಕೂರರು ಮಾನವ ಧರ್ಮವನ್ನು ಕುರಿತು ನೇಕ ಗ್ರಂಥಗಳನ್ನು ಬರೆದಿದ್ದಾರೆ. ಎಲ್ಲ ಮತಗಳಲ್ಲಿರುವ ಅತ್ಯುತ್ತಮ ಅಂಶ ಳನ್ನು ಅವರು ತೆಗೆದುಕೊಂಡು ಹೊಸದಾಗಿ ಒಂದು ಮತವನ್ನು ನಿರ್ಮಿಸಿ ದಕ್ಕೆ 'ಮಾನವಧರ್ಮ' ಬಂದು ಹೆಸರಿಟ್ಟರು. ಈ ಹೊಸ ಧರ್ಮದಲ್ಲಿ ಸಕಲ ರ್ಮಗಳ ಪ್ರಭಾವವನ್ನೂ ನಾವು ಕಾಣುತ್ತೇವೆ. ಮನುಷ್ಯರ ನಡುವೆ ಮೇಲು ೀಳೆಂಬ ಭೇದ ಬೇಡ. ಅಧ್ಯಾತ್ಮಪರ ಮನೋಧರ್ಮವನ್ನು ಬಿಟ್ಟ ಯಾವ ನಾಂಗವೂ ಏಳಿಗೆಯಾಗಲಾರದು. ನಿಜವಾದ ಧರ್ಮದಿಂದ ಮನುಷ್ಯ ಗವಂತನ ದಿವ್ಯಮೂರ್ತಿಯಲ್ಲಿ ಸತ್ಯವನ್ನು ಕಾಣುತ್ತಾನೆ. ನಡೆನುಡಿಯಲ್ಲಿ ್ವತಂತ್ರ್ಯ, ಸಾಹಿತ್ಯದಲ್ಲಿ ಕಲ್ಪನೆಯ ಸ್ವಾತಂತ್ರ್ಯ, ಧರ್ಮಾನುಷ್ಠಾನದಲ್ಲಿ ತ್ಮಸ್ವಾತಂತ್ರ್ಯವಿರಬೇಕೆಂದು ಘೋಷಿಸಿದ ರವೀಂದ್ರರು ಸಂಕುಚಿತ ಮನೋ ಾವ ಸೃಷ್ಟಿಸುವ ಧಾರ್ಮಿಕ ಸಂಘಗಳನ್ನು ದೂರವಿಟ್ಟರು. ಅಂತಹ ಸಂಘ ೆಗೆ ಅವರು ಯಾವ ವಿಧವಾದ ಪ್ರೋತ್ಸಾಹವನ್ನೂ ಕೊಡಲಿಲ್ಲ.

ಮಾತೃಭಾಷಾಪ್ರೇಮಿ ರವೀಂದ್ರರು ಶಿಕ್ಷಣ ಮತ್ತು ಜೀವನದಲ್ಲಿ ಬಂಗಾಲಿ ಾಷೆಗೆ ತುಂಬ ಪ್ರಾಮುಖ್ಯತೆ ನೀಡಿದರು. ದೇಶದ ಉಳಿದ ಭಾಷೆಗಳನ್ನು, ಜ್ಞಾನಗಳನ್ನು ಕಡೆಗಣಿಸದೆ ಅವರು ಗೌರವಿಸಿದರು. ದೇಶೀಯರೆಲ್ಲ ಪರ ಾಷೆಯನ್ನು ಕಲಿಯುವುದು ಅಸಾಧ್ಯ. ಅವಶ್ಯಕವಾದ ಜ್ಞಾನಾರ್ಜನೆ ುನ್ನು ಮನುಷ್ಯ ಮಾತೃಭಾಷೆಯಿಂದ ಸುಲಭವಾಗಿ ಪಡೆಯಬಹುದು ಎಂದ ು ಮಾತೃಭಾಷೆಗೆ ಉನ್ನತ ಸ್ಥಾನಮಾನವನ್ನು ಕೊಟ್ಟರು. ದೇಹದ ದಾಸ

ನಾಗದೆ ಆತ್ಮನಾಗಿ ಬಾಳುವಂತೆ ವಿದ್ಯೆ ಮಾನವನಿಗೆ ನೆರವಾಗಬೇಕು ಎಂದು ರವೀಂದ್ರರು ಅಭಿಪ್ರಾಯಪಟ್ಟರು.

ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಂಡ ರವೀಂದ್ರರು ಭಕ್ತಿಯೋಗ, ಕರ್ಮಯೋಗ ಮತ್ತು ಸೌಂದರ್ಯಯೋಗವನ್ನು ಕುರಿತು ಅನೇಕ ಉಪನ್ಯಾಸಗಳನ್ನು ಮಾಡಿದರು. ಮಾನವ ನಿಸ್ವಾರ್ಥತೆಯಿಂದ ಅನಂತದಲ್ಲಿ ಬಾಳುವುದನ್ನು ಕಲಿತು ಕರ್ಮಯೋಗಿಯಾಗಬೇಕು. 'ನಾನು' ಎನ್ನುವ ಸ್ವಾರ್ಥ ಭಾವವನ್ನು ಸೃಷ್ಟಿಗೆ ಒಪ್ಪಿಸಿದಾಗ ಮಾನವನಿಗೆ ಆನಂದಸ್ವರೂಪವಾದ ಭಗವಂತನ ದರ್ಶನವಾಗುವುದು. ಆ ಆನಂದವೇ ಅಮೃತ, ಅದೇ ಬ್ರಹ್ಮಜ್ಞಾನ, ಆತ್ಮಜ್ಞಾನ. ಮಾನವನ ಪ್ರೀತಿಯ ವಸ್ತು ಬೇರೆ ಯಾವುದೂ ಅಲ್ಲದೆ ಪರಮಾತ್ಮನಾಗಬೇಕು ಎಂದು ಅವರು ಜಗತ್ತಿಗೇ ಸಂದೇಶ ನೀಡಿದರು.

ರವೀಂದ್ರರು ಘನವಾದ ಸಂಗೀತಶಾಸ್ತ್ರಜ್ಞರು. ಅವರು ಸ್ವರ ಸಂಯೋಜನೆ ಮಾಡಿ ಮಧುರವಾಗಿ ಹಾಡುತ್ತಿದ್ದರು. ಲೋಕ, ಕಾವ್ಯ, ಅಧ್ಯಾತ್ಮಗಳ ಸತ್ಯವನ್ನು ಪರಿಪೂರ್ಣ ಸ್ವರೂಪದಲ್ಲಿ ಕಂಡಿದ್ದ ಅವರಿಗೆ ಜೀವನದಷ್ಟೇ ಕಾವ್ಯವೂ, ಕಾವ್ಯದಷ್ಟೇ ಜೀವನವೂ ಸತ್ಯವಾಗಿತ್ತು. ಸ್ವಾತಂತ್ರ್ಯ ಚಳುವಳಿಗೆ ಬರಹ ಭಾಷಣಗಳಿಂದ ಪ್ರೋತ್ಸಾಹ ಕೊಟ್ಟ ರವೀಂದ್ರರು ರಾಷ್ಟ್ರದ ಅಭಿವೃದ್ಧಿಗೆ ಬೇಕಾದ ಯೋಜನೆಗಳನ್ನೆಲ್ಲಾ ಸ್ಪಷ್ಟಪಡಿಸಿ, ಹಳ್ಳಿಗಳ ಸ್ವಾವಲಂಬನ, ಗೃಹ ಕೈಗಾರಿಕೆಗಳ ಬೆಳವಣಿಗೆ, ಪುನರುಜ್ಜೀವನಕ್ಕೆ ಮಹತ್ವ ಕೊಟ್ಟರು. ರಾಷ್ಟ್ರೀಯ ನಿಧಿಗೆ ಅವರು ಶ್ರಮಪಟ್ಟು ಅಪಾರ ಹಣ ಸಂಗ್ರಹಿಸಿದರು.

ಉದಾರಜೀವಿ, ಉದ್ದಾಮಪಂಡಿತ, ಕಲೋಪಾಸಕರಾದ ರವೀಂದ್ರನಾಥ ಠಾಕೂರರು ಕವಿಯಾಗಿ, ದೇಶಪ್ರೇಮಿಯಾಗಿ, ಚಿತ್ರಕಾರರಾಗಿ ನಾಡುನುಡಿಗಳ ಏಳಿಗೆ ಮತ್ತು ಮಾನವ ಜನಾಂಗದ ಶಾಂತಿ ಸೌಹಾರ್ದಗಳಿಗಾಗಿ ಶ್ರಮಿಸಿದ ಮಹಾಪುರುಷರು. ಈ ಮಹಾನ್ ವ್ಯಕ್ತಿಯ ಜೀವನಚರಿತ್ರೆಯನ್ನು, ಕೃತಿಗಳನ್ನು ಓದಿ ಇಂದಿನ ಯುವಜನಾಂಗ ಸ್ಫೂರ್ತಿ ಪಡೆಯುವುದು ಅವಶ್ಯಕವಾಗಿದೆ.

# ಮೋಹನದಾಸ ಕರಮಚಂದ ಗಾಂಧಿ

**೧೮೬೯-೧೯೪೮**

ಗಾಂಧೀಜಿ ಭಾರತದ ಒಂದು ಅಮೌಲ್ಯ ಆಸ್ತಿ ಮತ್ತು ಪ್ರಪಂಚದ ಧೃವ ನಕ್ಷತ್ರ. ಇವರು ಭಾರತೀಯರನ್ನು ಒಂದುಗೂಡಿಸಿ, ಅವರಿಗೆ ಸತ್ಯ, ಅಹಿಂಸೆ, ಧರ್ಮಗಳ ವಜ್ರಕವಚ ತೊಡಿಸಿ ಭಾರತದ ಸ್ವಾತಂತ್ರ್ಯದ ಸರ್ವೋದಯಕ್ಕೆ ಕಾರಣಪುರುಷರಾದರು. ಈತನ ಧ್ಯೇಯಗಳು ಅತ್ಯುನ್ನತ ಮತ್ತು ಜಗತ್ತಿಗೆ ನೀಡಿದ ಸಂದೇಶಗಳ ಮಹತ್ವ ಹಿರಿದು. ಮಾನವ ಕುಲದ ಇತಿಹಾಸದಲ್ಲೇ ಗಾಂಧೀಜಿಯನ್ನು ಬಾಪೂಜಿ, ರಾಷ್ಟ್ರಪಿತ, ರಾಜಕಾರಣಿ, ಸ್ವಾತಂತ್ರ್ಯಯೋಧ, ಸತ್ಯಶೋಧಕ, ಸಮಾಜ ಸುಧಾರಕ, ತತ್ತ್ವಜ್ಞಾನಿ, ಮಹಾತ್ಮ ಎಂದು ಬಣ್ಣಿಸಲಾಗಿದೆ.

ಗಾಂಧೀಜಿ ಜೀವನವೇ ಒಂದು ಮಹಾ ಕಾವ್ಯ. ಅವರು ನಡೆಸಿದ ಸಾಹಸದ ಸೆಣಸಾಟಗಳಿಂದ, ಆತನ ಪವಿತ್ರವಾದ ಜೀವನದಿಂದ, ಮಹೋನ್ನತವಾದ ಧ್ಯೇಯಗಳಿಂದ ಅವರ ಮಹತ್ವ ತಿಳಿಯುತ್ತದೆ. ಆಧ್ಯಾತ್ಮಿಕ ಪುರುಷರೂ, ಕರ್ಮಯೋಗದ ಪುರಸ್ಕರ್ತರಾದ ಅವರಿಗೆ ದೇಶಸೇವೆ, ಮಾನವಕುಲದ ಸೇವೆಯೆ ನಿರಂತರ ದುಡಿತವೇ ಮುಕ್ತಿಯ ಮಾರ್ಗವಾಗಿತ್ತು. ಅವರ ಜೀವನವೇ ಒಂದು ವಿಶ್ವವ್ಯಾಪಕವಾದ ಬೆಳಕು. ಜಗತ್ತಿನ ಮೂಲೆಮೂಲೆಗಳಲ್ಲಿದ್ದ ಅಜ್ಞಾನದ ಕತ್ತಲನ್ನು ತಳ್ಳಿಹಾಕಿ ಅಲ್ಲೆಲ್ಲಾ ಜ್ಯೋತಿ ಬೆಳಗಿದ ದೀವಟಿಕೆ ನಮ್ಮ ಬಾಪು.

೧೮೬೯ನೇ ಇಸವಿ ಅಕ್ಟೋಬರ್ ೨ನೇ ತಾರೀಕು ಪೋರ್‌ಬಂದರಿನಲ್ಲಿ ಗಾಂಧೀಜಿ ಜನಿಸಿದರು. ತಂದೆ ಕಬಾಗಾಂಧಿಯ ನಾಲ್ಕನೆಯ ಹೆಂಡತಿ ಪುತಲೀಬಾಯಿಗೆ ಹುಟ್ಟಿದ ಒಬ್ಬ ಮಗಳು, ಮೂರುಜನ ಗಂಡುಮಕ್ಕಳಲ್ಲಿ ಗಾಂಧಿಯವರೇ ಕಡೆಯವರು. ಬನಿಯಾ ವೃತ್ತಿಯವರಾದ ಕಬಾಗಾಂಧಿ ಸತ್ಯವಂತರೂ, ಚೆನ್ನಾಗಿ ಲೋಕವ್ಯವಹಾರ ಜ್ಞಾನವುಳ್ಳವರೂ, ಕುಟುಂಬ ಪ್ರೇಮಿಗಳೂ, ದೈವಭಕ್ತರೂ, ಉದಾರಿಗಳೂ ಆಗಿದ್ದರು. ತಾಯಿ ತುಂಬ ಆಚಾರ ಸಂಪನ್ನರು, ಧಾರ್ಮಿಕರು ಮತ್ತು ಕಠಿಣ ವ್ರತಗಳನ್ನು ನಿಷ್ಠೆಯಿಂದ ಕೈಗೊಳ್ಳುತ್ತಿದ್ದರು.

ದೈವಭಕ್ತರಾದ ತಂದೆ ತಾಯಿಗಳ ಜೊತೆಯಲ್ಲಿ ಗಾಂಧೀಜಿ ಆಗಾಗ್ಯೆ ದೇವ ಸ್ಥಾನಗಳಿಗೆ, ಜಿನಮಂದಿರಗಳಿಗೆ ಹೋಗುತ್ತಿದ್ದರು. ಮನೆಯಲ್ಲಿದ್ದ ಮತ, ಪುರಾಣಗಳಿಗೆ ಸಂಬಂಧಪಟ್ಟ ಪುಸ್ತಕಗಳನ್ನೆಲ್ಲ ಅವರು ಓದುತ್ತಿದ್ದರು. ಧಾರ್ಮಿಕ ವಿಷಯಗಳ ಬಗ್ಗೆ ಚರ್ಚಿಸಲು ಕಬಾಗಾಂಧಿಯ ಮನೆಗೆ ಮುಸ ಲ್ಮಾನ, ಪಾರ್ಸಿ, ಜೈನ ಸಾಧುಗಳು ಬರುತ್ತಿದ್ದರು. ಈ ವಾತಾವರಣದಲ್ಲಿ ಹುಟ್ಟಿ ಬೆಳೆದ ಗಾಂಧೀಗೆ ಚಿಕ್ಕ ವಯಸ್ಸಿನಲ್ಲೇ ಹಿಂದೂಧರ್ಮ ಮತ್ತು ಇತರ ಸಹೋದರ ಧರ್ಮಗಳ ಬಗ್ಗೆ ಸಮಭಾವದ ಶಿಕ್ಷಣ ದೊರೆತು, ಅವು ಗಳಲ್ಲಿ ವಿಶ್ವಾಸ ಹುಟ್ಟಿತು. ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೇ 'ಶ್ರವಣ ಪಿತೃಭಕ್ತಿ,' 'ಹರಿಶ್ಚಂದ್ರಚರಿತ್ರೆ' ಪುಸ್ತಕಗಳು ಅವರ ಮನಸ್ಸಿನ ಮೇಲೆ ಮಹತ್ತರವಾದ ಪರಿಣಾಮ ಬೀರಿದವು. ಕಳ್ಳರು, ಪಿಶಾಚಿಗಳು, ಹಾವು, ಕತ್ತಲೆ ಎಂದರೆ ಭಯದಿಂದ ಹೆದರಿ ನಡುಗುತ್ತಿದ್ದ ಅವರಿಗೆ ವ್ಯಾಯಾಮ, ಆಟಗಳಲ್ಲಿ ಆಸಕ್ತಿ ಯಿಲ್ಲದಿದ್ದರೂ ಪ್ರತಿನಿತ್ಯ ವಾಯುಸೇವನೆಗೆ ಹೋಗುತ್ತಿದ್ದರು.

ಗಾಂಧೀಜಿ ಹುಟ್ಟು ಮಹಾತ್ಮರಲ್ಲ, ಅವತಾರ ಪುರುಷರಲ್ಲ. ಉಳಿಯ ಅನೇಕ ಏಟುಗಳನ್ನು ತಿಂದು ಒಂದು ಕಲ್ಲು ವಿಗ್ರಹವಾಗುವಂತೆ ಅವರು ಅನೇಕ ಕಷ್ಟ ನಷ್ಟಗಳನ್ನು ಅನುಭವಿಸಿ, ಕಲಿತಿದ್ದ ಕೆಟ್ಟ ಚಾಳಿ, ದೌರ್ಬಲ್ಯಗಳನ್ನೆಲ್ಲ ತ್ಯಜಿಸಿ ತಮ್ಮನ್ನು ತಾವೇ ರೂಪಿಸಿಕೊಂಡರು. ಗಾಂಧಿ ಮಾಡಿದ ತಪ್ಪುಗಳನ್ನೆಲ್ಲ ಬಹಿರಂಗವಾಗಿ ಒಪ್ಪಿಕೊಂಡು, ಪಶ್ಚಾತ್ತಾಪವೇ ಪ್ರಾಯಶ್ಚಿತ್ತವೆಂದು ತಿಳಿದು ತಂದೆಯಲ್ಲಿ ಕ್ಷಮೆ ಬೇಡಿ ದೋಷ, ಕಲ್ಮಶಗಳಿಂದ ವಿಮುಕ್ತರಾದರು. ಸಚ್ಚಾರಿತ್ರ್ಯದಿಂದ ಅವರು ಗೆಳೆಯರ, ಅಧ್ಯಾಪಕರ ಪ್ರೀತಿ, ವಿಶ್ವಾಸ ಸಂಪಾದಿಸಿ ದರು. ಪಠ್ಯಪುಸ್ತಕಗಳಲ್ಲಿ ವಿಶೇಷ ಆಸಕ್ತಿಯಿಲ್ಲದಿದ್ದರೂ, ಅವರು ತರಗತಿ ಯಲ್ಲಿ ದಡ್ಡರೆನಿಸಿಕೊಂಡಿರಲಿಲ್ಲ. ಅವರು ಹೈಸ್ಕೂಲಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗ ಸರಳ ಸ್ವಭಾವ, ಛಲಗಾತಿ, ಸ್ವಾತಂತ್ರ್ಯಪ್ರಿಯೆ, ಮಿತ ಭಾಷಿ ಮತ್ತು ಅವಿದ್ಯಾವಂತಳಾದ ಕಸ್ತೂರಿಬಾಯನ್ನು ಮದುವೆಯಾದರು. ೧೮೮೭ ರಲ್ಲಿ ಮೆಟ್ರಿಕ್ಯುಲೇಶನ್ ಮುಗಿಸಿ ಬ್ಯಾರಿಸ್ಟರಾಗಲು ಅವರು ಇಂಗ್ಲೆಂ ಡಿಗೆ ಪ್ರಯಾಣ ಮಾಡಿದರು. ಹೋಗುವುದಕ್ಕೆ ಮೊದಲು 'ಮದ್ಯ, ಮಾಂಸ, ಹೆಣ್ಣನ್ನು ಮುಟ್ಟುವುದಿಲ್ಲ'ವೆಂದು ಪ್ರತಿಜ್ಞೆ ಮಾಡಿದರು. ನುಡಿದಂತೆ ಆತ ನಡೆದುಕೊಂಡರು. ವಿದೇಶದ ವಿಲಾಸ ಜೀವನದ ವೈಭವಕ್ಕೆ, ವ್ಯಾಮೋಹಕ್ಕೆ

ಅವರು ಸಿಕ್ಕಿ ಬೀಳಲಿಲ್ಲ, ಭಾರತಕ್ಕೆ ಹಿಂತಿರುಗಿ ವಕೀಲವೃತ್ತಿ ಕೈಗೊಂಡ ಮೇಲೂ ಅವರು ಅಸತ್ಯದ ಬೆನ್ನು ಹತ್ತಲಿಲ್ಲ, ಸುಳ್ಳು ಹಣ ಸಂಪಾದಿಸಲಿಲ್ಲ. ಹೆಂಡತಿ, ಮಕ್ಕಳೊಡನೆ ಸಂಸಾರಸುಖ ಅನುಭವಿಸುವುದಕ್ಕಿಂತ ದೇಶಸೇವೆಯ ಕಡೆಗೆ ಅವರು ಹೆಚ್ಚಿನ ಆಸಕ್ತಿ ತೋರಿಸಿದರು. ಇಡೀ ಭಾರತವೇ 'ನನ್ನ ಸಂಸಾರ' ಎನ್ನುತಿದ್ದರಾತ.

ವಿದೇಶಿಯರ ಆಳ್ವಿಕೆಯಿಂದ ಭಾರತವನ್ನು ವಿಮುಕ್ತಿಗೊಳಿಸಲು ಗಾಂಧೀಜಿ ರಾಜಕೀಯ ಕ್ಷೇತ್ರಕ್ಕೆ ಕಾಲಿಟ್ಟರು. ಭಾರತ ಸ್ವತಂತ್ರವಾಗಬೇಕು, ಜಗತ್ತಿನಲ್ಲೇ ಸತ್ವಶಾಲಿಯಾದ ರಾಷ್ಟ್ರವಾಗಬೇಕು ಎನ್ನುವ ಆಕಾಂಕ್ಷೆಯಿಂದ ಅವರು ದುಡಿದರು. ಪ್ರಪಂಚದಲ್ಲೇ ಮೊಟ್ಟಮೊದಲು ಸತ್ಯ, ಅಹಿಂಸೆ, ಧರ್ಮ ಮುಂತಾದ ದೇವತಾಭಾವನೆಗಳನ್ನು ರಾಜಕೀಯದಲ್ಲಿ ಪ್ರವೇಶಗೊಳಿಸಿ, ಸ್ವಾತಂತ್ರ್ಯಕ್ಕಾಗಿ ಧರ್ಮಯುದ್ಧವನ್ನೇ ಅವರು ಪ್ರಾರಂಭಿಸಿದರು. ನಿರಾಶರಾಗಿದ್ದ, ಗುಲಾಮಗಿರಿಯಿಂದ ಅಂತಃ ಸತ್ತ್ವವನ್ನು ಕಳೆದುಕೊಂಡು ಹೇಡಿಗಳಾಗಿದ್ದ ಭಾರತೀಯರಿಗೆಲ್ಲ ಉಪದೇಶಿಸಿ ಅವರ ಹೃದಯದಲ್ಲಿ ಧೈರ್ಯ ತುಂಬಿದ ಸಾಹಸಿ ಗಾಂಧೀಜಿ. ಅವರು ದಕ್ಷಿಣ ಆಫ್ರಿಕಾದಲ್ಲಿ ಬಿಳಿಯರಿಂದ ಅನೇಕ ಕಷ್ಟನಷ್ಟಗಳನ್ನು ಅನುಭವಿಸಿ, ಬದುಕಿನಲ್ಲಿ ಎದುರಾದ ದುಃಖಪರಂಪರೆಗಳನ್ನು ಸ್ಥಿತಪ್ರಜ್ಞರಂತೆ ಎದುರಿಸಿದರು.

ಗಾಂಧೀಜಿಯ ಶ್ರಮದ ಫಲವಾಗಿ ಭಾರತಕ್ಕೆ ೧೯೪೭ರ ಆಗಸ್ಟ್ ೧೫ರ ಶ್ರಾವಣದ ಪವಿತ್ರದಿನ ಸ್ವಾತಂತ್ರ್ಯ ಸಿಕ್ಕಿತು. ಗಾಂಧಿ ಭಾರತಕ್ಕೆ ಮಾತ್ರವಲ್ಲ ಇಡೀ ಪ್ರಪಂಚಕ್ಕೇ, ಮಾನವ ಜನಾಂಗಕ್ಕೇ ಮಾರ್ಗದರ್ಶಕರಾದರು. ಭಾರತೀಯರು ಅವರನ್ನು ತಮ್ಮ ಹೃದಯ ಮಂದಿರಗಳಲ್ಲಿಟ್ಟು ಭಕ್ತಿಯಿಂದ ಪೂಜಿಸಿದರು. ಗಾಂಧೀಜಿಯವರ ಸತ್ವಬಲ ಬ್ರಿಟಿಷ್ ಸಾಮ್ರಾಜ್ಯದ ಪಶುಬಲವನ್ನು ಹೊಡೆದುರುಳಿಸಿತು. ಅವರಿಗೆ ಸ್ವಾತಂತ್ರ್ಯ ಸಂಪೂರ್ಣ ತೃಪ್ತಿ ತಂದುಕೊಡಲಿಲ್ಲ. ಭಾರತದ ಹಲವು ಭಾಗ ಪಾಕಿಸ್ತಾನವೆನಿಸಿ ಮುಸಲ್ಮಾನರ ಕೈವಶವಾಯಿತು. ಶಾಂತ ಭಾಷಣಕಾರರಾದ ಗಾಂಧೀಜಿ ಹಿಂದೂ ಮುಸ್ಲಿಂ ಐಕ್ಯತೆಗಾಗಿ ಹೋರಾಡಿದರು. ಗಾಂಧಿ ಭಾರತವನ್ನು ಹರಿದು ಹಂಚಿಕೊಟ್ಟರಲ್ಲದೆ ಮುಸಲ್ಮಾನರಿಗೆ ತುಂಬ ಸಲಿಗೆ ಕೊಟ್ಟರು. ಹಣದ ಸಹಾಯ ಮಾಡಿದರೆಂದು ರೊಚ್ಚಿಗೆದ್ದ ಭಾರತೀಯನೊಬ್ಬ ಅವರನ್ನು ಪ್ರಾರ್ಥನಾಮಂದಿರದಲ್ಲಿ

ಜನವರಿ ೩೦, ೧೯೪೮ರಲ್ಲಿ ಗುಂಡಿಟ್ಟು ಕೊಂದ. ಅವರ ಮರಣವಾರ್ತೆಗೆ ಇಡೀ ವಿಶ್ವವೇ ಶೋಕಸಾಗರದಲ್ಲಿ ಮುಳುಗಿತು. ಬಾಪು, ಭಾರತದ ತಂದೆ ಇನ್ನಿಲ್ಲ. ಆದರೆ ಸತ್ಯರೂಪದ ಜ್ಯೋತಿ ಇನ್ನೂ ಬೆಳಗುತ್ತಿದೆ, ಅದು ಎಂದೆಂದಿಗೂ ಬೆಳಗುವುದು ಖಂಡಿತ.

ಗಾಂಧೀಜಿ ಜನ್ಮದಲ್ಲಿ ಸಾಮಾನ್ಯ ಪುರುಷರಾದರೂ ವ್ರತ, ನಿಯಮ ಗಳಿಂದ ಒಂದೊಂದೇ ಮೆಟ್ಟಿಲನ್ನು ಏರುತ್ತಾ ಔನ್ನತ್ಯದ ತುದಿಯನ್ನು ಮುಟ್ಟಿ ಮಹಾತ್ಮರೆನಿಸಿಕೊಂಡರು. ತುಂಬು ಹೃದಯದಿಂದ, ಪೂಜ್ಯಭಾವದಿಂದ ಅವರು ಮಾತೃಭೂಮಿ ಭಾರತವನ್ನು ನೋಡುತ್ತಿದ್ದರು. ಭಾರತದ ಪಾಲಿಗೆ ಅವರು ಅಪೂರ್ವ ತೇಜಸ್ಸು, ಶಕ್ತಿ, ಶಿಸ್ತು, ಸಂಯಮ, ದಯೆ, ಪ್ರೇಮಗಳ ಸಾಕಾರಮೂರ್ತಿಯಾಗಿದ್ದರು. ಸ್ವಾತಂತ್ರ್ಯಸಾಧನೆಗಾಗಿ ಅವರು ಅನುಸರಿಸಿದ ಹೊಸಮಾರ್ಗ, ಭಾರತೀಯರಲ್ಲಿ ಅವರುಂಟುಮಾಡಿದ ರಾಷ್ಟ್ರೀಯತ್ವದ ಜಾಗೃತಿ ಅವರ ವಿಶಿಷ್ಟ ಕೊಡುಗೆಗಳು.

ಬೋಳು ತಲೆ, ದೊಡ್ಡ ಕಿವಿಗಳು, ಮೀಸೆಯಿಂದ ಬಹುಪಾಲು ಮುಚ್ಚಿ ಹೋಗಿದ್ದ ಮೇಲ್ತುಟಿ, ಚೂಪು ಮೂಗಿನ ಕೃಶ ಶರೀರದ ವ್ಯಕ್ತಿ ಗಾಂಧೀಜಿ ಯನ್ನು ಧಾರಾಳವಾಗಿ ಕುರೂಪಿಗಳ ಗುಂಪಿಗೆ ಸೇರಿಸಬಹುದಾಗಿತ್ತು. ಆದರೆ ಆತ್ಮವಿಶ್ವಾಸ, ದಯೆ, ಪ್ರೀತಿ, ವಿಶ್ವಾಸಗಳನ್ನು ಉಕ್ಕಿಸುತ್ತಿದ್ದ ಅವರ ತೀಕ್ಷ್ಣವಾದ ಕಣ್ಣುಗಳು, ಬೊಚ್ಚುಬಾಯಿಯ ಮೃದು ಮಂದಹಾಸ ಮನಸೆಳೆಯುವಂತಿದ್ದವು. ತಮ್ಮ ಬದುಕನ್ನೇ ಮಾನವಕುಲದ ಹಿತಸಾಧನೆ ಗಾಗಿ ಅರ್ಪಿಸಿದ ಶುದ್ಧವಾದ ಅಂತಃಕರಣದ ವ್ಯಕ್ತಿ ಆತ. ಐಂದ್ರಜಾಲಿಕ ಶಕ್ತಿ ಅವರಲ್ಲಿತ್ತು. ಆಶಾವಾದಿ, ಕರ್ಮಯೋಗಿ ಗಾಂಧಿ ಸಂಸಾರದಲ್ಲಿದ್ದೂ ಬ್ರಹ್ಮ ಚಾರಿಯಾಗಿ ತಮ್ಮ ಜೀವನಯಾತ್ರೆಯನ್ನು ಅತ್ಯಂತ ಯಶಸ್ವಿಯಾಗಿ ಮುಗಿಸಿದ ಮಾನವತಾವಾದಿ.

ಗಾಂಧೀಜಿ ಸತ್ಯ, ಅಹಿಂಸೆ, ಧರ್ಮ, ಸತ್ಯಾಗ್ರಹವನ್ನು ಕೊಟ್ಟು ಭಾರತ ವನ್ನು ರಕ್ಷಿಸಿದ ಮಹಾನುಭಾವ. ತಮ್ಮ ಆತ್ಮೋದ್ಧಾರಕ್ಕೆ ಅವರು ಅಹಿಂಸೆ, ಸತ್ಯದ ಮಾರ್ಗವನ್ನು ಆರಿಸಿಕೊಂಡರು. ಸತ್ಯ, ಅಹಿಂಸೆ, ಧರ್ಮದ ಸಮ ರಸ ಮಿಲನವೇ ಗಾಂಧೀಜಿ. ಬಾಪೂಜಿ ಸತ್ಯಶೋಧಕರು. ಅವರ ಇಡೀ ಬದುಕು ಸತ್ಯದ ಸಂಶೋಧನಾಲಯದಂತಿತ್ತು. ಅವರು ಸತ್ಯದ ಒಬ್ಬ ನಮ್ರ

ಶೋಧಕ, ಸೇವಕ, ಪೂಜಾರಿ. ಸತ್ಯ ಪ್ರೇಮಗಳಲ್ಲಿ ಅವರಿಗೆ ಅಚಲವಾದ ನಂಬಿಕೆ. ಸ್ವಾರ್ಥಕ್ಕೆ ಎಡೆಕೊಡದೆ, ತಪಸ್ಸು, ಆತ್ಮದಂಡನೆಯಿಂದ ಸತ್ಯ ವನ್ನು ತಮ್ಮ ಬದುಕಿನಲ್ಲೇ ಸಾಕ್ಷಾತ್ಕಾರ ಮಾಡಿಕೊಂಡು ಜಗತ್ತಿಗೂ ತೋರಿಸಿದರು. ಸತ್ಯದ ಗೆಲುವಿಗಾಗಿ ಧರ್ಮದಿಂದ ಹೋರಾಡಿದರು. ಪ್ರಪಂಚ ಸತ್ಯದ ಅಡಿಪಾಯದ ಮೇಲೆ ನಿಂತಿದೆ. ಇರುವ ಸತ್ಯವನ್ನು ಸೋಲಿಸುವುದು ನಾಶಪಡಿಸುವುದು ಯಾರಿಂದಲೂ ಸಾಧ್ಯವಿಲ್ಲ. ಸತ್ಯವಂತರಾಗಿದ್ದರೆ ದೇವರು ನಮ್ಮನ್ನು ಮೆಚ್ಚುತ್ತಾನೆ. ಸತ್ಯಕ್ಕಾಗಿ ಮಾನವ ಪ್ರಾಣತ್ಯಾಗಮಾಡಲೂ ಸಿದ್ಧವಿರಬೇಕು. ಶ್ರದ್ಧೆಯಿಂದ, ತಾಳ್ಮೆಯಿಂದ ಪ್ರಯತ್ನಿಸಿದರೆ ಸತ್ಯಕ್ಕೇ ಜಯ ಸಿಕ್ಕುವುದು ಖಂಡಿತ. ಸತ್ಯವೇ ದೇವರು, ಸೂರ್ಯನ ಪ್ರಭೆಗಿಂತ ಸತ್ಯದ ತೇಜಸ್ಸು ಲಕ್ಷದಷ್ಟು ಅಧಿಕ. ಸತ್ಯವೆಂದರೆ ಸುಳ್ಳು ಹೇಳುವುದಲ್ಲವೆಂದಲ್ಲ, ಅದೇ ಬದುಕಿನ ಮಾರ್ಗವಾಗಬೇಕು. ಸತ್ಯದ ದರ್ಶನವೇ ಆತ್ಮಸಾಕ್ಷಾತ್ಕಾರ. ಅದೇ ಜೀವನದ ಗುರಿ, ಪರಿಪೂರ್ಣತೆಯ ಸಿದ್ಧಿಯಾಗಬೇಕು ಎನ್ನುತ್ತಿದ್ದ ಗಾಂಧೀಜಿ ಸತ್ಯದ ಬಗ್ಗೆ ತಮ್ಮದ್ದೇ ಆದ ಕೆಲವು ಅಭಿಪ್ರಾಯಗಳನ್ನು ಹೊಂದಿ ದ್ದರು. ಸುಳ್ಳಿನ ನಡುವೆ ಸತ್ಯ, ತಪಸ್ಸಿನ ನಡುವೆ ಜ್ಯೋತಿ ಶಾಶ್ವತವಾಗಿರು ವುದನ್ನು ಅವರು ಕಂಡಿದ್ದರು. ಅಶಾಶ್ವತ ಹಾಗೂ ಅನಿಶ್ಚಿತವಾದ ಈ ಜಗತ್ತನ್ನೇ ಸಂಪೂರ್ಣವಾಗಿ ಮರೆತು ಸತ್ಯಕ್ಕಾಗಿ ಅವರು ಶೋಧನೆ ನಡೆಸಿದರು. ನೈಜಭಕ್ತಿಯಾದ ಸತ್ಯವನ್ನು ಹುಡುಕಿಕೊಂಡು ನಡೆಯುವುದು, ದೇವರೆಡೆಗೆ ಕರೆದೊಯ್ಯುವ ಸತ್ಯಮಾರ್ಗದಲ್ಲಿ ಹೆಜ್ಜೆ ಹಾಕುವುದು, ಪ್ರಕಾಶಿಸುವ ಸತ್ಯ ವನ್ನು ಕಂಡುಹಿಡಿಯುವುದು ಅವರ ಗುರಿಯಾಗಿತ್ತು. ಗಾಂಧೀಜಿ ಮನಸ್ಸಿ ನಲ್ಲಿ, ಮಾತಿನಲ್ಲಿ, ಕ್ರಿಯೆಯಲ್ಲಿ ಸತ್ಯವಿರಬೇಕು ಎನ್ನುತ್ತಿದ್ದರು. ಅವರ ದೃಷ್ಟಿಯಲ್ಲಿ ಸತ್ಯಕ್ಕಿಂತ ಶ್ರೇಷ್ಠವಾದದ್ದು ಬೇರೆ ಯಾವುದೂ ಇಲ್ಲ. ಸದ್ಗು ಣಗಳೇ ಸತ್ಯದ ರೂಪ, ಈಶ್ವರನೇ ಸತ್ಯರೂಪ, ಸತ್ಯಾನ್ವೇಷಣೆಯೇ ನಿಜ ವಾದ ಭಕ್ತಿ, ಸತ್ಯಾನ್ವೇಷಿಯೇ ಮಹಾಜ್ಞಾನಿ, ಮಹಾಸಾಹಸಿ ಎಂದು ಅವರು ಧೃಡವಾಗಿ ನಂಬಿದ್ದರು.

ಗಾಂಧೀಜಿ ಸತ್ಯದ ಆರಾಧಕರು ಮತ್ತು ಅದರ ಅವಿಚ್ಛಿನ್ನ ಅನುಯಾಯಿ. ಸತ್ಯದ ಸಂಪೂರ್ಣ ಸತ್ತ್ವ ಮತ್ತು ಅದರ ವ್ಯಾಪ್ತಿ ಚಿಕ್ಕ ವಯಸ್ಸಿನಲ್ಲಿ ಅವರಿಗೆ ಅರ್ಥವಾಗದಿದ್ದರೂ ಅವರು ಸತ್ಯಕ್ಕೆ ಮನಸೋತರು. ಸುಳ್ಳು ಹೇಳಿ

ಷಂತೆ ಎಚ್ಚರಿಕೆ ವಹಿಸಿದರು. ದೇವರೊಡನೆ ಮಾನವರ ಸಮ್ಮಿಳನವೇ ಸತ್ಯ ಎಂದು ಘೋಷಿಸಿದ ಗಾಂಧೀಜಿಯವರ ರಕ್ತದಲ್ಲಿ ಸತ್ಯ ರಕ್ತವಾಗಿ, ಉಸಿರಿನಲ್ಲಿ ಉಸಿರಾಗಿ, ಕಣ್ಣಿನಲ್ಲಿ ಜ್ಯೋತಿಯಾಗಿ ಅವರ ಆತ್ಮದಲ್ಲಿ ಅಮರವಾಗಿತ್ತು. ತಮ್ಮ ಆತ್ಮಕಥೆಯನ್ನು ಅವರು 'ಸತ್ಯಾನ್ವೇಷಣೆ' ಎಂದು ಕರೆದಿದ್ದಾರೆ. 'ಸತ್ಯದ ಮಾರ್ಗವೇ ದೇವರ ಮಾರ್ಗ, ಸತ್ಯವೇ ಜಯಿಸುತ್ತದೆ', ಎಂದು ಸಾರುವ ಉಪನಿಷತ್ತಿನ ವಾಕ್ಯ ಗಾಂಧೀಜಿಯವರಿಗೆ ತುಂಬಾ ಅಚ್ಚುಮೆಚ್ಚು. ಸತ್ಯವನ್ನು ಹುಡುಕುವುದರಲ್ಲಿ ಆಸಕ್ತನಾಗಿ, ಸತ್ಯಮಾರ್ಗದಲ್ಲೇ ಹೆಜ್ಜೆ ಹಾಕುವ ಮಾನವವಿಜ್ಞಾನಿ ಭೌತ ಪ್ರಪಂಚದ ಸಮಸ್ಯೆಗಳನ್ನು ಶೋಧಿಸಲು ಸಾಧ್ಯ ಎಂದರವರು. 'ಸತ್ಯಮೇವ ಜಯತೇ' ಶ್ಲೋಕವನ್ನು ಅವರು ಪ್ರತಿನಿತ್ಯ ಭಜನೆಯಲ್ಲಿ ಸೇರಿಸಿಕೊಂಡು ಹೇಳುತ್ತಿದ್ದರು. ಸತ್ಯದ ದರ್ಶನ ಪಡೆಯುವ ಆಸೆಯಲ್ಲದೆ ಬೇರೆ ಯಾವ ಆಸೆಯೂ ಅವರಿಗಿರಲಿಲ್ಲ. ಅವರು ಅನೇಕರಿಗೆ ಸಾಕ್ಷಾತ್ಕಾರ ಮಾಡಿಸಿ ಸತ್ಯದ ಮೂಲಕ ಸೌಂದರ್ಯವನ್ನು ಕಂಡರು. ಅವರ ನಂದಾದೀಪವಾದ ಸತ್ಯಸಿದ್ಧಿ, ಸತ್ಯದ ಪರಾಕಾಷ್ಠತೆಯ ಅಂಶವನ್ನು ಇಂದಿನ ಯುವಜನಾಂಗ ಆಚರಣೆಗೆ ತಂದುಕೊಳ್ಳುವುದು ಅವಶ್ಯಕ.

ಸತ್ಯಸಾಧನೆಗಾಗಿ, ಸ್ವಾತಂತ್ರ್ಯ ಸಂಪಾದನೆಗಾಗಿ ಗಾಂಧೀಜಿ ಸತ್ಯಾಗ್ರಹ ವೆಂಬ ಒಂದು ಮುಖ್ಯ ಅಸ್ತ್ರ, ಮಾನವೀಯ ಮಾರ್ಗವನ್ನು ಕಂಡು ಹಿಡಿದರು. ಎದುರಾಳಿಗಳನ್ನು ತುಳಿದು ನಾಶಪಡಿಸುವುದಲ್ಲ, ಅವರನ್ನು ಪರಿವರ್ತಿಸುವುದೇ ಸತ್ಯಾಗ್ರಹದ ಗುರಿ. ದುಷ್ಟಶಕ್ತಿಗಳನ್ನು ಸೋಲಿಸಿ, ಪ್ರಾಮಾಣಿಕತೆಯಿಂದ, ಔದಾರ್ಯದಿಂದ, ಶತ್ರುಗಳ ಮನಸ್ಸು, ಹೃದಯವನ್ನು ಗೆಲ್ಲುವ ಸಾಮರ್ಥ್ಯ ಸತ್ಯಾಗ್ರಹಕ್ಕಿದೆ. ಜೀವನದಲ್ಲಿ ಸತ್ಯ, ಪ್ರೇಮ, ಅಹಿಂಸೆಗಳ ಉಪಯೋಗವೇ ಸತ್ಯಾಗ್ರಹದ ಸಾರ ಸ್ವರೂಪ. ಸತ್ಯಾಗ್ರಹವೆಂದರೆ ಪೂರ್ಣ ಸಮರ್ಪಣೆ, ತಾಳ್ಮೆ, ಶ್ರದ್ಧೆಯ ಪರಮಾವಧಿ ಮತ್ತು ಸವಿನಯ ಪ್ರತೀಕಾರದ ಮಾರ್ಗ. ಸತ್ಯಾಗ್ರಹ ಆಯುಧ ಹೇಡಿತನದ ಮಾರ್ಗವಲ್ಲ, ವೀರಯೋಧನ ಸಾಧನ. ಸತ್ಯನಿಷ್ಠೆ, ಹಠ, ಸತ್ಯಾಗ್ರಹಿಗೆ ಅಗಾಧ ಶಕ್ತಿಯನ್ನು ಕೊಡುತ್ತದೆ. ಈ ಶಕ್ತಿಗೆ ಸತ್ಯಾಗ್ರಹವೆಂದು ಹೆಸರು. ಆತ್ಮಬಲವುಳ್ಳ ಧೀರರಿಗೆ ಆಧ್ಯಾತ್ಮಿಕ ಬಲ ವುಳ್ಳವರಿಗೆ, ಅಹಿಂಸಾಮಾರ್ಗವನ್ನು ತುಳಿಯುವವರಿಗೆ ಮಾತ್ರ ಸತ್ಯಾಗ್ರಹ ಎಂದು ಗಾಂಧಿ ಸ್ಪಷ್ಟಪಡಿಸಿದರು.

ಗಾಂಧೀಜಿ ಅನುಸರಿಸಿದ ಅಹಿಂಸಾತ್ಮಕವಾದ ಚಳುವಳಿ ರಾಜಕೀಯ ಕ್ರಾಂತಿಯ ಇತಿಹಾಸದಲ್ಲೇ ಒಂದು ನವೀನ ವಿಧಾನ. ಇಚ್ಛಾಪೂರ್ವಕ ಕಷ್ಟ ಸಹನೆಯೇ ಚೈತನ್ಯ ಪೂರ್ಣ ಅಹಿಂಸೆ. ಅವರು ಬೋಧಿಸಿದ ಮಹತ್ತ್ವವಾದ ಮೂಲಭೂತ ಸ್ವರೂಪದ ತತ್ತ್ವ ಅಹಿಂಸೆಯೇ ಆಗಿದೆ. ಅತ್ಯಂತ ಪ್ರಾಚೀನವಾದ ಅಹಿಂಸಾತತ್ತ್ವವನ್ನು ಅವರು ಪುನರುಜ್ಜೀವನಗೊಳಿಸಿದರು. ಬಾಪು ಅಹಿಂಸೆಯ ಬೆಳವಣಿಗೆಗೆ ಆತ್ಮನಿಗ್ರಹ ಅಗತ್ಯವೆಂದರು. ಅಹಿಂಸೆ ಅಥವಾ ಹಿಂಸೆ ಮಾಡದಿರುವುದು ಮಾನವನ ಅತ್ಯಂತ ದೊಡ್ಡ ಕರ್ತವ್ಯ. ಇದು ಮಹಾ ಭಾರತದ ಮಹತ್ತರವಾದ ನಾಣ್ಣುಡಿಯಾಗಿದೆ. ಅಹಿಂಸೆಯನ್ನು ಜೀವನದಲ್ಲಿ ಕಾರ್ಯರೂಪದಲ್ಲಿ ಉಪಯೋಗಿಸುವುದೇ ಸತ್ಯಾಗ್ರಹ. ಅಹಿಂಸೆಯೆಂದರೆ ಸರ್ವವ್ಯಾಪಿಯಾದ ಪ್ರೇಮ. ಸತ್ಯದಿಂದ ಹುಟ್ಟಿರುವ ಅಹಿಂಸೆ ಮಾನವನ ಸಾಧನೆಯಾಗಬೇಕು. ಹಿಂಸೆ ಮತ್ತು ಬಲಪ್ರಯೋಗದಿಂದ ಏನನ್ನು ಸಾಧಿಸುವುದೂ ಸಾಧ್ಯವಿಲ್ಲ ಎನ್ನುತ್ತಿದ್ದ ಗಾಂಧೀಜಿಯವರ ದೃಷ್ಟಿಯಲ್ಲಿ ಕೊಲ್ಲುವುದು ಮಾತ್ರ ಹಿಂಸೆಯಾಗಿರಲಿಲ್ಲ- ಕೆಟ್ಟಮಾತು, ದ್ವೇಷ, ಕೆಟ್ಟ ಆಲೋಚನೆ, ಅವಶ್ಯಕತೆಗಿಂತ ಹೆಚ್ಚಾಗಿ ತಿನ್ನುವುದೂ ಹಿಂಸೆಯೇ. ಭಿನ್ನತೆಯಲ್ಲಿ ಸಾಮರಸ್ಯ, ದ್ವೇಷದಲ್ಲಿ ಪ್ರೇಮ, ಭೇದದಲ್ಲಿ ಐಕ್ಯತೆ ಇವೆಲ್ಲಾ ಹಿಂಸೆಯನ್ನು ನಾಶಗೊಳಿಸುವ ಗಾಂಧಿ ವಿಧಾನಗಳಾಗಿದ್ದವು. ಬಲಪ್ರಯೋಗ ಅಥವಾ ಹಿಂಸೆಯಿಂದ ಬದುಕುವ ಮಾನವ ಪ್ರಾಣಿಗಿಂತ ಕೀಳು. ಬಲಪ್ರಯೋಗದಿಂದ ಹೋರಾಡದೆ, ಒಳ್ಳೆಯ ಮನೋಭಾವದಿಂದ, ಪ್ರೀತಿ ಸ್ನೇಹ, ಸೌಹಾರ್ದ ಮುಂತಾದ ಮಾನವೀಯ ರೀತಿಗಳಲ್ಲಿ ಜಗಳಗಳನ್ನು ಬಗೆಹರಿಸಿಕೊಳ್ಳಬೇಕಲ್ಲದೆ, ಜಗಳವಾಡುತ್ತಾ ಮೇಲೆ ಬಿದ್ದು ಕಚ್ಚಾಡುವ ಮನುಷ್ಯನಿಗೂ ನಾಯಿಗೂ ಯಾವ ವ್ಯತ್ಯಾಸವೂ ಇಲ್ಲವೆಂದು ಗಾಂಧೀಜಿ ಹೇಳುತ್ತಿದ್ದರು. 'ಮಿತಿಯಿಲ್ಲದ ಶಾಖವನ್ನು ಉತ್ಪಾದನೆ ಮಾಡುವ ಶಕ್ತಿಯುಳ್ಳ ಈ ಅಹಿಂಸಾ ತತ್ತ್ವದ ಶಾಖಕ್ಕೆ ಅತ್ಯಂತ ಕಠಿಣವಾದ ಹೃದಯವೂ ಕರಗುವುದು' ಎಂದು ಒಮ್ಮೆ ಅಮೇರಿಕಾ ನ್ಯೂಯಾರ್ಕ್ ಟೈಮ್ಸ್ ಪತ್ರವ್ಯವಹಾರಿಗಳು ಗಾಂಧೀಜಿಯವರನ್ನು ಸಂದರ್ಶಿಸಿ ಪ್ರಪಂಚಕ್ಕೇ ಒಂದು ಸಂದೇಶ ನೀಡುವಂತೆ ಕೇಳಿದಾಗ ಹೇಳಿದರು. ಅಹಿಂಸಾತತ್ತ್ವದಿಂದ ಯಾವ ಪರಿಹಾರವೂ ಸಿಕ್ಕದು ಎಂದು ಹೇಳಿಕೊಳ್ಳುವಂತಹ ಒಂದು ಪರಿಸ್ಥಿತಿಯೂ ಅವರಿಗುಂಟಾಗಿರಲಿಲ್ಲ. ಅಹಿಂಸೆ

ಮಾನವನೊಳಗಿನ ದೇವಬಲ, ಆತ್ಮಬಲ, ಅವನ ಉಪಯೋಗದ ಬತ್ತಳಿಕೆಯಲ್ಲಿರುವ ಮಹಾಶಕ್ತಿ, ಕ್ರಿಯಾಶಕ್ತಿ.

ಸ್ವಾತಂತ್ರ್ಯ ಹೋರಾಟದಲ್ಲಿ ವಿದೇಶಿಯರ ಮೇಲೆ ಬಲಪ್ರಯೋಗ ಮಾಡಬಾರದೆಂದು ಗಾಂಧೀಜಿ ಜನತೆಯನ್ನು ಬೇಡಿಕೊಂಡರು. ಹಿಂಸೆಗೆ ಪ್ರತಿಹಿಂಸೆ, ಶಸ್ತ್ರಕ್ಕೆ ಪ್ರತಿಶಸ್ತ್ರ, ವಿನಾಶಕ್ಕೆ ಪ್ರತಿ ವಿನಾಶ ಇದೇ ಸರಿಯಾದ ಮಾರ್ಗ ಎಂದು ಎಲ್ಲರೂ ತಿಳಿದಿದ್ದಾಗ, ಬಾಪೂಜಿ ಸತ್ಯ, ಅಹಿಂಸೆ, ಸತ್ಯಾಗ್ರಹ ತತ್ತ್ವಗಳನ್ನು ನೀಡಿ ಭಾರತದ ಜನತೆಯನ್ನು ಉದ್ಧಾರ ಮಾಡಿದರು. ಸತ್ಯ, ಅಹಿಂಸೆಗಳಿಗಿಂತ ಪ್ರಾಚೀನವಾದ ವಸ್ತು ಮತ್ತೊಂದಿಲ್ಲ. ಅವುಗಳ ಅನುಷ್ಠಾನದಿಂದ ವ್ಯಕ್ತಿ ಮನಸ್ಸು, ಹೃದಯ ವಿಕಾಸವಾಗುವುದು ಖಂಡಿತ. ತಮ್ಮಂತೆ ಅಹಿಂಸೆ, ಅನಾಸಕ್ತಿ, ಬ್ರಹ್ಮಚರ್ಯೆ, ವಿಶ್ವಪ್ರೇಮಗಳನ್ನು ಯಾವ ಮನುಷ್ಯನೇ ಆಗಲಿ ಆಚರಿಸಿ ಸತ್ಯಸ್ವರೂಪದ ದರ್ಶನ ಪಡೆಯಲು ಸಾಧ್ಯ. ಸತ್ಯ, ಅಹಿಂಸೆ ವ್ಯಕ್ತಿಗಳು ಅನುಸರಿಸುವ ತತ್ತ್ವಗಳಾಗದೆ ಸಮಾಜ, ರಾಷ್ಟ್ರಗಳೂ ಅನುಷ್ಠಾನಕ್ಕೆ ತರುವಂತಾಗಬೇಕು. ಅಹಿಂಸೆಯೆಂಬ ಸಾಧನದಿಂದ ಸತ್ಯದ ಸಿದ್ಧಿ ಪಡೆಯಲು ಸಾಧ್ಯ. ಸತ್ಯವನ್ನು ಸಾಧಿಸಲು ಅಹಿಂಸಾಮಾರ್ಗದ ಆಚರಣೆ ಅವಶ್ಯಕ ಎನ್ನುತ್ತಿದ್ದ ಬಾಪೂಜಿಗೆ ಇಡೀ ಜಗತ್ತನ್ನು ಮುಂದಿಟ್ಟಿದ್ದರೂ ಅವರು ಸತ್ಯ, ಅಹಿಂಸೆಯನ್ನು ಬಿಡುತ್ತಿರಲಿಲ್ಲ.

ಮಹಾತ್ಮ ಗಾಂಧೀಜಿ ಉನ್ನತ ಮಾನವ ಗುಣಗಳನ್ನು ಹೊಂದಿ ಎಲ್ಲರ ಪ್ರೀತಿಗೆ ಪಾತ್ರರಾದ ಪ್ರಮುಖ ಧಾರ್ಮಿಕ ವ್ಯಕ್ತಿಯಾಗಿದ್ದರು. ರಾಜಕಾರಣೀ ಪುರುಷನ ವೇಷ ತೊಟ್ಟಿದ್ದರೂ ಅಂತರಂಗದಲ್ಲಿ ಅವರು ಧರ್ಮಜೀವಿ ಮತ್ತು ಧಾರ್ಮಿಕ ತತ್ತ್ವಗಳ ಮೇಲೇ ಹೆಜ್ಜೆ ಹಾಕಿದರು. ಅವರ ಪಾಲಿಗೆ ರಾಜಕೀಯ ಕ್ಷೇತ್ರವೆಂದರೆ ಅಸತ್ಯ, ಅಧರ್ಮ, ಅನೀತಿಗಳ ತೌರಾಗಿರಲಿಲ್ಲ. ರಾಜಕೀಯಕ್ಕೂ, ಧರ್ಮಕ್ಕೂ ನಿಕಟವಾದ ಸಂಬಂಧವಿದೆ. ಇವೆರಡರಲ್ಲಿ ಭಿನ್ನತೆಯೇ ಇಲ್ಲ. ಧರ್ಮವಿಲ್ಲದ ರಾಜಕೀಯ ಮರಣಪಾಶವಿದ್ದಂತೆ. ಯಾತಕ್ಕೆಂದರೆ ಧರ್ಮರಹಿತ ರಾಜಕೀಯ ಆತ್ಮವಿಲ್ಲದ ಜಡದೇಹದಂತೆ ಎನ್ನುತ್ತಿದ್ದರು ಬಾಪೂಜಿ. ರಾಜಕೀಯ ಕಾರ್ಯಗಳಿಗೆ ಅವರು ಆಧ್ಯಾತ್ಮಿಕ ನೆಲೆಯನ್ನೊದಗಿಸಿ, ಧರ್ಮ ಮತ್ತು ರಾಜಕೀಯವನ್ನು ತನ್ನ ಬದುಕಿನಲ್ಲಿ ಒಂದಾಗಿಸಿ ಆಚರಿಸಿದರು. ಸತ್ಯ, ಅಹಿಂಸೆ ಧರ್ಮದ ತಿರುಳು. ಮಾನವೀಯ ಧರ್ಮ

ಮಾನವನ ಸಕಲ ಕರ್ಮಗಳನ್ನೂ ಸುತ್ತುವರಿಯಬೇಕು. ಆಗ ರಾಜಕೀಯದಲ್ಲೂ ಭಗವಂತನ ರಾಜ್ಯ ಸ್ಥಾಪನೆಯಾಗುವುದು ಖಂಡಿತ ಎಂದವರು ಹೇಳುತ್ತಿದ್ದರು.

ಧರ್ಮನಿಷ್ಠೆಯುಳ್ಳ, ಧರ್ಮಸುಧಾರಕರಾದ, ಉನ್ನತಮಟ್ಟದ ಧರ್ಮೋಪದೇಶಕರಾದ ಗಾಂಧೀಜಿ ಸತ್ಯ, ಅಹಿಂಸಾ ಧರ್ಮಗಳ ತತ್ತ್ವಗಳನ್ನು ಸತ್ಯವಾಗಿ, ಸರಳವಾಗಿ, ಶುದ್ಧವಾಗಿ ಅನುಸರಿಸಿ, ಬದುಕಿನಲ್ಲಿ ಛಲವಿಟ್ಟು ಪ್ರೀತಿ ಸೌಹಾರ್ದತೆಯಿಂದ ಬಾಳಬೇಕೆಂದು ಜಗತ್ತಿಗೆಲ್ಲಾ ಸಾರಿದರು. ಹಿಂದೂ ಧರ್ಮವನ್ನು ಶ್ರದ್ಧೆಯಿಂದ ಅನುಸರಿಸುತ್ತಿದ್ದರೂ ಇತರ ಧರ್ಮಗಳಾದ ಕ್ರೈಸ್ತ, ಇಸ್ಲಾಂಗಳಲ್ಲಿ ಅವರಿಗೆ ಗೌರವವಿತ್ತು. ವಿವಿಧ ಧರ್ಮಗಳು ಒಂದೇ ವೃಕ್ಷದ ಅಸಂಖ್ಯಾತ ಎಲೆಗಳಂತೆ ಸ್ವಧರ್ಮ ಪಾಲಿಸುತ್ತಾ ಒಂದೇ ಮಾತೆಯ ಮಕ್ಕಳಂತೆ ಬಾಳಬೇಕೆಂದು ಗಾಂಧೀಜಿ ಆಶಿಸಿದರು. ಜೀಸಸ್ಸಿನ ಜೀವನ ಹಾಗೂ ಅಹಿಂಸೆಯ ಮೂಲತತ್ತ್ವವನ್ನು ಉನ್ನತ ಮಟ್ಟದಲ್ಲಿ ಎತ್ತಿ ಹಿಡಿಯುವ ಆತನ ಕೆಲಸಗಳನ್ನೂ, ದೈವಜ್ಞ ಮಹಮೂದನ ತೀವ್ರನಂಬಿಕೆ, ಕಾರ್ಯರೂಪದ ದಕ್ಷತೆ, ಇಸ್ಲಾಂ ಧರ್ಮ ಒತ್ತಿಹೇಳಿರುವ ಅದ್ಭುತ ಸತ್ಯಗಳು, ದೇವರ ನಿರಂಕುಶ ಪ್ರಭುತ್ವದಲ್ಲಿದ್ದ ನಂಬಿಕೆ, ಜೀವನದ ಸರಳತೆ, ಭ್ರಾತೃತ್ವದ ಭಾವನೆಗಳನ್ನು ಬಹಳವಾಗಿ ಮೆಚ್ಚಿಕೊಂಡ ಬಾಪೂಜಿ ಇವುಗಳನ್ನೆಲ್ಲ ಹಿಂದೂಧರ್ಮಕ್ಕೆ ತಳಹದಿಯನ್ನಾಗಿ ಸ್ವೀಕರಿಸಿದರು. ಹಿಂದೂಧರ್ಮವನ್ನು ನಿಷ್ಠೆಯಿಂದ ಅವರು ಅನುಸರಿಸುತ್ತಿದ್ದರೂ ಆ ಧರ್ಮದಲ್ಲಿರುವ ದೋಷಗಳನ್ನು ಪ್ರೋತ್ಸಾಹಿಸಲಿಲ್ಲ. ಆತ್ಮವನ್ನು ಶುದ್ಧೀಕರಿಸುವುದು ಧರ್ಮದ ಗುರಿ. ಸತ್ಯ ನ್ಯಾಯಕ್ಕಾಗಿ ಶ್ರಮಿಸಬೇಕೆಂದು ಜಗತ್ತಿಗೇ ಸಂದೇಶ ನೀಡಿದ ಗಾಂಧೀಜಿ ಧಾರ್ಮಿಕ ದ್ವೇಷಗಳಿಗೆ ಅಂತ್ಯ ಕಾಣಿಸಲು, ಮಾನವ ಹಿಂಸಾವೃತ್ತಿಯನ್ನು ನಿಗ್ರಹಿಸಲು ಹೋರಾಟ ನಡೆಸಿದರು. ಅವರು ಸತ್ಯ ಅಹಿಂಸೆಗಳನ್ನು ಧಾರ್ಮಿಕ ರಂಗದಿಂದ ಸಾಮಾಜಿಕ ರಾಜಕೀಯ ರಂಗಗಳಿಗೆ ವಿಸ್ತರಿಸಿ, ಅಹಿಂಸಾ ತತ್ತ್ವವನ್ನು ಸಾಮೂಹಿಕವಾಗಿ ಆಚರಿಸುವ ರೀತಿಯನ್ನು ಜನರಿಗೆ ತೋರಿಸಿಕೊಟ್ಟರು. ಧರ್ಮಸಹಿಷ್ಣುತೆ ಎನ್ನುವ ಪದವನ್ನು ಅವರು ಬಹುವಾಗಿ ಮೆಚ್ಚಿಕೊಳ್ಳದಿದ್ದರೂ ಅದಕ್ಕಿಂತ ಉತ್ತಮವಾದ ಪದ ಮತ್ತೊಂದಿಲ್ಲ ಎನ್ನುತ್ತಿದ್ದರು. ಸ್ವಧರ್ಮದಂತೆಯೇ ಇತರ ಧರ್ಮಗಳಿಗೂ ಸಮಾನ ಗೌರವ ನೀಡಬೇಕೆಂದು ಗಾಂಧೀಜಿ ಸ್ಪಷ್ಟ

ಪಡಿಸಿದರು. ಅವರು ಭಾರತೀಯ ಅತ್ಯುತ್ತಮ ಮೌಲ್ಯಗಳಲ್ಲಿ ಅಚಲವಾದ ಶ್ರದ್ಧೆಯನ್ನಿಟ್ಟು, ಪ್ರಪಂಚದ ಸರ್ವ ಧರ್ಮಗಳ ಸಾರವನ್ನೆಲ್ಲಾ ತೆಗೆದು ಕೊಂಡು, ಮಾನವ ಧರ್ಮದ ಪ್ರತಿಷ್ಠಾಪನೆಗೆ ಹೆಣಗಿದರು.

ಸೇವಾಧರ್ಮವೇ ಗಾಂಧೀಜಿಯವರ ಪರಮಧರ್ಮವಾಗಿತ್ತು. ಅವರ ಧಾರ್ಮಿಕ ಸಹಿಷ್ಣುತೆ ಅಸಾಧಾರಣವಾಗಿತ್ತು. ಪ್ರತಿಯೊಬ್ಬರೂ ತಮ್ಮ, ತಮ್ಮ ಧರ್ಮಗಳನ್ನು ಶ್ರದ್ಧಾಪೂರ್ವಕವಾಗಿ ಆಚರಿಸಬೇಕು. ಎಲ್ಲ ಮತ, ಧರ್ಮಗಳೂ ಮೂಲತತ್ತ್ವಗಳಲ್ಲಿ ಒಂದೇ ಆಗಿವೆ. ಪರಮಾತ್ಮನ ಶೋಧನೆ ಯಲ್ಲಿ ತೊಡಗಿ ಆತನ ಪ್ರತ್ಯಕ್ಷ ದರ್ಶನ ಮಾಡಿಸುವುದೇ ಎಲ್ಲ ಧರ್ಮಗಳ ಗುರಿ. ಎಲ್ಲ ಧರ್ಮಗಳಲ್ಲಿ ಸತ್ಯಾಂಶವಿದ್ದರೂ ಯಾವ ಧರ್ಮವೂ ಪರಿಪೂರ್ಣ ವಲ್ಲ ಎನ್ನುತ್ತಿದ್ದ ಬಾಪೂಜಿಯವರಿಗೆ ಸರ್ವಧರ್ಮಸಮಾನತ್ವದಲ್ಲಿ ಅಚಲ ವಾದ ನಂಬಿಕೆಯಿತ್ತು. ಆಯಾ ಧರ್ಮ ಅವರವರಿಗೆ ಶ್ರೇಷ್ಠ, ಆ ಧರ್ಮವೇ ಅವರಿಗೆ ಮುಕ್ತಿ ದೊರಕಿಸಿಕೊಡುವುದು. ಧರ್ಮವು ಜೀವನವನ್ನೆಲ್ಲಾ ಹತೋಟಿಯಲ್ಲಿಟ್ಟು ಆಳಬೇಕು, ಧರ್ಮವು ನಾಶವಾದರೆ ಎಲ್ಲವೂ ನಾಶ ವಾದಂತೆ ಎಂದು ಅವರು ಸ್ಪಷ್ಟಪಡಿಸಿದರು. ತ್ರಿಕಾಲದಲ್ಲೂ ಸತ್ಯರೂಪವಾದ, ಪುರುಷಾರ್ಥಗಳಾದ ಅರ್ಥ, ಧರ್ಮ, ಕಾಮ, ಮೋಕ್ಷ ಇವುಗಳನ್ನು ಸಾಧಿಸ ಬೇಕೆಂದು ಬೋಧಿಸುವ ಸನಾತನಧರ್ಮವನ್ನೇ ಅವರು ಅನುಸರಿಸುತ್ತಿದ್ದರು. ಧರ್ಮವಿರಹಿತವಾದ ರಾಜಕಾರಣ ಸಂಪೂರ್ಣ ಹೊಲಸಿನ ಮುದ್ದೆ. ರಾಜ ಕಾರಣದಲ್ಲೂ ದೈವೀಸಾಮ್ರಾಜ್ಯವನ್ನು ಸ್ಥಾಪಿಸಬೇಕು, ಸತ್ಯಕ್ಕಿಂತ ಮಿಗಿ ಲಾದ ಧರ್ಮ ಮತ್ತೊಂದಿಲ್ಲ. ಧರ್ಮ ಎಂದರೆ ಸತ್ಯ ಎನ್ನುತ್ತಿದ್ದ ಗಾಂಧೀಜಿ ಎಲ್ಲ ಧರ್ಮಗಳನ್ನೂ ಸಮದೃಷ್ಟಿಯಿಂದ ಕಂಡರು.

ಗಾಂಧೀಜಿ ಅನೇಕ ಧರ್ಮಗ್ರಂಥಗಳ ಅಧ್ಯಯನ ನಡೆಸಿದರು. ಸತತವಾದ ಧಾರ್ಮಿಕ ಅಭ್ಯಾಸದಿಂದ ಅವರ ಆತ್ಮಸಂಶೋಧನೆಯೂ ಹೆಚ್ಚಿತು. ಹಿಂದೂ ಧರ್ಮವನ್ನು ಅವರು 'ಎಲ್ಲ ಧರ್ಮಗಳ ಉತ್ತಮ ಗುಣಗಳ ಸಮಾವೇಶವಾಗಿ ರುವ ಮಾನವಧರ್ಮ' ಎನ್ನುತ್ತಿದ್ದರು. ಹಿಂದೂಧರ್ಮದ ಮೂಲಭೂತ ಸಿದ್ಧಾಂತಗಳಾದ ಸತ್ಯ, ಅಹಿಂಸೆ, ಬ್ರಹ್ಮಚರ್ಯಗಳನ್ನು ಬಾಪು ಶ್ರದ್ಧೆ ಯಿಂದ ಅನುಸರಿಸಿದರು. ಬ್ರಹ್ಮಚರ್ಯವನ್ನು ಸಂಪೂರ್ಣವಾಗಿ ಪಾಲನೆ ಮಾಡಿದಾಗ ಅವರ ವಯಸ್ಸು ನಲವತ್ತು. ನಂತರ ಅವರಿಗೆ ಬ್ರಹ್ಮಚರ್ಯೆ

ಯಿಂದ ಶರೀರ ರಕ್ಷಣೆ, ಬುದ್ಧಿ ರಕ್ಷಣೆ, ಆತ್ಮರಕ್ಷಣೆ ಮಾಡಿಕೊಳ್ಳುವುದು ಸಾಧ್ಯ ಎನ್ನುವುದರ ಅನುಭವವಾಯ್ತು. ಹಿಂದೂಧರ್ಮದ ಪರಿಪೂರ್ಣತೆಯನ್ನು ತಿಳಿಸುವ ಭಗವದ್ಗೀತೆಯನ್ನು ಪ್ರತಿಯೊಬ್ಬ ಹಿಂದೂ ಅಧ್ಯಯನ ಮಾಡ ಬೇಕು. ಯಾಕೆಂದರೆ ನಮಗೆ ತಾಯಿಯಂತೆ, ಗುರುವಿನಂತಿರುವ ಗೀತೆ ನಮ್ಮ ಆಧ್ಯಾತ್ಮಿಕ ತೊಡರುಗಳನ್ನೆಲ್ಲ ಪರಿಹರಿಸುತ್ತದೆ. ಆಕೆಯ ಮಡಿಲಲ್ಲಿ ತಲೆ ಯಿಟ್ಟು ಮಲಗಿದರೆ ನಮಗೆ ಸದಾ ಕ್ಷೇಮ, ನೆಮ್ಮದಿ. ಗೀತೆ ಶಾಂತಿ, ಸಮಾ ಧಾನದ ಅಮೃತವನ್ನು ಕರೆಯುತ್ತದೆ. ಮತ್ತು ಅದು ಆಧ್ಯಾತ್ಮಿಕ ನಿಘಂಟು ಎಂದು ಗಾಂಧೀಜಿ ದೃಢವಾಗಿ ನಂಬಿದ್ದರು. ಬುದ್ಧಿವಂತರು, ಸಜ್ಜನರು, ರಾಗ ದ್ವೇಷಗಳಿಂದ ಮುಕ್ತರಾದವರು ಆಚರಿಸುವ, ಹಾಗೂ ನಮ್ಮ ಹೃದಯವನ್ನು ಮುಟ್ಟುವ ಧರ್ಮವೇ ನಿಜವಾದ ಧರ್ಮ ಎಂದು ಬಾಪೂ ಸ್ಪಷ್ಟಪಡಿಸಿದರು.

ಸಮಗ್ರ ದೃಷ್ಟಿಯುಳ್ಳ ಸತ್ಯಾಗ್ರಹ ಮತ್ತು ಸರ್ವೋದಯಗಳನ್ನು ಪ್ರತಿ ಪಾದಿಸಿದ ಗಾಂಧೀಜಿಯವರ ನಾನಾಮುಖದ ಚಟುವಟಿಕೆಗಳಿಗೆಲ್ಲಾ ನೀತಿ, ಧರ್ಮಗಳೇ ತಳಹದಿಯಾಗಿದ್ದವು. ನೀತಿ, ಧರ್ಮಗಳಲ್ಲಿ ಅವರು ಭೇದವನ್ನೆಣಿ ಸುತ್ತಿರಲಿಲ್ಲ. ನೀತಿದೃಷ್ಟಿಗೆ ಸರಿಯೆನಿಸದ ಧಾರ್ಮಿಕ ಆಚರಣೆಗಳನ್ನಾಗಲೀ, ವಿಚಾರಗಳನ್ನಾಗಲೀ ಅವರು ಸ್ವೀಕರಿಸುತ್ತಿರಲಿಲ್ಲ. ನೀತಿ ಬಿಟ್ಟು ಧರ್ಮವೆಂಬು ದಿಲ್ಲ. ನೀತಿ, ಧರ್ಮಗಳು ಪರಸ್ಪರಾವಲಂಬಿಗಳು, ಅವು ಪ್ರತ್ಯೇಕಿಸಲಾರದಷ್ಟು ಪರಸ್ಪರ ಹೊಂದಿಕೊಂಡಿವೆ. ಧರ್ಮ ಭೂಮಿಯಲ್ಲಿ ಬಿತ್ತಿದ ಬೀಜದಂತಾದರೆ ನೀತಿ ನೀರು. ನೀತಿಯ ಆಧಾರ ತಪ್ಪಿದರೆ ಮಾನವ ಧರ್ಮಭ್ರಷ್ಟನಾಗುತ್ತಾನೆ. ನಿಷ್ಕಾಮಸೇವೆ ಮಾಡುತ್ತಾ ನಿರ್ಮಲ ಜೀವನ ನಡೆಸುವವರು ನೀತಿವಂತರು ಎಂದು ಬಾಪೂಜಿ ನೀತಿ ಮತ್ತು ಧರ್ಮವನ್ನು ಕುರಿತು ಸಂದೇಶ ನೀಡಿ ನೈತಿಕ ದೃಷ್ಟಿಯಲ್ಲಿಯೂ ಆತ ಮಹಾಪುರುಷರೆನಿಸಿಕೊಂಡರು.

ಗಾಂಧೀಜಿ ದೇವರನ್ನು ಸಂಪೂರ್ಣವಾಗಿ ನಂಬಿದ್ದರು. ಚೈತನ್ಯಮಯವಾದ ದೈವಶಕ್ತಿ ಎಲ್ಲ ಶಕ್ತಿಗಳಿಗಿಂತ ಹೆಚ್ಚು. ಭಗವಂತ ಅಗೋಚರ, ಸರ್ವಜ್ಞ, ಸರ್ವಸಮರ್ಥ, ಅದ್ವಿತೀಯ, ಮಹಾಮಹಿಮ, ಕಾಲಾತೀತ, ನಿರ್ವಿಕಾರ, ನಿಷ್ಕಲಂಕ, ನಿತ್ಯ, ಶಾಶ್ವತ, ಬದುಕಿನ ಸತ್ವ, ಜೀವಾಳ, ನಿರ್ಗುಣ, ಸರ್ವಶಕ್ತಿ ವಂತ, ನಿರಾಕಾರ, ಅಜ್ಞೇಯ, ಅಜ್ಞಾತ, ಅಭೇದ್ಯ, ಏಕ ಆದರೂ ಅನೇಕ. ದೇವರು ಒಬ್ಬ ವ್ಯಕ್ತಿಯಲ್ಲ, ಅವನನ್ನು ನಾಶಮಾಡಲು ಯಾರಿಂದಲೂ ಸಾಧ್ಯ

ವಿಲ್ಲ. ಅವನೇ ಜೀವನ, ಸತ್ಯ, ಬೆಳಕು, ಪ್ರೇಮ, ಪರಮ ಪುರುಷಾರ್ಥ, ಅಭಯ, ಜ್ಞಾನ, ಚೈತನ್ಯಗಳ ಉಗಮಸ್ಥಾನ ಎಂದು ದೃಢವಾಗಿ ಗಾಂಧೀಜಿ ತಿಳಿದುಕೊಂಡಿದ್ದರು. ದೇವರು ನಮ್ಮೊಳಗೆ, ನಿಮ್ಮೊಳಗೆ, ಎಲ್ಲರಲ್ಲಿಯೂ ಇರುವನು. ದೇವ ಒಬ್ಬನಾದರೂ ಅವನನ್ನು ಅಸಂಖ್ಯಾತ ಹೆಸರುಗಳಿಂದ ಕರೆಯುತ್ತೇವೆ. ಮಾನವ ದೇವರ ಅಂಶ, ಭಗವಂತನ ಪ್ರತಿಬಿಂಬ. ಈ ಜಗತ್ತಿನ ಸರ್ವಾಧಿಕಾರಿ ಈಶ್ವರನೇ. ಅವನ ಕೃಪೆಗೆ ನಂಬಿಕೆಯೂ, ಭಕ್ತಿಯೂ ಅವಶ್ಯಕ ಎಂದು ಸ್ಪಷ್ಟಪಡಿಸಿದ ಬಾಪೂಗೆ ಮೂರ್ತಿಪೂಜೆಯಲ್ಲೂ ನಂಬಿಕೆಯಿತ್ತು. ಭಗವಂತನ ಸಾಕ್ಷಾತ್ಕಾರವೇ ಮೋಕ್ಷ ಸರ್ವ ವ್ಯಾಪಿಯೂ, ಅವರ್ಣನೀಯವೂ ಆದ ದೈವೀಶಕ್ತಿ ಕಣ್ಣಿಗೆ ಕಾಣಿಸದಿದ್ದರೂ ಅನುಭವಕ್ಕೆ ಸಿಕ್ಕುವಂತಹುದು. ಸಮಸ್ತ ಮಾನವಸೇವೆಯಿಂದ ನಾವು ಭಗವಂತನನ್ನು ನೋಡುವುದು ಸಾಧ್ಯ. ದೇವರ ಸೃಷ್ಟಿಯಲ್ಲಿ ಮಾನವರೆಲ್ಲ ಸಮಾನರು. ಜೀವನ, ಸ್ವಾತಂತ್ರ್ಯ, ಸತ್ಯಾನ್ವೇಷಣೆ ಮುಂತಾದ ಹಕ್ಕುಗಳನ್ನು ಆತ ಎಲ್ಲರಿಗೂ ಕೊಟ್ಟಿದ್ದಾನೆ. ದೇವರು ಜೀವನದ ಮೂಲ, ಕ್ಷಮಾಶೀಲ, ಶ್ರೇಷ್ಠ, ಪರಮಶ್ರೇಯಸ್ಸು ಎನ್ನುವ ವಿಶ್ವಾಸ ಬಾಪೂಜಿಯವರದು. ಕಣ್ಣಿಲ್ಲದೆ ಭಗವಂತ ನೋಡಬಲ್ಲ, ಕಿವಿಗಳಿಲ್ಲದೆ ಕೇಳಬಲ್ಲ ಎಂದು ಘೋಷಿಸಿದ ಮಹಾತ್ಮ ಗಾಂಧೀಜಿಯವರು ದೇವರನ್ನು ಕಳ್ಳರು, ದರೋಡೆಕಾರರು, ಪಾಪಿಗಳಲ್ಲೂ ನಾವು ಕಾಣಬೇಕೆಂದರು.

ಬಾಪೂಜಿಯವರಿಗೆ ಪ್ರಾರ್ಥನೆಯೆಂದರೆ ಬಲು ಅಚ್ಚುಮೆಚ್ಚು. ಪ್ರಾರ್ಥನೆಯೆಂದರೆ ಕೇಳಿಕೆಯಲ್ಲ, ಆತ್ಮದ ನಿಡುಬಯಕೆ. ದೇವರನ್ನು ಮೆಚ್ಚಿಸುವುದಕ್ಕಲ್ಲ, ನಮ್ಮ ಹೃದಯದಲ್ಲಿ ವಿನೀತಭಾವ ಬೆಳೆಸುವುದಕ್ಕೆ, ನಮ್ಮ ನರಗಳಲ್ಲಿ ಶಕ್ತಿ ತುಂಬುವುದಕ್ಕೆ, ನಾವು ನಿರ್ಮಲರಾಗುವುದಕ್ಕೆ ಪ್ರಾರ್ಥನೆ ಅವಶ್ಯಕ. ಅದು ಎಲ್ಲ ಬಗೆಯ ಅಜ್ಞಾನವನ್ನೂ, ಭ್ರಮೆಯನ್ನೂ, ಕೆಟ್ಟ ಆಲೋಚನೆಗಳನ್ನೂ ದೂರ ತಳ್ಳುತ್ತದೆ. ಪ್ರಾರ್ಥನೆ ಧರ್ಮದ ಆತ್ಮ ಮತ್ತು ಸತ್ವ. ಅಂತರಂಗದಲ್ಲಿರುವ ಪರಮಾತ್ಮನನ್ನು ಕರೆಯುವುದು ಪ್ರಾರ್ಥನೆ. ಪರಮಾತ್ಮನಲ್ಲಿಯ ಪೂರ್ಣಧ್ಯಾನವೇ ಪ್ರಾರ್ಥನೆ ಎಂದು ಅವರು ಪ್ರಾರ್ಥನೆಯ ಮಹತ್ವವನ್ನು ಎತ್ತಿ ಹಿಡಿದರು. ಖಾಯಿಲೆ ಬಂದಾಗಲೆಲ್ಲಾ ಗಾಂಧೀಜಿಯವರಿಗೆ ರಾಮನಾಮ ಸ್ಮರಣೆಯೇ ಸಿದ್ಧೌಷಧ ಮತ್ತು ಪ್ರಾಣಬಿಟ್ಟರೂ ನಾನು ಪ್ರಾರ್ಥನೆ ಬಿಡಲಾರೆ, ಪ್ರಾರ್ಥನೆಯಿಂದಲೇ ನಾನು ಬದುಕಿರುವುದು,

ಅದಿಲ್ಲದಿದ್ದರೆ ನನಗೆಂದೋ ಬುದ್ಧಿ ಭ್ರಮಣೆಯಾಗುತ್ತಿತ್ತು. ಅದೇ ನನ್ನ ಬದುಕಿನ ಉಸಿರು. ಪ್ರಾರ್ಥನೆ ಇಲ್ಲದ ಜೀವನ ಶೂನ್ಯ. ದೇಹಕ್ಕೆ ಆಹಾರದ ಅವಶ್ಯಕತೆ ಇರುವಂತೆ ಪ್ರಾರ್ಥನೆ ಆತ್ಮದ ಬೆಳವಣಿಗೆಗೆ ಅಗತ್ಯ ಎಂದು ನಂಬಿದ್ದ ಗಾಂಧೀಜಿ ಯವರನ್ನು ಪ್ರಾರ್ಥನಾಮಂದಿರದಲ್ಲಿ ಹಂತಕನೊಬ್ಬ ಗುಂಡಿನಲ್ಲಿ ಹೊಡೆದಾಗ, ಅವರ ಕೊನೆಯ ಉಸಿರುಸಹ ರಾಮನಾಮ ಧ್ಯಾನದೊಂದಿಗೆ ಮುಕ್ತಾಯಗೊಂಡಿತು.

ಅಸ್ಪೃಶ್ಯತೆಯ ನಿವಾರಣೆ ಗಾಂಧೀಜಿ ಕೈಗೊಂಡ ಮತ್ತೊಂದು ಮಹತ್ವದ ಕಾರ್ಯ. ಅಸ್ಪೃಶ್ಯತೆಯ ಉದ್ಧಾರವೇ ಅವರ ಆದರ್ಶವಾಗಿತ್ತು, ಜೀವನದ ಗುರಿಯಾಗಿತ್ತು. ಎಲ್ಲರೂ ಸಮಾನರು ಎಂದು ಸಾರುವ ಪರಿಶುದ್ಧ ಹಿಂದೂ ಧರ್ಮಕ್ಕೆ 'ಅಸ್ಪೃಶ್ಯತೆ' ಮಹಾಕಳಂಕ, ಸೈತಾನನ ತಂತ್ರ, ದುಷ್ಟಪದ್ಧತಿ, ಅನಿಷ್ಟರೂಪ ಎಂದು ಖಂಡಿಸಿದ ಬಾಪೂಜಿ ಮುಂದಿನ ಜನ್ಮದಲ್ಲಿ ತಾವು ಅಸ್ಪೃಶ್ಯನಾಗಿ ಹುಟ್ಟಿದರೆ, ಅವರ ದುಃಖ ವೇದನೆಗಳನ್ನು ತಾವೂ ಹಂಚಿಕೊಂಡು ಅವರನ್ನು ಆ ಸ್ಥಿತಿಯಿಂದ ಬಿಡುಗಡೆ ಮಾಡಲು ಸಾಧ್ಯವಾದೀತೆಂದು ಆಶಿಸಿದರು. ಆದಿವಾಸಿ, ಹರಿಜನ, ಗಿರಿಜನರೆಂದು ಪ್ರತ್ಯೇಕಿಸದೆ ಎಲ್ಲ ಭಾರತೀಯರೊಂದಿಗೆ ಸುಖಮಯವಾದ ಜೀವನವನ್ನು ಗಾಂಧೀಜಿ ನಡೆಸಿದರು. ಅವರು ಸಮಾಜದಲ್ಲಿರುವ ವ್ಯಕ್ತಿಗಳೆಲ್ಲ ಸಮಾನರು ಎಂದು ಸಾರಿ 'ಹರಿಜನಯಾತ್ರೆ' ಕೈಗೊಂಡು ಸಮಾಜದ ಕಣ್ಣಿಗೆ ತುಚ್ಛರಾಗಿ, ಹೀನರಾಗಿ, ಅಶ್ಲೀಲರಾಗಿ ಕಾಣುತ್ತಿದ್ದ ಹರಿಜನರ ಸಮಾನ ಹಕ್ಕು ಬಾಧ್ಯತೆಗಳಿಗಾಗಿ ಶ್ರಮಿಸಿದರು. ಅಸ್ಪೃಶ್ಯತೆಯ ಹೀನಾಯ ಪರಿಸ್ಥಿತಿ, ಗಿರಿಜನರ ಅಜ್ಞಾನ ಮುಂತಾದ ಸಮಸ್ಯೆಗಳಿಗೆ ಪರಿಹಾರ ಕಂಡುಹಿಡಿದು ಅವರನ್ನು ಉದ್ಧರಿಸಿದ್ದೇ ಆ ಮಹಾಪುರುಷನ ಬದುಕಿನ ಒಂದು ಪವಾಡ ಎನ್ನಬಹುದು. ಅವರು ಅಸ್ಪೃಶ್ಯರನ್ನು 'ದೇವರ ಮಕ್ಕಳು' ಎಂದು ಕರೆದು, ಅಸ್ಪೃಶ್ಯತೆಯ ರೋಗನಿವಾರಣೆಗಾಗಿ ಅನೇಕ ಧ್ಯೇಯ, ಆದರ್ಶಗಳನ್ನಿಟ್ಟುಕೊಂಡು ರಾಜಕೀಯ ಕ್ಷೇತ್ರವನ್ನು ಪ್ರವೇಶಿಸಿದರು. ಮಾನವಕಲ್ಯಾಣ ಸಾಧನೆಗೆ ಅವಶ್ಯಕವಾದ ಅಭಿಪ್ರಾಯಗಳನ್ನೆಲ್ಲ ಅವರು ಮುಂದಿಟ್ಟರು. 'ಯಂಗ್ ಇಂಡಿಯ' ಮತ್ತು 'ಹರಿಜನ' ಗ್ರಂಥಗಳಲ್ಲಿ ಬಾಪು ತಮ್ಮ ಅಮೂಲ್ಯ ಅಭಿಪ್ರಾಯಗಳನ್ನೆಲ್ಲ ಬರೆದಿದ್ದಾರೆ. ಈ ಕೃತಿರತ್ನಗಳು ಜನತೆಯ ಮಾರ್ಗದರ್ಶಿಗಳಾಗಿ ಉಳಿಯುವುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ.

ಗಾಂಧೀಜಿ ಮಾನವ ಹಕ್ಕುಗಳ ಪ್ರವಾದಿಗಳಾಗಿದ್ದರು. ತಮ್ಮ ಬದುಕನ್ನೇ ಮಾನವಕುಲದ ಹಿತಸಾಧನೆಗಾಗಿ, ಬೇಧಭಾವಗಳನ್ನು ನಿರ್ಮೂಲಗೊಳಿಸಲು, ಸಮಾನತ್ವ ಸ್ಥಾಪಿಸಲು ಮುಡಿಪಾಗಿಟ್ಟರು. ತಮ್ಮ ರಾಜಕೀಯ ಚಟುವಟಿಕೆಗಳಲ್ಲೂ ಅವರು ಮಾನವಕುಲದ ಕಲ್ಯಾಣಕ್ಕೆ ಪ್ರಾಮುಖ್ಯತೆ ಕೊಟ್ಟರು. ಮನುಷ್ಯನನ್ನು ಮನುಷ್ಯನಂತೆಯೇ ನೋಡಬೇಕು, ಅವನ ವ್ಯಕ್ತಿತ್ವಕ್ಕೆ ಬೆಲೆಕೊಡಬೇಕು. ವ್ಯಕ್ತಿ ಶಿಸ್ತಿನಿಂದ ಚಿತ್ತಸಮತೋಲನವನ್ನು ಕಳೆದುಕೊಳ್ಳದೆ ಜೀವಿಸಬೇಕು. ಇಂದ್ರಿಯಗಳನ್ನು ನಿಗ್ರಹಿಸಿ ಆತ್ಮ ಶೋಧನೆಯಲ್ಲಿ ತೊಡಗಬೇಕು ಎನ್ನುತ್ತಿದ್ದ ಗಾಂಧೀಜಿ ವ್ಯಾವಹಾರಿಕ ಆದರ್ಶವಾದಿಗಳು. ಅಸ್ಪೃಶ್ಯತೆಯನ್ನು ತೊಡೆದುಹಾಕಲು ಅವರು ಹಿಂದೂಧರ್ಮದೃಷ್ಟಿಯಿಂದಲೇ ಹೋರಾಟ ನಡೆಸಿ ಅಸ್ಪೃಶ್ಯತೆಗೆ ಧರ್ಮದ ಆಧಾರವಿಲ್ಲವೆಂದು ಘೋಷಿಸಿದರು.

ಖಾದಿ ಮತ್ತು ಇತರ ಗ್ರಾಮ ಉದ್ಯೋಗಗಳನ್ನು ಪುನರುಜ್ಜೀವನಗೊಳಿಸಲು ಗಾಂಧೀಜಿ ಶಕ್ತಿಮೀರಿ ದುಡಿದರು. ಹಿಂದುಳಿದಿರುವ ಹಳ್ಳಿಗಳ ಸೇವೆ ಮಾಡಿ ಗ್ರಾಮ ಸ್ವರಾಜ್ಯ ಸ್ಥಾಪಿಸುವ ಬಯಕೆ ಅವರಿಗಿತ್ತು. ರಾಜಕೀಯ ಪ್ರಪಂಚದಲ್ಲಿ ಚರಕಕ್ಕಿಂತ ಮುಖ್ಯವಾದದ್ದು ಬೇರೆ ಯಾವುದೂ ಅವರಿಗಿರಲಿಲ್ಲ. ಚರಕ ಬಡಜನರ ಪ್ರತ್ಯಾಶೆಯ ಸಂಕೇತ, ವಿಧವೆಯರ ಸಂಗಾತಿ, ಕೋಟಿ ಜನರ ಜೀವನದ ಆಧಾರ ಎಂದು ಅವರು ಚರಕದ ಮಹತ್ವವನ್ನು ಹಿಡಿದೆತ್ತಿ ತೋರಿಸಿದರು. ಚರಕ ಹಳ್ಳಿಗರ ಆಲಸ್ಯಕ್ಕೆ ಮದ್ದು, ವಿರಾಮಕಾಲದಲ್ಲಿ ಹಣ ಗಳಿಸುವ ಸಾಧನ. ಪ್ರೇಮದ ಕರೆಯನ್ನು ಅಲಕ್ಷ್ಯಮಾಡದೆ, ನೂಲು ತೆಗೆದು ಹಣ ಸಂಪಾದಿಸಿ, ನಮ್ಮ ವಸ್ತ್ರಕ್ಕೆ ಬೇಕಾದ ನೂಲನ್ನು ನಮ್ಮ ಮನೆಯಲ್ಲೇ ನೂಲುವುದರಿಂದ ವಿದೇಶಿ ಬಟ್ಟೆ ಕೊಳ್ಳುವುದಕ್ಕಾಗಿ ನಾವು ಸುರಿಯುವ ಹಣ ನಿಲ್ಲುತ್ತದೆ ಎಂದು ಬಾಪು ಸಲಹೆ ಕೊಟ್ಟರು. ಭಾರತದ ಗ್ರಾಮ ಕೈಗಾರಿಕೆಗಳ ಉದ್ಧಾರಕ್ಕಾಗಿ ಅವರು ಖಾದಿ ಬಟ್ಟೆಯ ಪ್ರಚಾರ ಮಾಡಿದರು. ಖಾದಿ ಸ್ವಾತಂತ್ರ್ಯ ವಸ್ತ್ರವೆಂದು ಘೋಷಿಸಿದ ಗಾಂಧೀಜಿ ಪ್ರತಿಯೊಂದು ಹಳ್ಳಿಯೂ ಸ್ವಾವಲಂಬಿಯಾಗಬೇಕು, ಆದರ್ಶ ಗ್ರಾಮವಾಗಬೇಕು, ತನಗೆ ಬೇಕಾದ ಸಾಮಾನುಗಳನ್ನೆಲ್ಲ ತಾನೇ ತಯಾರಿಸಿಕೊಳ್ಳಬೇಕು ಎಂದು ಹೇಳಿದರು. ಗಿರಣಿ ಮಾಲೀಕರ ಮತ್ತು ಕೆಲಸಗಾರರ ಸಂಬಂಧ ತಂದೆಮಕ್ಕಳ

ನಡುವಣ ಸಂಬಂಧದಂತಿರಬೇಕೆಂದರವರು. ಅಧಿಕ ಸಂಪತ್ತು, ಅತಿ ದಾರಿದ್ರ್ಯ ಎರಡನ್ನೂ ಅವರು ದ್ವೇಷಿಸುತ್ತಿದ್ದರು. ಅವರು ಇಂಡಿಯಾ ದೇಶದ ಐಕ್ಯತೆಗಾಗಿ, ಒಮ್ಮತಕ್ಕಾಗಿ, ವಯಸ್ಕರ ಅಜ್ಞಾನ ನಿರ್ಮೂಲನಕ್ಕಾಗಿ ತೀವ್ರ ಕಾರ್ಯಕ್ರಮಗಳನ್ನು ಕೈಗೊಳ್ಳುವುದು ಅಗತ್ಯವೆಂದರು.

ಭಾರತೀಯ ಮಹಿಳೆಯ ಬಗ್ಗೆ ಬಾಪೂಜಿಗೆ ತುಂಬ ಅಭಿಮಾನ. ಗೌರವ. ಸ್ತ್ರೀ ವಿದ್ಯಾಭ್ಯಾಸಕ್ಕೆ ಅವರು ತುಂಬಾ ಉತ್ತೇಜನ ನೀಡಿದರು. ಗಂಡು ಹೆಣ್ಣು ಸಮಾನರು. ಇಬ್ಬರೂ ದೇವರ ಕೊಡುಗೆ, ಇಬ್ಬರದೂ ಒಂದೇ ಬದುಕು, ಒಂದೇ ಭಾವನೆ, ಇರುವ ಆತ್ಮವೂ ಒಂದೇ. ಆದ್ದರಿಂದ ಇಬ್ಬರಿಗೂ ಸಮಾನವಾಗಿ ಬಾಳುವ ಹಕ್ಕಿದೆ ಎಂದು ಅವರು ಜಗತ್ತಿಗೇ ಸಾರಿದರು. ಪುತ್ರ ಸಂತಾನಕ್ಕೆ ಹಾತೊರೆಯುವುದು, ಮಗಳ ಜನನಕ್ಕೆ ದುಃಖಿಸುವುದು ಹಿಂದೂ ಧರ್ಮದಲ್ಲಿ ಸಾರ್ವತ್ರಿಕವಾಗಿ ಆವರಿಸಿರುವುದು ದುರದೃಷ್ಟ ಎಂದವರು ವ್ಯಾಕುಲಗೊಂಡರು. ಸಂತಾನದ ವಿಷಯದಲ್ಲಿ ಸಮಾಜ ಮಾಡುತ್ತಿರುವ ಅರ್ಥಶೂನ್ಯ, ಮಾತ್ಸರ್ಯಪೂರಿತ ಪಕ್ಷಪಾತವನ್ನು ಅವರು ಖಂಡಿಸಿದರು. ಹೆಣ್ಣು ಮಕ್ಕಳಿಗೂ ಸ್ವತಂತ್ರ ಜೀವನ ನಡೆಸುವ ಸಲುವಾಗಿ ಪ್ರೌಢಶಿಕ್ಷಣ ನೀಡುವ ಸಲಹೆಯನ್ನು ಬಾಪೂಜಿ ಹೃತ್ಪೂರ್ವಕವಾಗಿ ಒಪ್ಪಿಕೊಂಡರು. ಮನೆಯ ವ್ಯವಹಾರ ಮತ್ತು ಗೃಹಕೃತ್ಯ ಸಂಪೂರ್ಣವಾಗಿ ಹೆಂಗಸಿನ ಕ್ಷೇತ್ರ. ಸ್ತ್ರೀ ತ್ಯಾಗ ಮತ್ತು ಸೇವಾಭಾವನೆಯ ಜೀವಂತ ಪ್ರತೀಕ. ಸ್ತ್ರೀ ಇಲ್ಲದೆ ಅಹಿಂಸೆ ಸತ್ಯ ಬದುಕುವುದೇ ಅಶಕ್ಯ. ಆಕೆ ದುರ್ಬಲಳಲ್ಲ, ಪುರುಷನಂತೆ ಶಕ್ತಿಶಾಲಿ. ನಮ್ರತೆ, ಶ್ರದ್ಧೆ, ಜ್ಞಾನಗಳ ಸುಗುಣ ಮೂರ್ತಿ ಎಂದು ಸ್ತ್ರೀ ಬಗ್ಗೆ ಅವರು ಗೌರವ ತೋರಿಸಿದರು. ಭಾರತೀಯ ಮಹಿಳೆ ಅಬಲೆಯಲ್ಲ, ಆಕೆಯ ಶೌರ್ಯ ಖಡ್ಗದಲ್ಲಿಲ್ಲ, ಶೀಲದಲ್ಲಿದೆ. ಅನೇಕ ರೀತಿಯಲ್ಲಿ ಆಕೆ ರಾಷ್ಟ್ರಕ್ಕೆ ನೆರವಾಗಬಲ್ಲಳು. ಹೆಂಡತಿ ಗಂಡನ ಆಳಲ್ಲ; ಅವನ ಸಹಚರಿ, ಉಪಕಾರಿಯಾದ ಸ್ನೇಹಿತೆ, ಸುಖ ದುಃಖ ಸಮಭಾಗಿನಿ. ಸ್ತ್ರೀ ಸರ್ವಸ್ವದ ಸಂರಕ್ಷಕಳು, ಅಹಿಂಸೆಯ ಅವತಾರ, ಕೇವಲ ಕಾಮವಾಸನಾತೃಪ್ತಿಯ ಒಂದು ಸಾಧನವಲ್ಲ. ಆದ್ದರಿಂದ ಪ್ರತಿಯೊಬ್ಬ ಸ್ತ್ರೀಯೂ ತಾಯಿಗೆ ಸಮಾನ, ಆ ದೃಷ್ಟಿಯಿಂದ ನೋಡಬೇಕು. ನಮ್ಮ ಮಹಿಳೆಯರನ್ನು ತಾಯಿಯಂತೆ, ಭಗಿನಿಯರಂತೆ, ಹೆಣ್ಣು ಮಕ್ಕಳಂತೆ ಗೌರವಿಸುವುದನ್ನು ಕಲಿಯುವವರೆಗೂ ಭಾರತದ ಪುನರುತ್ಥಾನವಾಗದು

ಎಂದು ಗಾಂಧೀಜಿ ಸ್ಪಷ್ಟಪಡಿಸಿದರು.

ಬಾಲ್ಯವಿವಾಹ, ಪರದಾ ಪದ್ಧತಿ, ಹಿಂದೂಧರ್ಮದ ಕಳಂಕಗಳೆಂದು ಹೇಳಿ, ಅವುಗಳ ನಿರ್ಮೂಲನಕ್ಕಾಗಿ ಗಾಂಧೀಜಿ ಶ್ರಮಿಸಿದರು. ಮಗುವಿನ ಮದುವೆ ಪಾಪ ಕರ್ಮ, ಪವಿತ್ರ ಕರ್ಮವಲ್ಲ ಎಂದರವರು. ಅನಾಗರಿಕ ಪದ್ಧತಿಯಾದ ಪರದಾಪದ್ಧತಿ ಈಗ ನಿಷ್ಪ್ರಯೋಜನ ಮತ್ತು ಕೆಡಕನ್ನುಂಟುಮಾಡುವುದರಿಂದ ಈ ಪದ್ಧತಿಯನ್ನು ಪ್ರಯತ್ನಪೂರ್ವಕವಾಗಿ ತೊಡೆದುಹಾಕಬೇಕೆಂದು ಅವರು ಜನತೆಯನ್ನು ಎಚ್ಚರಿಸಿದರು. ಅತಿಭೋಗವನ್ನು ಸ್ತ್ರೀಪುರುಷರು ನಿಗ್ರಹಿಸುವುದು ಉತ್ತಮವಾದ ಸಾಹಸ. ಆಲೋಚನೆಯಲ್ಲಿ, ಮಾತಿನಲ್ಲಿ, ಕ್ರಿಯೆಯಲ್ಲಿ ಬ್ರಹ್ಮಚರ್ಯ ಸಾಧಿಸುವುದೇ ಸುಖಬಾಳಿನ ಗುಟ್ಟು ಎಂದವರು ಬೋಧಿಸಿದರು. ಅವರು ತಮ್ಮ ಕನಸಿನ ಸ್ವರಾಜ್ಯದಲ್ಲಿ ಕಾರ್ಮಿಕರಿಗೆ ವಸತಿ ವಸ್ತ್ರ ಸೌಕರ್ಯ ಒದಗಿಸಿ, ಸರಿಯಾದ ವೇತನ ಕೊಟ್ಟು, ಕಡ್ಡಾಯ ಪಾನನಿರೋಧವನ್ನು ಜಾರಿಗೆ ತಂದು, ರಾಮರಾಜ್ಯ ಸ್ಥಾಪನೆ ಮಾಡಲು ಬಯಸಿದರು. ಮದ್ಯಪಾನ, ಕಳ್ಳತನ, ವ್ಯಭಿಚಾರ ಮುಂತಾದ ಸಾಮಾಜಿಕ ದುಷ್ಟ ಪದ್ಧತಿಗಳು ದೇಹ ಮತ್ತು ಆತ್ಮ ಎರಡನ್ನೂ ನಾಶಮಾಡುತ್ತದೆ ಎಂದು ಗಾಂಧಿ ಅವುಗಳನ್ನು ತೊಡೆದುಹಾಕಲು ಶಕ್ತಿಮೀರಿ ದುಡಿದರು.

ಶಿಕ್ಷಣದ ವಿಷಯದಲ್ಲೂ ಗಾಂಧೀಜಿ ಅತ್ಯಮೂಲ್ಯವಾದ ಸಲಹೆಗಳನ್ನು ನೀಡಿದ್ದಾರೆ. ಉತ್ತಮ ಆಹಾರ ದೇಹದ ಬೆಳವಣಿಗೆಗೆ ಪೋಷಕವಾಗಿರುವಂತೆ ಸುಶಿಕ್ಷಣವೇ ಇಡೀ ಬದುಕಿನ ಆಧಾರ. ಶಿಕ್ಷಣವೆಂದರೆ ಕೇವಲ ಅಕ್ಷರಜ್ಞಾನವಲ್ಲ. ದೇಹ, ಹೃದಯ, ಮನಸ್ಸು, ಆತ್ಮಗಳ ಪ್ರಗತಿಯೇ ವಿದ್ಯಾಭ್ಯಾಸದ ಗುರಿಯಾಗಬೇಕೆಂದ ಬಾಪು ಶಿಕ್ಷಣಕ್ಕೂ ಬದುಕಿಗೂ ಸಂಬಂಧವಿಲ್ಲದ ಇಂದಿನ ಶಿಕ್ಷಣ ಕ್ರಮದ ವಿರುದ್ಧ ದಂಗೆಯೆದ್ದರು. ಇಂದಿನ ಶಿಕ್ಷಣ ಕ್ರಮದಲ್ಲಿ ಕ್ರಾಂತಿಯಾಗಿ ಮಕ್ಕಳಿಗೆ ಮುಂದೆ ಉಪಯೋಗವಾಗುವಂತಹ ಶಿಕ್ಷಣ ಸಿಕ್ಕಬೇಕು. ಹೃದಯವನ್ನು ಪರಿಶುದ್ಧಗೊಳಿಸದ, ವಿದ್ಯಾರ್ಥಿಗಳ ಪ್ರತಿಭೆಗಳನ್ನು ಬೆಳಕಿಗೆ ತರದ, ಅವರ ಉತ್ತಮ ಗುಣಗಳನ್ನು ಅರಳಿಸದ ಶಿಕ್ಷಣ ವ್ಯರ್ಥ. ಆಧುನಿಕ ಶಿಕ್ಷಣ ಪದ್ಧತಿಯಲ್ಲಿ ಲೋಪ ದೋಷಗಳಿರುವುದರಿಂದಲೇ ಇಂದಿನ ವಿದ್ಯಾರ್ಥಿ ಸಣ್ಣಪುಟ್ಟ ಕಾರಣಗಳಿಗೆಲ್ಲಾ ರೊಚ್ಚಿಗೆದ್ದು ಚಳುವಳಿ ಹೂಡುತ್ತಾನೆ ಎಂದು ಬಾಪು ಅಭಿಪ್ರಾಯಪಟ್ಟರು.

ಜ್ಞಾನಾರ್ಜನೆಯನ್ನೇ ಗುರಿಯಾಗುಳ್ಳ ವಿದ್ಯಾರ್ಥಿ ರಾಜಕೀಯವನ್ನು ಪ್ರವೇಶಮಾಡಬಾರದು. ಸಂಪೂರ್ಣ ಸ್ವಾತಂತ್ರ್ಯವುಳ್ಳ ವಿದ್ಯಾರ್ಥಿಗೆ ಶಿಸ್ತು, ಸಂಯಮ, ಶೀಲತೆ ಅತ್ಯಾವಶ್ಯಕ. ಅವರು ಕಾಯಾ, ವಾಚಾ ಮನಸಾ ಪರಿಶುದ್ಧರಾಗಿ ಶಿಕ್ಷಕರಲ್ಲಿ ಭಕ್ತಿ, ವಿಶ್ವಾಸವಿಡಬೇಕು. ವಿದ್ಯಾರ್ಥಿಗಳು ಧೈರ್ಯ ಶಾಲಿಗಳಾಗಿರಬೇಕು, ಶಕ್ತಿವಂತರಾಗಿರಬೇಕು. ಶಿಕ್ಷಕ ಮಕ್ಕಳಿಗೆ ತಂದೆತಾಯಿ ಯಾಗಿ ಅವರಿಗೆ ಅಗತ್ಯವಾದುದನ್ನು ನೀಡಬೇಕು. ಮಕ್ಕಳಲ್ಲಿ ಅಡಗಿರುವ ಪ್ರತಿಭೆಗಳನ್ನು ಬೆಳಕಿಗೆ ತರಬೇಕು. ಶಾಲೆಯಲ್ಲಿ ಪಾಠ ಹೇಳುವ ಉಪಾ ಧ್ಯಾಯರು ಚಾರಿತ್ರ್ಯವಂತರಾಗಿರಬೇಕು. ದೇವರ ಬಗ್ಗೆ ತಿಳುವಳಿಕೆ ಕೊಡು ವುದು, ಮಾನವನನ್ನು ನಶ್ವರತೆಯಿಂದ ಅಮರತ್ವಕ್ಕೇರಿಸುವುದು, ಶೀಲವನ್ನು ಬೆಳೆಸುವುದು ಶಿಕ್ಷಣದ ಗುರಿಯಾಗಬೇಕು. ವಿದ್ಯಾರ್ಥಿಗಳಿಗೆ ಮಾನವ ಶಿಕ್ಷಣ ಔದ್ಯೋಗಿಕ ಶಿಕ್ಷಣ ಅಗತ್ಯ ಎನ್ನುತ್ತಿದ್ದ ಗಾಂಧೀಜಿ ಶಾರೀರಿಕ, ಮಾನಸಿಕ ಶಿಕ್ಷಣಕ್ಕಿಂತ ವಿದ್ಯಾರ್ಥಿಗಳ ಗುಣವಿಕಾಸ, ಹೃದಯದಲ್ಲಿ ಸೇವಾಭಾವ ಮತ್ತು ಸರಳತೆ ಹುಟ್ಟಿಸುವಂತಹ ಆಧ್ಯಾತ್ಮಿಕ ಶಿಕ್ಷಣಕ್ಕೆ ಮನ್ನಣೆಕೊಟ್ಟರು. ಅವರ ದೃಷ್ಟಿಯಲ್ಲಿ ಪ್ರತಿ ಮನೆಯೂ ಒಂದು ವಿಶ್ವವಿದ್ಯಾನಿಲಯ, ಮಾತಾ ಪಿತರೇ ಮಕ್ಕಳಿಗೆ ಶಿಕ್ಷಕರು. ಗಾಂಧಿ ಯೋಜನೆಯಲ್ಲಿ ಲೈಂಗಿಕ ಶಿಕ್ಷಣಕ್ಕೂ ಸ್ಥಾನ ಸಿಕ್ಕಿದೆ. ಕಾಮವನ್ನು ಗೆಲ್ಲುವಂತಹ, ಶುದ್ಧೀಕರಣ ಮಾಡುವಂತಹ ಗುರಿಯಿಟ್ಟುಕೊಂಡು ವಿದ್ಯಾರ್ಥಿಗಳಿಗೆ ಲೈಂಗಿಕ ಶಿಕ್ಷಣ ಕೊಡಬೇಕು. ಜನನೇಂದ್ರಿಯಗಳ ಮಹತ್ವವನ್ನೂ, ಅವುಗಳ ಸರಿಯಾದ ಉಪಯೋಗ ವನ್ನೂ ವಿದ್ಯಾರ್ಥಿಗಳಿಗೆ ತಿಳಿಸಬೇಕೆಂದು ಅವರು ಅಭಿಪ್ರಾಯಪಟ್ಟರು. ಆತ್ಮ ನಿಗ್ರಹವಿರುವ ಶಿಕ್ಷಕ ಮಾತ್ರ ಲೈಂಗಿಕ ಜ್ಞಾನವನ್ನು ಬೋಧಿಸಲು ಅರ್ಹ. ದೇಶದ ಅವಶ್ಯಕತೆಗೆ ತಕ್ಕಂತೆ ಉನ್ನತ ವಿದ್ಯಾಭ್ಯಾಸ ಇರಬೇಕು. ಮೂಲ ಶಿಕ್ಷಣ ಶಾಲೆಯಲ್ಲಿ ಸಂಗೀತಕ್ಕೂ ಅವಕಾಶ ಕಲ್ಪಿಸಿಕೊಡಬೇಕೆಂದು ಅವರು ಸಲಹೆಕೊಟ್ಟರು.

ಸಿಕ್ಕು ಬಿಡಿಸುತ್ತಾ ಹೋದಂತೆ ಮತ್ತಷ್ಟು ತೊಡಕಾಗುತ್ತಿರುವ ಜಟಿಲ ವಾದ ಭಾಷಾಸಮಸ್ಯೆಗೂ ಗಾಂಧೀಜಿ ಅನೇಕ ಸಲಹೆಗಳನ್ನು ಕೊಟ್ಟರು. ವಿದೇಶಿ ಭಾಷೆಯ ಶಿಕ್ಷಣ ನಮ್ಮ ಮಕ್ಕಳಿಗೆ ಪ್ರಯೋಜನವಿಲ್ಲ. ಆದ್ದರಿಂದ ಪ್ರಾದೇಶಿಕ ಭಾಷೆಯನ್ನು ಶಿಕ್ಷಣ ಮಾಧ್ಯಮವನ್ನಾಗಿ ಮಾಡಬೇಕು. ಹಿಂದಿ,

ಸಂಸ್ಕೃತ, ಇಂಗ್ಲೀಷ್, ಪರ್ಶಿಯನ್, ಅರೇಬಿಕ್ ಭಾಷೆಗಳನ್ನೆಲ್ಲಾ ಶಾಲೆಯಲ್ಲಿ ನಮ್ಮ ವಿದ್ಯಾರ್ಥಿಗಳಿಗೆ ಬೋಧಿಸಬೇಕು ಎಂದು ಗಾಂಧೀಜಿ ಹೇಳಿದರು. ಅವರ ದೆಸೆಯಿಂದ ನಮ್ಮ ದೇಶದ ಪ್ರಾದೇಶಿಕ ಭಾಷೆಗಳಿಗೆ ಪ್ರೋತ್ಸಾಹ ಸಿಕ್ಕಿ ಅವು ತಲೆ ಎತ್ತಿ ನಿಂತುಕೊಂಡವು. ಗಾಂಧೀಜಿ ಇಂಗ್ಲೀಷ್ ಭಾಷೆಯನ್ನು ದ್ವೇಷಿಸುತ್ತಿರಲಿಲ್ಲ. ಆ ಭಾಷೆಯಲ್ಲಿ ಅವರಿಗೆ ತುಂಬ ಅಭಿಮಾನವಿತ್ತು. ಪಶ್ಚಿಮ ವಿಚಾರಗಳಿಗೆ, ಸಂಸ್ಕೃತಿಗಳಿಗೆ ಇಂಗ್ಲೀಷ್ ಭಾಷೆ ಹೆಬ್ಬಾಗಿಲು. ವಿಶ್ವಸಾಹಿತ್ಯದ ನಿಧಿಯಿರುವ ಆ ಭಾಷೆ ಕಲಿಯುವುದು ಅವಶ್ಯಕ. ನಮ್ಮ ತರುಣ ತರುಣಿಯರು ಎಷ್ಟು ಭಾಷೆಗಳನ್ನು ಬೇಕಾದರೂ ಕಲಿಯಲಿ, ಆದರೆ ಅವರು ಮಾತೃಭಾಷೆಯನ್ನು ಮಾತ್ರ ಅಲಕ್ಷ್ಯ ಮಾಡದಿರಲಿ. ಉಚ್ಚಶಿಕ್ಷಣವೂ ಪ್ರಾದೇಶಿಕ ಭಾಷೆಯಲ್ಲಾಗಬೇಕು. ವಿದೇಶಿ ಭಾಷೆ ಅಂತರರಾಷ್ಟ್ರೀಯ ವ್ಯವಹಾರಕ್ಕೆ, ರಾಜನೈತಿಕ ತಂತ್ರಕ್ಕೆ ಮೀಸಲಾದ ಭಾಷೆ. ಆದರೆ ಆ ಭಾಷೆಯ ಮಾಧ್ಯಮ ನಮ್ಮ ಮಕ್ಕಳಿಗೆ ಬೌದ್ಧಿಕ ಮತ್ತು ನೈತಿಕ ಅಪಾಯವನ್ನುಂಟುಮಾಡುತ್ತಿದೆ ಎಂದು ಬಾಪೂಜಿ ಎಚ್ಚರಿಕೆ ನೀಡಿದರು.

ಅಸಂಖ್ಯಾತ ಭಾಷೆಗಳು ಬಳಕೆಯಲ್ಲಿರುವ ಭಾರತದಲ್ಲಿ ರಾಷ್ಟ್ರಭಾಷೆಯ ಅಗತ್ಯವನ್ನೂ ಗಾಂಧೀಜಿ ಕಂಡುಕೊಂಡರು. ರಾಷ್ಟ್ರಭಾಷೆಯಾಗುವ ಭಾಷೆಗೆ ಹಲವಾರು ಅರ್ಹತೆಗಳಿರಬೇಕು. ಸರ್ಕಾರದ ಅಧಿಕಾರಿಗಳು ಆ ಭಾಷೆಯನ್ನು ಸುಲಭವಾಗಿ ಕಲಿಯುವಂತಿರಬೇಕು. ಭಾರತಾದ್ಯಂತ ಧಾರ್ಮಿಕ, ಆರ್ಥಿಕ, ರಾಜಕೀಯ ವ್ಯವಹಾರಗಳ ಮಾಧ್ಯಮವಾಗುವ ಸಾಮರ್ಥ್ಯ ಅದಕ್ಕಿರಬೇಕು. ಆ ಭಾಷೆ ಬಹುಸಂಖ್ಯಾತ ಭಾರತೀಯರ ಭಾಷೆಯಾಗಿರಬೇಕು. ಇಡೀ ರಾಷ್ಟ್ರವೇ ಅದನ್ನು ಕಲಿಯಲು ಸರಳವಾಗಿರಬೇಕು. ಆಂಗ್ಲಭಾಷೆಗೆ ಅಂತರರಾಷ್ಟ್ರೀಯ ಸ್ಥಾನವಿರಬೇಕೇ ಹೊರತು ರಾಷ್ಟ್ರಭಾಷೆಯಾಗುವ ಅರ್ಹತೆ ಅದಕ್ಕಿಲ್ಲ. ಹಿಂದಿಭಾಷೆಯೊಂದು ಬಿಟ್ಟರೆ ಉಳಿದ ಯಾವ ಭಾಷೆಗೂ ರಾಷ್ಟ್ರಭಾಷೆಯಾಗುವ ಯೋಗ್ಯತೆ ಇಲ್ಲ. ರಾಷ್ಟ್ರಭಾಷೆ ರಾಷ್ಟ್ರದ ಐಕ್ಯತೆಯ ಬುನಾದಿ. ರಾಜ್ಯಮಟ್ಟದಲ್ಲಿ ಮಾತೃಭಾಷೆ, ರಾಷ್ಟ್ರಮಟ್ಟದಲ್ಲಿ ಹಿಂದೂಸ್ಥಾನಿ, ಅಂತರರಾಷ್ಟ್ರೀಯಮಟ್ಟದಲ್ಲಿ ಆಂಗ್ಲಭಾಷೆ ಇರಬೇಕೆಂಬ ತ್ರಿಭಾಷಾ ಸೂತ್ರವನ್ನು ಗಾಂಧೀಜಿ ಭಾರತಕ್ಕೆ ದಯಪಾಲಿಸಿದರು.

ಗಾಂಧೀಜಿಯವರ ತತ್ತ್ವ, ತಂತ್ರ, ಸತ್ಯದ ಸಾಧನೆ, ವೈಚಾರಿಕ ವಿಚಾರ,

ಶಿಕ್ಷಣ ಸೌಲಭ್ಯಗಳನ್ನು ಕುರಿತಾದ ಸಲಹೆಗಳೆಲ್ಲವೂ ಅವರ ದೈನಂದಿನ ಅನುಭವದ ಒತ್ತಡಕ್ಕೆ ಸಿಕ್ಕಿ ಹಣ್ಣಾದ ಯೋಜನೆಗಳು. ಅವರು ಯಾವ ವಿಷಯದ ಕಡೆ ಕಣ್ಣು ಹಾಯಿಸಿದರೆ, ಕೈ ಹಾಕಿದರೆ ಸಾಕು ಅದನ್ನು ಪೂರ್ತಿಯಾಗಿ ಗ್ರಹಿಸುತ್ತಿದ್ದರು. 'ಮಾನವ ಸಂಸ್ಕೃತಿಯನ್ನು ವಿನಾಶದಿಂದ ಕಾಪಾಡಲು ಸತ್ಯ, ಅಹಿಂಸೆಯ ಮಾರ್ಗವೇ ನಮಗಿರುವ ಆಶಾಕಿರಣ'. ಇದು ಅವರು ನಮ್ಮ ಭಾರತಕ್ಕೆ ಮಾತ್ರವೇ ಅಲ್ಲ, ಜಗತ್ತಿಗೇ ನೀಡಿದ ಅನುಪಮ ಕಾಣಿಕೆ. ವ್ಯಕ್ತಿಯ ನೀತಿ, ಸಾಮಾಜಿಕ ಕಾರ್ಯಗಳ ಸಮ್ಮಿಳನದ ರೂಪವೇ ಗಾಂಧೀಜಿ. ದುರ್ಬಲ ಜನಾಂಗಕ್ಕೆ ಅವರು ಶಕ್ತಿಯ ಸಂಕೇತವಾದರು. ಆಶಾವಾದಿ ಕರ್ಮಯೋಗಿ ಬಾಪೂಜಿಯ ವ್ಯಕ್ತಿತ್ವ, ಧೈರ್ಯ, ಚಟುವಟಿಕೆ, ನಿಸ್ವಾರ್ಥತೆ, ಆತ್ಮವಿಶ್ವಾಸ ಮುಂತಾದ ಗುಣಗಳಿಗೆ ಸಕಲರೂ ಮಾರುಹೋದರು. ಸ್ವಾತಂತ್ರ್ಯಸಾಧನೆಗೆ ಯಶಸ್ವೀ ಪ್ರಯೋಗವಾದ 'ಉಪವಾಸ'ವನ್ನು ಅವರು ಪ್ರಯೋಗಿಸಿದರು. ಸತ್ಯಸಿದ್ಧಿಗಾಗಿ 'ಉಪವಾಸ' ಒಂದು ಒಳ್ಳೆಯ ಪ್ರಯೋಗ. ಆದರ ಪಣ ಒಬ್ಬ ಮನುಷ್ಯನ ಜೀವವಾದರೆ ಫಲ ಬಂದು ಜನಾಂಗದ ಸ್ವಾತಂತ್ರ್ಯ. ಸ್ವಾತಂತ್ರ್ಯಕ್ಕಾಗಿ ಅವರು ದೇಹವನ್ನೇ ಒತ್ತೆಯಿಟ್ಟು ಉಪವಾಸ ಪ್ರಾರಂಭಿಸಿ ವಿದೇಶಿಯರ ಗಮನವನ್ನು ಆಕರ್ಷಿಸಿದರು. ಭಾರತಕ್ಕೆ ಸ್ವಾತಂತ್ರ್ಯ ತಂದುಕೊಟ್ಟು ವಿಶ್ವದ ಬೆಳಕಾಗಿ ಬಾಳಿ ಬಾಪು ಕಳೆದುಹೋದ ದಿನಗಳನ್ನೆದುರಿಸಿ ಅವುಗಳಿಂದ ಮುಂದಿನ ಇತಿಹಾಸವನ್ನು ರೂಪಿಸಿದರು.

ದೇಶದ ಹಿತಚಿಂತನೆಗಾಗಿ ಸರ್ವಸ್ವವನ್ನೂ ತ್ಯಾಗಮಾಡಿ ಭಾರತಕ್ಕೆ ಸ್ವಾತಂತ್ರ್ಯ ಸಂಪಾದಿಸಿಕೊಟ್ಟ ಗಾಂಧೀಜಿ ಭಾರತಕ್ಕೆ ಮಾತ್ರವೇ ಅಲ್ಲದೆ ಇಡೀ ಪ್ರಪಂಚಕ್ಕೆ, ಮಾನವ ಜನಾಂಗಕ್ಕೇ ಮಾರ್ಗದರ್ಶಕರು. ಅವರು ಎಲ್ಲಾ ಕ್ಷೇತ್ರಗಳಲ್ಲೂ ಯಾತ್ರಿಕನಂತೆ ಸಂಚರಿಸಿ, ಅಪೂರ್ವ ಅನುಭವ ಸಂಪತ್ತನ್ನು ಗಳಿಸಿ, ಮಾನವಕೋಟಿಯನ್ನು ಉದ್ಧಾರ ಮಾಡಿದರು. ಬರ್ನಾಡ್‌ಷಾ, 'ಗಾಂಧಿ ವ್ಯಕ್ತಿಯಲ್ಲ, ಅದೊಂದು ಅಸಮಾನ್ಯ ಶಕ್ತಿ' ಎಂದು ಹೇಳಿದ ಮಾತು ಎಷ್ಟೊಂದು ಅರ್ಥಪೂರ್ಣವಾಗಿದೆ! 'ಗಾಂಧಿಯಂತಹ ಮಹಾಪುರುಷರು ಮಾನವ ಜಗತ್ತಿನಲ್ಲಿ ಹಿಂದೆ ಜನಿಸಲಿಲ್ಲ, ಮುಂದೂ ಜನಿಸುವುದಿಲ್ಲ' ಎಂಬ ಫ್ರೆಂಚ್ ಸಾಹಿತಿಯೊಬ್ಬನ ಘೋಷಣೆ ಸಮಂಜಸವಾಗಿದೆ.

ಗಾಂಧೀಜಿ ಇನ್ನಿಲ್ಲ. ಎಲ್ಲ ಜನತೆಯ ತಂದೆಯ ಭೌತಿಕ ಶರೀರ ಕಣ್ಮರೆಯಾಗಿದೆ. ಆದರೆ ಅವರು ನೀಡಿದ ಶಾಶ್ವತ ಮೌಲ್ಯಗಳು ವಿಶ್ವವ್ಯಾಪಕವಾದ ಬೆಳಕು, ಎಂದೆಂದಿಗೂ ನಂದಿಹೋಗದ ನಂದಾದೀಪ. ಶಾಂತಿಯ ದಿವ್ಯ ಸಂದೇಶದ ಮೂಲಕ ಅವರು ಸಮಗ್ರ ವಿಶ್ವಕ್ಕೇ ಹೊಸ ದಾರಿಯನ್ನು ತೋರಿಸಿಕೊಟ್ಟ ಮಹಾಪುರುಷರು.

# ಮಹಾಯೋಗಿ ಶ್ರೀ ಅರವಿಂದ ಘೋಷರು

## ೧೮೭೨–೧೯೫೦

ಕಳೆದ ಶತಮಾನದ ಅಂತ್ಯದಲ್ಲಿ ಅನೇಕ ಮಹಾಪುರುಷರು ನಮ್ಮ ಭಾರತ ದೇಶದಲ್ಲಿ ಹುಟ್ಟಿದರು. ಅವರಲ್ಲಿ ಪ್ರತಿಯೊಬ್ಬರೂ ಒಂದೊಂದು ಕ್ಷೇತ್ರದಲ್ಲಿ ದುಡಿದು, ಜನರಲ್ಲಿ ಹುಮ್ಮಸ್ಸು, ಉತ್ಸಾಹ, ಸ್ಫೂರ್ತಿಗಳನ್ನು ಅರಳಿಸಿ, ಭಾರತದ ಸಂಸ್ಕೃತಿಯ ಹಿರಿಮೆಯನ್ನು ಎತ್ತಿಹಿಡಿದು ಭಾರತೀಯತೆಯ ಪ್ರಭುತ್ವವನ್ನು ಸ್ಥಾಪಿಸಿದರು. ವಿಚಾರಕ್ಷೇತ್ರಕ್ಕೆ ಮುಖ್ಯವಾಗಿ ಯೋಗ ಮತ್ತು ಆಧ್ಯಾತ್ಮಿಕ ಸಿದ್ಧಿ, ಸಾಧನೆಗಳಿಗಾಗಿ ಅರವಿಂದಘೋಷರು ಕೊಟ್ಟ ಕಾಣಿಕೆ ಅದ್ವಿತೀಯ ಹಾಗೂ ಬಹುಮುಖವಾಗಿದೆ. ಭಾರತ ಸ್ವಾತಂತ್ರ್ಯ ಹೋರಾಟ ದಲ್ಲಿ ಪ್ರಮುಖ ಪಾತ್ರ ವಹಿಸಿದ್ದ ಅರವಿಂದರು ಮಹಾಯೋಗಿ, ವೀರ ರಾಷ್ಟ್ರೀಯ, ದೇಶಾಭಿಮಾನಿ, ಶ್ರೇಷ್ಠ ವಿದ್ವಾಂಸರು, ಸಾಹಿತ್ಯಜ್ಞರು ಮತ್ತು ಸನಾತನ ಧರ್ಮಾಭಿಮಾನಿಗಳು. ಅವರು ಮಾನವಕುಲದಲ್ಲಿ ಹುಟ್ಟಿದರೂ ದೇವಮಾನವ ಎನ್ನಿಸಿಕೊಂಡು ಭಾರತದೇಶದ ಶಕ್ತಿಯಾಗಿ, ಹೊಸ ಬೆಳ ಕಾಗಿ, ದಾರಿ ತೋರುವ ಗುರುವಾಗಿ, ಮಾನವ ದೃಷ್ಟಿಯನ್ನೂ, ಚೇತನ ವನ್ನೂ ವಿಶಾಲಗೊಳಿಸಿದ ಮಹಾ ವಿಭೂತಿಪುರುಷರಾಗಿ ವಿಜೃಂಭಿಸಿದರು. ಅವರು ಸ್ವಾತಂತ್ರ್ಯ ಸಂಗ್ರಾಮದ ಯೋಜನೆಯನ್ನು ರೂಪಿಸಿದ್ದಲ್ಲದೆ ಸತ್ಯ ದರ್ಶನವನ್ನು ಸಂಪಾದಿಸಿ ಆಧುನಿಕ ಋಷಿಶ್ರೇಷ್ಠರೆನಿಸಿಕೊಂಡರು. ಪರಮ ಆದರಣೀಯ, ಗಮನೀಯ, ಚಿರಸ್ಮರಣೀಯವಾದ ರೀತಿಯಲ್ಲಿ ಭಾರತ ದೇಶಕ್ಕೆ ಸೇವೆ ಸಲ್ಲಿಸಿದ ಆದರ್ಶವ್ಯಕ್ತಿ ಅರವಿಂದರ ಚರಿತ್ರೆ, ಕಾರ್ಯ, ವಿಚಾರ, ಸಾಧನೆ, ಸಿದ್ಧಿ, ಉಪದೇಶಗಳನ್ನು ತಿಳಿಯುವುದು ಪ್ರತಿಯೊಬ್ಬ ಭಾರತೀಯನ ಕರ್ತವ್ಯ.

ಅರವಿಂದರ ಜೀವನವೇ ಒಂದು ಸುಂದರವಾದ ಮಹಾಕಾವ್ಯ ಎಂದು ಹೇಳಬಹುದು. ಮೇಲುನೋಟಕ್ಕೆ ಅವರ ಜೀವನ ಸರಳ ಹಾಗೂ ಸೌಮ್ಯ ವಾಗಿ ಕಂಡರೂ, ಪ್ರಚಂಡ ಶಕ್ತಿ ಚೈತನ್ಯಗಳೊಂದಿಗೆ ಭೋರ್ಗರೆಯುತ್ತಾ

ದಾರಿಯಲ್ಲಿ ಸಿಕ್ಕಿದ ಅಡೆತಡೆಗಳನ್ನು ಕೊಚ್ಚಿಕೊಂಡು ಗುರಿಮುಟ್ಟುವ ಸದುದ್ದೇಶದಿಂದ ಪ್ರವಹಿಸುವ ಮಹಾನದಿಯನ್ನು ಅವರ ಜೀವನಕ್ಕೆ ಹೋಲಿಸಬಹುದು. ಅರವಿಂದರ ಜೀವನ ಚರಿತ್ರೆ, ಅವರು ನಮ್ಮ ದೇಶದ ರಾಜಕೀಯ ಕ್ಷೇತ್ರದಲ್ಲಿ ಮಾಡಿದ ಅನುಪಮ ಕಾರ್ಯದ ಬಗ್ಗೆ ಹೊಸ ಬೆಳಕು ಚೆಲ್ಲುವುದಲ್ಲದೆ, ಜನತೆಯನ್ನು ಅಸತ್ಯದಿಂದ ಸತ್ಯದ ಕಡೆಗೆ, ಮೃತ್ಯುವಿನಿಂದ ಅಮರತ್ವದ ಕಡೆಗೆ, ಕತ್ತಲಿನಿಂದ ಬೆಳಕಿನ ಕಡೆಗೆ ಕರೆದೊಯ್ಯುವ ಶಕ್ತಿ ಅದಕ್ಕಿದೆ.

ಅರವಿಂದರು ಜನಿಸಿದ ಸಂದರ್ಭದಲ್ಲಿ ಭಾರತದ ಪರಿಸ್ಥಿತಿ ಶೋಚನೀಯವಾಗಿತ್ತು. ಬ್ರಿಟಿಷ್ ಸರ್ಕಾರದ ದಬ್ಬಾಳಿಕೆ, ದೌರ್ಜನ್ಯ, ಅತ್ಯಾಚಾರ, ಅನಾಚಾರಗಳು ಉಗ್ರರೂಪ ತಾಳಿದ್ದವು. ಬ್ರಿಟಿಷರು ರಾಷ್ಟ್ರದ ಸಂಪತ್ತನ್ನು ಕೊಳ್ಳೆ ಹೊಡೆದು, ದೇಶೀಯ ಉದ್ಯೋಗಗಳನ್ನು ಕುಶಲ ಕೈಗಾರಿಕೆಗಳನ್ನು ತುಳಿದು ಹಾಕಿ, ಕ್ರೈಸ್ತಧರ್ಮಕ್ಕೂ, ಆ ಧರ್ಮದ ಪ್ರಚಾರಕ್ಕೂ ಪ್ರೋತ್ಸಾಹ ಕೊಡುತ್ತಿದ್ದರು. ಬ್ರಿಟಿಷ್ ಸರ್ಕಾರ ಹಿಂದು ಮತ್ತು ಮುಸ್ಲಿಂ ಶಿಕ್ಷಣ ಪದ್ಧತಿಯನ್ನು ಕಿತ್ತುಹಾಕಿ ಇಂಗ್ಲಿಷ್ ಭಾಷೆಯಲ್ಲಿ ಅಧ್ಯಯನ ನಡೆಸಿ, ಆ ಭಾಷೆಯಲ್ಲಿ ಪ್ರಭುತ್ವ ಪಡೆಯುವವರಿಗೆ ಪುರಸ್ಕಾರ, ಮನ್ನಣೆ ನೀಡುತ್ತಿದ್ದರು. ಆ ಸಂದರ್ಭದಲ್ಲಿ ಕೆಲವು ದೇಶಾಭಿಮಾನಿಗಳು ಸರ್ಕಾರದ ವಿರುದ್ಧ ರೊಚ್ಚಿನಿಂದ ದಂಗೆಯೆದ್ದಾಗ ಜನರಲ್ಲಿದ್ದ ಶಸ್ತ್ರಗಳನ್ನೆಲ್ಲ ಕಿತ್ತುಕೊಂಡು ಆಡಳಿತದ ವಿರುದ್ಧ ದಂಗೆಯೇಳದಂತೆ ಅಡಗಿಸಲಾಯಿತು. ಫ್ರೆಂಚ್ ಮಹಾಕ್ರಾಂತಿ, ಅಮೇರಿಕಾ ಸ್ವಾತಂತ್ರ್ಯ ನಡೆದು ವಿಶ್ವದಾದ್ಯಂತ ಜನತೆಯಲ್ಲಿ ಗಣರಾಜ್ಯ, ಪ್ರಜಾಪ್ರಭುತ್ವದ ಬಗ್ಗೆ ಹೊಸ ಹೊಸ ಭಾವನೆಗಳು ಹುಟ್ಟಿಕೊಂಡವು. ಇಂತಹ ಪರಿಸ್ಥಿತಿಯಲ್ಲಿ ಅರವಿಂದರು ಜನಿಸಿದರು.

ಡಾಕ್ಟರು ಕೃಷ್ಣಧನ ಘೋಷರು ಮತ್ತು ಸ್ವರ್ಣಲತಾ ಇವರಿಗೆ ಹುಟ್ಟಿದ ಮೂರನೆಯ ಮಗುವಿಗೆ ಅರವಿಂದ ಎಂದು ಹೆಸರಿಟ್ಟರು. ಅರವಿಂದ ಎಂದರೆ ಕಮಲ. ಭಾರತ ಸ್ವಾತಂತ್ರ್ಯ ಗಳಿಸಿದ, ರಾಮಕೃಷ್ಣ ಪರಮಹಂಸರು ಸಮಾಧಿ ಹೊಂದಿದ ಆಗಸ್ಟ್ ಹದಿನೈದನೆಯ ತಾರೀಖು ಅವರು ಕಲ್ಕತ್ತದಲ್ಲಿ ೧೮೭೨ರಂದು ಬೆಳಗ್ಗೆ ನಾಲ್ಕು ಗಂಟೆಗೆ ಜನಿಸಿದರು. ತಂದೆ ಕೃಷ್ಣಧನರಿಗೆ ಇಂಗ್ಲಿಷ್ ಭಾಷೆ, ಸಂಸ್ಕೃತಿ ಮತ್ತು ಜೀವನಪದ್ಧತಿಯ ಬಗ್ಗೆ ಅಪಾರ ವ್ಯಾಮೋಹ. ಆಂಗ್ಲ ಜೀವನ ಪದ್ಧತಿಯ ಸೆಳೆತ, ಪಾಶ್ಚಾತ್ಯ ಸಂಸ್ಕೃತಿ ನಾಗರಿಕತೆಗಳ

ಅಂಧಾನುಕರಣೆ ಯಾವ ಅವಿವೇಕ ಮಟ್ಟಕ್ಕೆ ಹೋಗಿತ್ತೆಂದರೆ ಅವರು ತಮ್ಮ ನಾಲ್ಕನೆಯ ಮಗನಿಗೆ ಆಂಗ್ಲರ ಹೆಸರನ್ನೇ ಇಟ್ಟರು. ಇಂಗ್ಲೀಷ್ ದೇವಭಾಷೆ, ಆದ್ದರಿಂದ ಮನೆಯಲ್ಲಿ ಎಲ್ಲರೂ ಕಡ್ಡಾಯವಾಗಿ ಆ ಭಾಷೆಯನ್ನೇ ಕಲಿಯ ಬೇಕು, ಮಾತನಾಡಬೇಕು ಎಂದು ಅವರು ನಿರ್ಬಂಧಪಡಿಸಿದರು. ಭಾರತೀಯ ಸಂಸ್ಕೃತಿ, ಮಾತೃಭಾಷೆಯಾದ ಬಂಗಾಲಿ ಭಾಷೆಯ ಮೇಲೆ ಅವರಿಗೆ ಸ್ವಲ್ಪವೂ ಅಭಿಮಾನವಿರಲಿಲ್ಲ. ಮನೆಯಲ್ಲಿ ಮಕ್ಕಳಿದುರಿಗೆ ಯಾರೂ ಬಂಗಾಲಿ ಭಾಷೆ ಆಡಬಾರದೆಂದು ಅವರು ಕಟ್ಟಪ್ಪಣೆ ಮಾಡಿದ್ದುದರಿಂದ ಅರವಿಂದರಿಗೆ ಹುಟ್ಟಿದ ಐದು ವರ್ಷಗಳವರೆಗೂ ಬಂಗಾಲಿ ಭಾಷೆಯ ಪರಿಚಯವೇ ಆಗ ಲಿಲ್ಲ. ಕೃಷ್ಣಧನರು ಹಿಂದೂ ಧರ್ಮಪದ್ಧತಿಗಳನ್ನು ಅಸಂಸ್ಕೃತ, ಅನಾಗರೀಕ, ಕೀಳು ಎಂದೇ ಭಾವಿಸಿ ಬಂಗಾಲಿ ಭಾಷೆ ಅಯೋಗ್ಯ ಹಾಗೂ ಪೈಶಾಚಿಕ ಭಾಷೆ ಎಂದು ನಂಬಿದ್ದರು. ಮಕ್ಕಳಿಗೆ ಆಂಗ್ಲ ದಾದಿಯನ್ನು ನೇಮಿಸಿ ಆಂಗ್ಲ ಭಾಷೆಯಲ್ಲಿ ಶಿಕ್ಷಣ ಕೊಡಿಸಿದರು. ಅರವಿಂದರ ತಂದೆ ಧರ್ಮಿಷ್ಠರಲ್ಲ, ಸದ್ಗುಣಸಂಪನ್ನರಲ್ಲ. ಭಕ್ತಿ ಪರಾಯಣರಲ್ಲ, ಅವರು ಕಡು ಚಾರ್ವಾಕರೂ, ಪಕ್ಕಾ ನಾಸ್ತಿಕರೂ ಮತ್ತು ವಿಲಾಸಿಗಳೂ ಆಗಿದ್ದರು. ಇಂಗ್ಲೆಂಡಿನಲ್ಲಿ ವೈದ್ಯಕೀಯದಲ್ಲಿ ಹೆಚ್ಚಿನ ವ್ಯಾಸಂಗ ಮಾಡಿಕೊಂಡು ಬಂದ ಕೃಷ್ಣಧನರು ಸದಾ ವಿದೇಶಿ ವೇಷಭೂಷಣಗಳಲ್ಲಿದ್ದು ಸಮಾಜಕಲ್ಯಾಣ ಸೇವೆಯಲ್ಲಿ ನಿರತರಾಗಿದ್ದರು. ಕೃಷ್ಣಧನರು ಬ್ರಾಹ್ಮಣಜಾತಿಯಲ್ಲಿ ಹುಟ್ಟಿದವರು ಮತ್ತು ನೊಂದವರಿಗೆ, ಬಡವರಿಗೆ ಕನಿಕರ ತೋರಿಸುತ್ತಿದ್ದರು. ರೋಗಿಗಳಿಗೆ ನಿಷ್ಠೆ ಯಿಂದ ಚಿಕಿತ್ಸೆ ನೀಡುತ್ತಿದ್ದು ಅನೇಕ ಸಂದರ್ಭಗಳಲ್ಲಿ ತಮ್ಮ ಹಣವನ್ನೇ ಬಡರೋಗಿಗಳ ಸಲುವಾಗಿ ಖರ್ಚುಮಾಡಿಬಿಡುತ್ತಿದ್ದರು.

ಅರವಿಂದರ ತಾಯಿ ಸ್ವರ್ಣಲತಾದೇವಿ ಸುಶಿಕ್ಷಿತ ಮಹಿಳೆ, ಶುದ್ಧ ಭಾರ ತೀಯ ಸಂಸ್ಕಾರವನ್ನು ಹೊಂದಿದ ಕುಟುಂಬದಲ್ಲಿ ಜನಿಸಿ, ತಮ್ಮ ಜೀವನದಲ್ಲಿ ಏಕನಿಷ್ಠೆಯನ್ನು, ಧಾರ್ಮಿಕ ಪ್ರವೃತ್ತಿಯನ್ನು ಎಚ್ಚರಿಕೆಯಿಂದ ಆಕೆ ಕಾಪಾಡಿ ಕೊಂಡು ಬಂದಿದ್ದರು. ಕಥೆ, ನಾಟಕಗಳನ್ನು ಬರೆಯುವ ಶಕ್ತಿ ಆಕೆಗಿದ್ದರೂ ಮನೆತನದಲ್ಲಿದ್ದ ಉನ್ಮಾದರೋಗಕ್ಕೆ ಸಿಕ್ಕಿ ಆ ಶಕ್ತಿ ಉಡುಗಿಹೋಯಿತು. ಅರವಿಂದರು ಅಸಾಧಾರಣ ಶಿಶುವಾಗಿದ್ದರೂ ಅವರ ಬಾಲ್ಯಜೀವನ ಅತ್ಯಂತ ಕಹಿ ಹಾಗೂ ನಿರಾಶಾಮಯವಾಗಿತ್ತು. ಮಾನಸಿಕ ಅನಾರೋಗ್ಯದಿಂದ

ನರಳುತ್ತಿದ್ದ ತಾಯಿಯ ಪ್ರೇಮ ಏನೆಂದೂ ಅವರಿಗೆ ಗೊತ್ತಿರಲಿಲ್ಲ. ತುಂಬ ಕಟ್ಟುನಿಟ್ಟಿನ ಬಿಗಿ ಸ್ವಭಾವದ ತಂದೆಯ ಸಂಪರ್ಕವೂ ಅವರಿಗೆ ಹೆಚ್ಚು ಸಿಕ್ಕ ಲಿಲ್ಲ. ಏಳನೆಯ ವಯಸ್ಸಿನಲ್ಲೇ ಅರವಿಂದರು ತಂದೆಯೊಂದಿಗೆ ಇಂಗ್ಲೆಂಡಿಗೆ ಹೋಗಿ ಇಪ್ಪತ್ತೊಂದನೆಯ ವಯಸ್ಸಿನವರೆಗೂ ಅಲ್ಲಿ ವಿದ್ಯಾಭ್ಯಾಸ ಮಾಡಿ ದರು. ಈ ಅವಧಿಯಲ್ಲಿ ಅವರು ತಮ್ಮ ಘನವಾದ ಪಾಂಡಿತ್ಯವನ್ನು ಬೆಳೆಸಿ ಕೊಂಡರು.

ಮನೆಯಲ್ಲೇ ಡ್ರುವೆಟ್ ದಂಪತಿಗಳು ಅರವಿಂದರಿಗೆ ಲ್ಯಾಟಿನ್, ಇಂಗ್ಲೀಷ್, ಇತಿಹಾಸ, ಭೂಗೋಳ, ಗಣಿತ ಮತ್ತು ಫ್ರೆಂಚ್ ಭಾಷೆಗಳನ್ನು ಹೇಳಿ ಕೊಟ್ಟರು. ಇಟಾಲಿಯನ್, ಜರ್ಮನ್ ಮತ್ತು ಸ್ಪ್ಯಾನಿಷ್ ಭಾಷೆಗಳನ್ನೂ ಅರವಿಂದರು ಕಲಿತುಕೊಂಡು ಇಂಗ್ಲಿಷ್, ಫ್ರೆಂಚ್ ಸಾಹಿತ್ಯ, ಆಧುನಿಕ ಮತ್ತು ಮಧ್ಯಯುಗದ ಐರೋಪ್ಯ ಚರಿತ್ರೆಯನ್ನು ಅಭ್ಯಾಸಮಾಡಿದರು. ೧೮೭೯ರಿಂದ ೮೪ರ ವರೆಗೆ ಮ್ಯಾಂಚೆಸ್ಟರಿನಲ್ಲೂ, ೧೮೮೪ರಿಂದ ೯೦ರ ವರೆಗೆ ಲಂಡನ್ನಿನಲ್ಲೂ, ೯೦ರಿಂದ ೯೨ರ ವರೆಗೆ ಕೇಂಬ್ರಿಜ್‌ನಲ್ಲೂ ಅವರ ವಿದ್ಯಾ ಭ್ಯಾಸ ನಡೆಯಿತು. ಪ್ರಾಚೀನ ಕಾವ್ಯಗಳನ್ನೆಲ್ಲ ಓದಿ ಅರ್ಥಮಾಡಿಕೊಂಡ ಅರವಿಂದರು ಅಸಾಧಾರಣ ಬುದ್ಧಿವಂತ ವಿದ್ಯಾರ್ಥಿಯೆಂದು ಪ್ರಖ್ಯಾತಿ ಪಡೆದು ಸಾಹಿತ್ಯದ ಬಟರ್‌ವರ್ತ್ ಮತ್ತು ಇತಿಹಾಸದ ಬೆಡ್‌ಫೋರ್ಡ್ ಬಹುಮಾನಗಳನ್ನು ಪಡೆದರು. ಇಂಗ್ಲೆಂಡಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿ ದ್ದಾಗ ತಂದೆಯಿಂದ ಹಣದ ಸಹಾಯವಿಲ್ಲದೆ ಕಷ್ಟಕಾರ್ಪಣ್ಯಗಳನ್ನು ಎದುರಿಸಿದಾಗಲೂ ಅರವಿಂದರು ಧೈರ್ಯ ಸ್ಥೈರ್ಯದಿಂದ ವಿದ್ಯಾಭ್ಯಾಸ ವನ್ನು ಮುಂದುವರಿಸಿದರಲ್ಲದೆ ವ್ಯಾಸಂಗದಲ್ಲಿ ಅಸಾಧಾರಣ ಪರಿಶ್ರಮ, ಶ್ರದ್ಧೆ, ಪಾಂಡಿತ್ಯವನ್ನು ತೋರಿಸಿದರು. ಕೃಷ್ಣಧನರಿಗೆ ಮಗನಲ್ಲಿ ತುಂಬ ಅಭಿಮಾನ. ಮಗನನ್ನು ಅವರು ಪ್ರೀತಿಯಿಂದ 'ಅರೋ' ಎಂದು ಕರೆಯುತ್ತಿದ್ದರು 'ಅರೋ ಈ ದೇಶಕ್ಕೆ ಕೀರ್ತಿ ತರುತ್ತಾನೆ' ಎಂದು ಅವರು ನುಡಿದ ಮಾತು ದಿಟ ವಾಯಿತು.

ಬೊಕ್ಕೆಯ ಕಲೆಗಳಿದ್ದ ಮುಖ, ಉದ್ದ ಕೂದಲು, ಸ್ವಪ್ನಾವಿಷ್ಟ ಕಣ್ಣು ಗಳು, ಕಪ್ಪು ಛಾಯೆಯ ಮೈ ಬಣ್ಣದ ತರುಣ ಅರವಿಂದರು ಯಾವಾಗಲೂ ಸರಳವಾದ ಧೋತರ, ಅಂಗಿ ತೊಡುತ್ತಿದ್ದರು. ಅವರ ತಿಳಿನಗೆಯಲ್ಲಿ ಮಾರ್ದ

ವತೆ, ಹಾಗೂ ಪಾವಿತ್ರ್ಯವಿತ್ತು ಮತ್ತು ಎಳೆಯ ಮಗುವಿನ ಮುಗ್ಧತೆಯಿತ್ತು. ತಂದೆತಾಯಿಗಳನ್ನು ಅವರು ತುಂಬಾ ಪ್ರೀತಿಸುತ್ತಿದ್ದರು. ಹಣ ಸಂಪಾದಿಸುವ ಮತ್ತು ಪ್ರಸಿದ್ಧಿಗೆ ಬರಬೇಕೆಂಬ ಆಸೆ ಸ್ವಲ್ಪವೂ ಅವರಿಗಿರಲಿಲ್ಲ. ದುರಹಂಕಾರ, ಮಹತ್ವಾಕಾಂಕ್ಷೆಗೆ ಅವರ ಹೃದಯದಲ್ಲಿ ಸ್ಥಳಾವಕಾಶವಿರಲಿಲ್ಲ. ಚಿಕ್ಕಂದಿನಲ್ಲೇ ಎದುರಾದ ಕಷ್ಟಕಾರ್ಪಣ್ಯಗಳು ಅವರ ಮನಸ್ಸಿನ ಮೇಲೆ ವಿಶೇಷ ಪರಿಣಾಮ ಬೀರಿದವು. ಸ್ವಭಾವತಃ ಅರವಿಂದರು ಮಿತಭಾಷಿಗಳು, ಲಜ್ಜಾಸ್ವಭಾವ ದವರು, ದೃಢಮನಸ್ಕರು, ನಿಸ್ವಾರ್ಥಿ, ನಿಷ್ಕಳಂಕ ಜೀವಿ, ಮತ್ತು ಅವರೆಂದೂ ಹೊಗಳಿಕೆಗೆ ಹಿಗ್ಗದೆ, ತೆಗಳಿಕೆಗೆ ಜುಗುಪ್ಸೆಗೊಳ್ಳದೆ ನಿಂದನೆಗಳಿಗೆ ಅಂಜುತ್ತಿರ ಲಿಲ್ಲ. ಸಂಕುಚಿತ ಮನೋಭಾವ, ಅಸೂಯೆ ಮತ್ತು ಸಣ್ಣತನವಿಲ್ಲದೆ ಅವರು ಯಾರನ್ನೇ ಆಗಲಿ ಅವರ ಸುಗುಣಗಳನ್ನು ಒಪ್ಪಿ ಹೊಗಳಿ ದುರ್ಗುಣ ಗಳನ್ನು ಖಂಡಿಸುತ್ತಿದ್ದರು. ನಿರ್ಲಿಪ್ತತೆ ಅವರ ಹುಟ್ಟುಗುಣವಾಗಿತ್ತು. ಅವರದು ವ್ಯಾಪಕವಾದ ದೃಷ್ಟಿ ಮತ್ತು ಎಲ್ಲರೊಂದಿಗೆ ಹೊಂದಿಕೊಂಡು ಹೋಗುವ ಸ್ವಭಾವ. ಏಕಾಂತ ಸ್ವಭಾವದ ಅರವಿಂದರು ನಿರಾಳ ಮತ್ತು ಸಂಯಮದ ಪ್ರತಿಭಾವಂತ ವಿದ್ಯಾರ್ಥಿಯಾಗಿದ್ದುಕೊಂಡು ಸದಾ ತಮ್ಮ ಧ್ಯೇಯ ಮತ್ತು ವಿದ್ಯಾಭ್ಯಾಸದ ಕಡೆ ವಿಶೇಷ ಗಮನ ಕೊಡುತ್ತಿದ್ದರು. ಎಲ್ಲ ರೀತಿಯ ಯೋಗ್ಯತೆ, ಅರ್ಹತೆಯನ್ನು ಪಡೆದುಕೊಂಡು ಭಾಷಾ ಪರೀಕ್ಷೆಗಳಲ್ಲಿ ಉತ್ತಮ ದರ್ಜೆಯಲ್ಲೇ ತೇರ್ಗಡೆ ಹೊಂದಿದರು. ಚಿಕ್ಕ ವಯಸ್ಸಿ ನಲ್ಲೇ ಅವರು ಅಂತರ್ಮುಖಿಗಳು ಮತ್ತು ಧ್ಯಾನಾಸಕ್ತರು.

ಹದಿನಾಲ್ಕನೆಯ ವಯಸ್ಸಿನಲ್ಲೇ ಅರವಿಂದರು 'ಹೆಕ್ಯೂಬಾ' ಎಂಬ ಮೊದಲನೆಯ ಕವನವನ್ನು ಬರೆದರು. ಕೇಂಬ್ರಿಜ್ ಕಾಲೇಜಿನಲ್ಲಿ ಶಿಷ್ಯವೇತನ ವನ್ನು ಪಡೆದು ಅಲ್ಲೂ ವಿಖ್ಯಾತರಾದರು. 'ಇಂಡಿಯನ್ ಸಿವಿಲ್ ಸರ್ವಿಸ್'' ಬಹಿರಂಗ ಸ್ಪರ್ಧೆಯಲ್ಲಿ ಅವರು ಯಾವ ಶಿಕ್ಷಕರ ಸಹಾಯವೂ ಇಲ್ಲದೆ ಭಾಗ ವಹಿಸಿ ಶ್ರೇಷ್ಠ ಶ್ರೇಣಿಯಲ್ಲಿ ಉತ್ತೀರ್ಣರಾದರು. ಅಪೇಕ್ಷೆಯಿದ್ದಲ್ಲಿ ಅವರು ಇಂಗ್ಲೆಂಡಿನಲ್ಲೇ ಒಳ್ಳೆಯ ಹುದ್ದೆ ಹೊಂದಿ ಬೇಕಾದಷ್ಟು ಹಣ ಸಂಪಾದಿಸಿ ಶ್ರೀಮಂತರಾಗಬಹುದಾಗಿತ್ತು. ಆದರೆ ದೇಶಪ್ರೇಮಿಗಳೂ, ಸರಳಜೀವಿಗಳೂ, ಲೌಕಿಕ ಸಂಪತ್ತಿನಲ್ಲಿ ನಿರಾಸಕ್ತರೂ ಆಗಿದ್ದ ಅರವಿಂದರು ಬೇಕೆಂದೇ ಕುದುರೆ ಸವಾರಿಯ ಪರೀಕ್ಷೆಗೆ ಹೋಗದೆ ಇಂಗ್ಲೆಂಡಿನ ಉನ್ನತ ಹುದ್ದೆಗೆ ಸೇರಿಕೊಳ್ಳದೆ

ಭಾರತಕ್ಕೆ ಹಿಂತಿರುಗಿದರು. ಅವರು ಇಂಗ್ಲೆಂಡಿನಲ್ಲಿ ಓದುತ್ತಿದ್ದಾಗಲೇ ಬ್ರಿಟಿಷ್ ಸರ್ಕಾರದ ದೌರ್ಜನ್ಯ, ಧೋರಣೆ, ಅದರಿಂದ ಭಾರತೀಯರಿಗಾಗುತ್ತಿದ್ದ ಅಪಮಾನ ಇವುಗಳನ್ನು ಕುರಿತಾದ ಸುದ್ದಿಗಳು ದಿನಪತ್ರಿಕೆಗಳಲ್ಲಿ ಬರುತ್ತಿದ್ದವು. ಇವುಗಳನ್ನು ಓದಿದಾಗಲೆಲ್ಲಾ ಅರವಿಂದರ ರಕ್ತ ರೋಷದಿಂದ ಕುದಿಯುತ್ತಿತ್ತು. ಅವರು ಭಾರತದ ಅಸಹಾಯಕತೆ ಹಾಗೂ ದುಃಸ್ಥಿತಿಗಾಗಿ ಮರುಗಿ ಇದಕ್ಕೆ ಕಾರಣವಾದ ರಾಜಕೀಯ ದಾಸ್ಯದಿಂದ ಭಾರತದೇಶವನ್ನು ಬಿಡುಗಡೆ ಮಾಡಬೇಕೆಂದು ತೀರ್ಮಾನಿಸಿದರು. ಕೇಂಬ್ರಿಜ್‌ನಲ್ಲಿ 'ಇಂಡಿಯನ್ ಮಜಲಿಸ್' ಎಂಬ ಸಂಸ್ಥೆಯನ್ನು ಅವರು ಸ್ಥಾಪಿಸಿದರು. ಈ ಸಂಸ್ಥೆಯಲ್ಲಿದ್ದ ಭಾರತೀಯ ದೇಶಾಭಿಮಾನಿ ವಿದ್ಯಾರ್ಥಿಗಳೆಲ್ಲ ಭಾರತದೇಶದ ಆಗುಹೋಗುಗಳನ್ನು ಎಚ್ಚರಿಕೆಯಿಂದ ಗಮನಿಸುತ್ತಾ, ದಾಸ್ಯವಿಮೋಚನೆಗೆ ಹೇಗೆ ದುಡಿಯುವುದು, ಅದಕ್ಕಿರುವ ಮಾರ್ಗ, ರಾಜಕೀಯದ ಒಲವು ನಿಲುವು ಇವುಗಳನ್ನು ಕುರಿತು ಚರ್ಚಿಸುತ್ತಿದ್ದರು. ಆ ಸಂಸ್ಥೆಯಲ್ಲಿ ಅರವಿಂದರು ಭಾರತದ ದಾಸ್ಯವಿಮೋಚನೆಯ ಅವಶ್ಯಕತೆಯನ್ನು ಪ್ರತಿಪಾದಿಸುತ್ತಿದ್ದರು.

ಆಟಗಳಲ್ಲಿ ಅರವಿಂದರಿಗೆ ಸ್ವಲ್ಪವೂ ಆಸಕ್ತಿಯಿರಲಿಲ್ಲ. ಆಡುವವರನ್ನು ಮಾತ್ರ ಅವರು ನೋಡುತ್ತಿದ್ದರು. ಅಂಗಸಾಧನೆಗಿಂತ ಆತ್ಮಸಾಧನೆಯಲ್ಲೇ ಅವರಿಗೆ ವಿಶೇಷ ಶ್ರದ್ಧೆಯಿತ್ತು. ಎಳೆತನದಲ್ಲಿ ದೇವರು, ಧರ್ಮ ಮುಂತಾದ ವಿಚಾರಗಳಲ್ಲಿ ಅವರಿಗೆ ಆಸಕ್ತಿಯಿರಲಿಲ್ಲ. ತುಂಬ ಅಂಜುಬುರುಕರಾಗಿದ್ದರು. ಸ್ವಾರ್ಥವೂ ಅವರಲ್ಲಿತ್ತು. ಅದು ತಪ್ಪೆಂದು ತಿಳಿದ ಮೇಲೆ ಆ ದುರ್ಗುಣದಿಂದ ಬಿಡುಗಡೆ ಹೊಂದಲು ಅವರು ಪ್ರಯತ್ನಿಸಿ ಸಫಲರಾದರು. ಅರವಿಂದರು ವಿದೇಶದಲ್ಲಿ ಜೀವನ ನಡೆಸುತ್ತಿದ್ದಾಗ ದಾರಿದ್ರ್ಯದ ಅಗ್ನಿಪರೀಕ್ಷೆಯನ್ನೂ ಧೈರ್ಯದಿಂದ ಎದುರಿಸಿ ತೇರ್ಗಡೆಯಾದರು. ಸಾಹಿತ್ಯಸಂಘಗಳಲ್ಲಿ ಅವರು ಉತ್ಸಾಹದಿಂದ ಭಾಗವಹಿಸಿ ಕೀರ್ತಿ ಪಡೆದರು. ಶೇಕ್ಸ್‌ಪಿಯರ್, ಬೈಬಲ್, ಕೀಟ್ಸ್ ಮತ್ತು ಹೆಸರಾಂತ ಸಾಹಿತಿಗಳ ಕೃತಿಗಳನ್ನು ಓದಿ ಕವಿತೆಗಳನ್ನೂ ಬರೆಯಲು ಪ್ರಾರಂಭಿಸಿದರು. ಚರ್ಚಾಸ್ಪರ್ಧೆಗಳಲ್ಲೂ ಅವರು ಭಾಗವಹಿಸುತ್ತಿದ್ದರು. ವಿದ್ಯಾರ್ಥಿಯಾಗಿದ್ದಾಗಲೇ ಅವರು ವಿದೇಶಿ ಭಾಷೆಗಳ ಮೇಲೆ ಅಸಾಧಾರಣವಾದ ಪಾಂಡಿತ್ಯ ಮತ್ತು ಕವಿತಾರಚನಾ ಕೌಶಲ್ಯದ ಮೇಲೆ

ಅತ್ಯದ್ಭುತ ಪ್ರಭುತ್ವವನ್ನು ಸಂಪಾದಿಸಿದರು. ಪುಸ್ತಕ ಪ್ರೇಮಿಗಳಾಗಿದ್ದ ಅರವಿಂದರು ಓದುತ್ತಿದ್ದಾಗ ಸುತ್ತಲಿನ ಪ್ರಪಂಚವನ್ನೇ ಮರೆಯುತ್ತಿದ್ದರು. ಮಹಾಪ್ರತಿಭಾಶಾಲಿ, ಪ್ರಾಚೀನ ಕಾವ್ಯ, ಕಲೆಗಳ ವಿದ್ವಾಂಸರಾದ ಅವರ ಭವ್ಯ ಜೀವನದ ಸ್ಥೂಲವಾದ ಅಡಿಪಾಯ ಇದೇ ಕಾಲಾವಧಿಯಲ್ಲಿ ರೂಪು ಗೊಂಡಿತು.

ಅರವಿಂದರು ಇಂಗ್ಲೆಂಡಿನಲ್ಲಿ ತಮ್ಮ ವಿದ್ಯಾಭ್ಯಾಸವನ್ನು ಮುಗಿಸಿ ಭಾರತಕ್ಕೆ ಸ್ವಾತಂತ್ರ್ಯ ತಂದುಕೊಟ್ಟು ಜನರ ದುಃಖ, ದಾರಿದ್ರ್ಯ, ಕಷ್ಟ, ಅಜ್ಞಾನ, ಮತ್ತು ಅನಾರೋಗ್ಯ ನಿವಾರಣೆ ಮಾಡುವ ಉದ್ದೇಶ್ಯದಿಂದ ೧೮೯೩ರಲ್ಲಿ ತಾಯ್ನಾಡಿಗೆ ಬಂದರು. ಮಗ ಪ್ರಯಾಣ ಮಾಡುತ್ತಿರುವ ಹಡಗು ಮುಳುಗಿ ಹೋಯಿತೆಂಬ ಸುದ್ದಿ ಕೇಳಿದ ಕೂಡಲೆ ಕೃಷ್ಣಧನರು ಹೃದಯಾಘಾತದಿಂದ ಮೃತಪಟ್ಟರು. ಆದರೆ ಆ ಹಡಗಿನಲ್ಲಿ ಅರವಿಂದರು ಇರದೆ, ಬೇರೆ ಹಡಗಿನಲ್ಲಿ ಭಾರತಕ್ಕೆ ಬಂದರು. ಬಡೋದೆಯ ಸಂಸ್ಥಾನದ ಮಹಾರಾಜರ ಬಳಿ ಅವರು ಕೆಲಸಕ್ಕೆ ಸೇರಿಕೊಂಡರು. ಅಲ್ಲಿ ಅವರಿಗೆ ದಿನೇಂದ್ರಕುಮಾರ ರಾಯನ ನೆರವಿನಿಂದ ಬಂಗಾಲಿಭಾಷೆ ಮತ್ತು ಸಾಹಿತ್ಯದ ಪರಿಚಯವಾಯ್ತು. ಅವರು ಭಾರತದ ವೈಭವಯುಕ್ತ ಪರಂಪರೆಯನ್ನು ಸಂಪೂರ್ಣವಾಗಿ ಅರಿತುಕೊಂಡರು. ಭಾರತದ ಇತಿಹಾಸ, ಸಂಸ್ಕೃತಿಗಳನ್ನು ಅಭ್ಯಾಸಮಾಡಿದ ಅರವಿಂದರು ಬಂಗಾಲಿ, ಸಂಸ್ಕೃತ, ಮರಾಠಿ ಮುಂತಾದ ಅನೇಕ ಭಾರತೀಯ ಭಾಷೆಗಳನ್ನು ಕಲಿತುಕೊಂಡರು. ನಂತರ ಬಡೋದಾ ಕಾಲೇಜಿನ ಪ್ರಿನ್ಸಿಪಾಲರಾಗಿದ್ದಾಗಲೂ ಅವರು ಮಹಾರಾಜರ ಅನೇಕ ಖಾಸಗಿ ಕೆಲಸಗಳನ್ನು ಮಾಡಿಕೊಡುತ್ತಿದ್ದರು. ಸಹ ಅಧ್ಯಾಪಕರ ಮತ್ತು ವಿದ್ಯಾರ್ಥಿಗಳ ಒಲವು, ವಿಶ್ವಾಸಗಳನ್ನೂ ಅವರು ಗಳಿಸಿದರು. ಕಾಲೇಜಿನ ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದ ಅರವಿಂದರ ಸಾಧು ಸ್ವಭಾವ, ಉದಾತ್ತ ಮನೋಭಾವ, ಪ್ರತಿಭೆ ಹಾಗೂ ರಸವಾಣಿಗೆ ವಿದ್ಯಾರ್ಥಿವೃಂದ ಮನಸೋತಿತು. ಸಂಸ್ಕೃತ ಭಾಷೆ ಕಲಿತ ಮೇಲೆ ಅವರಿಗೆ ಭಾರತೀಯ ಸಂಸ್ಕೃತಿಯ ಅಪಾರ ಭಂಡಾರವೇ ಸಿಕ್ಕಿತು. ಉಪನಿಷತ್ತು, ಗೀತೆ, ಪುರಾಣಗಳು, ರಾಮಾಯಣ, ಮಹಾಭಾರತ, ಕಾಳಿದಾಸನ ನಾಟಕಗಳು ಎಲ್ಲವನ್ನೂ ಅವರು ಓದಿಕೊಂಡರು. ಪ್ರಾಚೀನ ಭಾರತದ ಹಿರಿಮೆಯ ದರ್ಶನವಾಗಿ ಅವರು ಭಾರತದ ಉಜ್ವಲ ಭವಿಷ್ಯ ಕುರಿತು ಚಿಂತಿಸಿದರು.

ಇಂಗ್ಲೆಂಡಿನಲ್ಲಿ ಹಲವಾರು ವರ್ಷಗಳು ಶಿಕ್ಷಣ ಪಡೆದುಕೊಂಡ ಅರವಿಂದರು ಪಾಶ್ಚಾತ್ಯ ವಿಚಾರ, ಜೀವನ ರೀತಿ, ಸಂಸ್ಕೃತಿಯನ್ನು ಚೆನ್ನಾಗಿ ತಿಳಿದು ಕೊಂಡಿದಲ್ಲದೆ ಪೂರ್ವ ಪಾಶ್ಚಾತ್ಯ ಸಂಸ್ಕೃತಿಗಳೆರಡೂ ಸಮನ್ವಯ ಗೊಳ್ಳುವುದು ಅಗತ್ಯವೆಂದರು. ಒಂದು ತಿಂಗಳ ಸಾಧನೆಯಲ್ಲಿ ಅವರು ಹಿಂದೂ ಧರ್ಮಶಾಸ್ತ್ರದ ಸತ್ಯಾರ್ಥವನ್ನು ಜೀರ್ಣಿಸಿಕೊಂಡರು. ಯಾವ ಕೆಟ್ಟ ಹಾಗೂ ದುಬಾರಿ ಹವ್ಯಾಸವಿಲ್ಲದೆ ಅವರು ಸರಳ ಜೀವನ ನಡೆಸುತ್ತಿದ್ದರು. ಬೇಸರ ವಿಲ್ಲದೆ ಇಡೀ ದಿನ ಪುಸ್ತಕ ಓದುತ್ತಿದ್ದರು. ಉಡುಪು ಹಾಗೂ ಆಹಾರಕ್ಕೆ ಅವರೆಂದೂ ಪ್ರಾಮುಖ್ಯತೆ ಕೊಡಲಿಲ್ಲ.

೧೯೦೧ರಲ್ಲಿ ಅರವಿಂದರು ತಮ್ಮ ೨೯ನೇ ವಯಸ್ಸಿನಲ್ಲಿ ಮೃಣಾಲಿನಿ ಯನ್ನು ಮದುವೆಯಾದರು. ವಿದೇಶಿಪ್ರವಾಸ ಮಾಡಿದ್ದ ಅವರು ಪ್ರಾಯ ಶ್ಚಿತ್ತ ಮಾಡಿಕೊಂಡು ಮದುವೆಯಾಗಬೇಕೆಂದು ಹಿರಿಯರು ಒತ್ತಾಯ ಪಡಿಸಿ ದಾಗ ನಂಬಿಕೆಯಿಲ್ಲದಿದ್ದರೂ ಅರವಿಂದರು ಪುರೋಹಿತರಿಗೆ ಕೈತುಂಬಾ ದಕ್ಷಿಣೆ ಕೊಟ್ಟು ಮದುವೆಯಾದರು. ಮದುವೆಯಾದ ಏಳೆಂಟು ವರ್ಷಗಳಲ್ಲೇ ಅವರು ಸ್ವಾತಂತ್ರ್ಯ ಹೋರಾಟ ಮತ್ತು ಆಧ್ಯಾತ್ಮಿಕ ಜೀವನದ ಪ್ರಬಲ ಸೆಳೆತಕ್ಕೆ ಸಿಕ್ಕಿ ವೈವಾಹಿಕ ಜೀವನದಿಂದ ದೂರವಾದರು. ಮೃಣಾಲಿನಿ ಸಂಯಮ, ಸಹನೆ ಹಾಗೂ ಧರ್ಮನಿಷ್ಠೆಯುಳ್ಳ ಮಹಿಳೆ. ಆಕೆ ಗಂಡನಿಂದ ಸಾಯುವವ ರೆಗೂ ದೂರವಾಗಿದ್ದುಕೊಂಡೇ ಜೀವಿಸಿದರು. ಹೆಂಡತಿಗೆ ಜೀವನ ನಿರ್ವಹಣೆಗೆ ಹಣವನ್ನು ಕಳುಹಿಸುವುದೂ ಅವರಿಗೆ ಒಮ್ಮೊಮ್ಮೆ ಸಾಧ್ಯವಾಗುತ್ತಿರಲಿಲ್ಲ. ಆದರೂ ಆಕೆ ಸಂತೋಷ ಸಮಾಧಾನದಿಂದ ದೂರದಲ್ಲಿದ್ದುಕೊಂಡೇ ಗಂಡನ ಚಟುವಟಿಕೆಗಳನ್ನು ಆಸಕ್ತಿಯಿಂದ ಗಮನಿಸುತ್ತಿದ್ದರು. ನಂತರ ಅರವಿಂದರು ಶಾಶ್ವತವಾಗಿ ದಾಂಪತ್ಯ ಜೀವನದಿಂದ ದೂರವಾಗಿ ಬ್ರಹ್ಮಚರ್ಯವ್ರತ ಸ್ವೀಕರಿ ಸಿದರು. 'ಭೌತಿಕ ಆಶೆಗಳಿಗೆ, ಪ್ರಾಪಂಚಿಕ ಸುಖಗಳಿಗೆ ಬಲಿಯಾಗಿ ದುಃಖಿ ಯಾಗಬೇಡ. ಶಕ್ತಿಸ್ವರೂಪಳಾದ ಹೆಂಡತಿ ಗಂಡನ ಶಕ್ತಿಯನ್ನು ಹೆಚ್ಚಿಸಬೇಕು. ಆದ್ದರಿಂದ ನನ್ನಲ್ಲಿರುವ ದೈವೀಶಕ್ತಿಯನ್ನು ತೆಗೆದುಕೊಂಡು, ದೇವರನ್ನು ನೀನು ಆಶ್ರಯಿಸಿ ನನ್ನೊಂದಿಗೆ ಆಧ್ಯಾತ್ಮ ಜೀವನವನ್ನು ನಡೆಸು. ಆದರೆ ನನ್ನನ್ನು ಮಾತ್ರ ಸಂಸಾರ ಕೂಪಕ್ಕೆ ಎಳೆಯಬೇಡ' ಎಂದು ಅವರು ಹೆಂಡತಿಗೆ ಬೋಧಿಸಿದರು. ೧೯೧೮ರಲ್ಲಿ ಅರವಿಂದರು ಪಾಂಡಿಚೇರಿಯಲ್ಲಿದ್ದಾಗ ಮೃಣಾ

ಲಿನಿ ಅವರ ಬಳಿಗೆ ಹೋಗಲು ಬಯಸಿದಾಗ ಬರುವಂತೆ ಅರವಿಂದರು ಆಕೆಗೆ ಅನುಮತಿಕೊಟ್ಟರು. ಆದರೆ ಮೃಣಾಲಿನಿಯವರು ಪ್ರಯಾಣಮಾಡುತ್ತಿದ್ದಾಗ ಇನ್‌ಫ್ಲೂಎಂಜಾ ಕಾಯಿಲೆಗೆ ಸಿಕ್ಕಿ ಮೃತ್ಯುವಶರಾದರು.

ಅರವಿಂದರ ದೃಷ್ಟಿಯಲ್ಲಿ ಭಾರತ ಸಜೀವ ದೇವತೆ ಹಾಗೂ ಅವರ ಆತ್ಮದ ಮಾತೃಭೂಮಿಯಾಗಿತ್ತು. ಮಾತೃಭೂಮಿಯನ್ನು ಅವರು ನಿಃಸ್ವಾರ್ಥತೆ, ನಿಷ್ಕಲ್ಮಷ ಹಾಗೂ ಉದಾತ್ತ ಮನಸ್ಸಿನಿಂದ ಪೂಜಿಸುತ್ತಿದ್ದರು, ಪ್ರೀತಿಸುತ್ತಿದ್ದರು. ಬ್ರಿಟಿಷ್ ಸರ್ಕಾರದ ಆಡಳಿತದ ಅಧೀನದಲ್ಲಿದ್ದ ಭಾರತದ ಅಂದಿನ ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತಿಗತಿಗಳನ್ನೆಲ್ಲ ಅವರು ಚೆನ್ನಾಗಿ ಅಭ್ಯಾಸ ಮಾಡಿದರು. ಭಾರತೀಯರ ದಾರಿದ್ರ್ಯ, ಕಷ್ಟ ಪರಿಸ್ಥಿತಿಯ ಭೀಕರ ಸ್ವರೂಪ ಕಂಡು ಕಣ್ಣೀರಿಟ್ಟರು. ಮಳೆ ಬೆಳೆಯಿಲ್ಲದೆ ಹೊಟ್ಟೆಗಿಲ್ಲದೆ ಸಂಕಟಪಡುತ್ತಿದ್ದ ರೈತರಿಂದ ಸರ್ಕಾರ ನಿಷ್ಕರುಣೆಯಿಂದ ಕಂದಾಯ ವಸೂಲ್ಮಾಡುತ್ತಿತ್ತು. ಇಂಗ್ಲೆಂಡಿನಲ್ಲಿ ವಿದ್ಯಾಭ್ಯಾಸ ಮುಗಿಸಿ ಅರವಿಂದರು ಭಾರತಕ್ಕೆ ಬಂದಾಗ ಅವರಿನ್ನೂ ಇಪ್ಪತ್ತೊಂದು ವರ್ಷದ ಬಿಸಿ ರಕ್ತದ ತರುಣರು. ಈ ದಾಸ್ಯದಿಂದ ಹೇಗಾದರೂ ಸರಿ, ಎಷ್ಟು ತೊಂದರೆಯಾದರೂ ಚಿಂತೆಯಿಲ್ಲ ಭಾರತವನ್ನು ಬಿಡುಗಡೆ ಮಾಡಲೇಬೇಕೆಂದು ಅವರು ನಿರ್ಧರಿಸಿದರು. ಶ್ರೇಷ್ಠ ಸಾಹಿತಿಗಳೂ, ಅಪಾರ ಅನುಭವವುಳ್ಳವರೂ, ಸುಸಂಸ್ಕೃತರೂ ಆದ ಅರವಿಂದರು ಅತ್ಯಂತ ಶ್ರದ್ಧೆ ಮತ್ತು ನಿಷ್ಠೆಯಿಂದ ಭಾರತದ ಹೀನಸ್ಥಿತಿ ಕಣ್ಣಿಗೆ ಕಟ್ಟುವಂತೆ ಲೇಖನಗಳನ್ನು ಬರೆದು ಪತ್ರಿಕೆಗಳಲ್ಲಿ ಪ್ರಕಟಿಸಿದರು. 'ವಂದೇ ಮಾತರಂ' ಎಂಬ ಪತ್ರಿಕೆಯಲ್ಲಿ ಅವರು ಪ್ರತಿನಿತ್ಯವೂ ರಾಜಕೀಯ ವಿಚಾರಗಳನ್ನು ಕುರಿತು ಬರೆಯುತ್ತಿದ್ದರು. ಅವರ ಲೇಖನಗಳು, ಭಾಷಣಗಳು, ಮತ್ತು ಪುಸ್ತಕಗಳು ಜನತೆಯಲ್ಲಿ ದೇಶಾಭಿಮಾನದ ಕಿಡಿ ಹೊತ್ತಿಸಿದವು. 'ವಂದೇ ಮಾತರಂ' ಘೋಷಿಸಬಾರದೆಂದು ಸರ್ಕಾರ ಆಜ್ಞೆ ವಿಧಿಸಿದಾಗ ಅನೇಕ ಕ್ರಾಂತಿಕಾರಿ ಸಂಘ ಸಂಸ್ಥೆಗಳು ಅರವಿಂದರ ಮುಖಂಡತ್ವದಲ್ಲಿ ಅದೇ ಮಂತ್ರದ ಹೆಸರಿನಲ್ಲಿ ಚಳುವಳಿ ಹೂಡಿದವು. ಅರವಿಂದರು ಗುಪ್ತ ಕ್ರಾಂತಿ ಕಾರ್ಯಗಳಿಗಾಗಿ ಜನಬಲ ಮತ್ತು ಧನಬಲವನ್ನು ಶೇಖರಿಸಿದರು.

ಏಳುನೂರು ರೂಪಾಯಿ ವೇತನದ ಬರೋಡ ಸಂಸ್ಥಾನದ ಸರ್ಕಾರ ಕೆಲಸ ಬಿಟ್ಟು ಅರವಿಂದರು ಕಲ್ಕತ್ತೆಯಲ್ಲಿ ಕೇವಲ ನೂರು ರೂಪಾಯಿನ

ಕಾಲೇಜಿನ ಪ್ರಿನ್ಸಿಪಾಲರ ಹುದ್ದೆಗೆ ಸೇರಿಕೊಂಡು ತಮ್ಮ ರಾಜಕೀಯ ಚಟುವಟಿಕೆಗಳನ್ನು ತೀವ್ರಗೊಳಿಸಿದರು. ಫ್ರೆಂಚ್‌ಕ್ರಾಂತಿಯ ಬಗ್ಗೆ ಅವರಿಗಿದ್ದ ಪ್ರೀತಿ, ಐರ್ಲೆಂಡಿನ ದೇಶಭಕ್ತರ ಬಗ್ಗೆ ಇದ್ದ ಮೆಚ್ಚುಗೆ ಮತ್ತು ಭಾರತ ಸ್ವಾತಂತ್ರ್ಯದ ಬಗ್ಗೆ ಇದ್ದ ಆಕಾಂಕ್ಷೆ ಇವುಗಳ ಒತ್ತಡಕ್ಕೆ ಸಿಕ್ಕಿ ಯುವಕರು ಸ್ಥಾಪಿಸಿದ 'ಕಮಲ ಮತ್ತು ಕೃಪಾಣ' ಸಂಘಕ್ಕೆ ಅರವಿಂದರು ಸೇರಿಕೊಂಡು ಭಾರತದ ಸ್ವಾತಂತ್ರ್ಯಕ್ಕಾಗಿ ಶ್ರಮಿಸಿದರು. ಛಿದ್ರ ಛಿದ್ರವಾಗಿದ್ದ ಮತ್ತು ಹಳೆಯ ಹಾದಿಯನ್ನೇ ತುಳಿಯುತ್ತಿದ್ದ ಕಾಂಗ್ರೆಸ್ ಸಂಸ್ಥೆಯನ್ನು ಅವರು ನಿರ್ದಾಕ್ಷಿಣ್ಯವಾಗಿ ಖಂಡಿಸಿದರು. ಯಾಕೆಂದರೆ ಅಂದಿನ ಕಾಂಗ್ರೆಸ್ ಸಂಸ್ಥೆ ಅನುಸರಿಸುತ್ತಿದ್ದ ರೀತಿ ನೀತಿಗಳು ಸತ್ತ್ವಹೀನವಾಗಿದ್ದವು ಮತ್ತು ಸ್ವಾತಂತ್ರ ಸಂಪಾದನೆ ಅದರ ಉದ್ದೇಶ್ಯವಾಗಿರಲಿಲ್ಲ. ಅದು ಬ್ರಿಟಿಷ್ ಸರ್ಕಾರದ ಕೃಪಾ ಕಟಾಕ್ಷಕ್ಕಾಗಿ ಸರಕಾರದ ಆಡಳಿತವನ್ನೇ ಹೊಗಳುತ್ತಿತ್ತು. ಅರವಿಂದರು ಕಾಂಗ್ರೆಸ್ ಗುರಿಯನ್ನು, ಮುಖಂಡತ್ವವನ್ನು, ಸಾಧನೆಯನ್ನು ಬಹಿರಂಗ ವಾಗಿ ಟೀಕಿಸಿ ಕಾಂಗ್ರೆಸ್ಸಿನ ಅಸಮಾಧಾನಕ್ಕೆ ಗುರಿಯಾದರು. ಬ್ರಿಟಿಷ್ ಸರ್ಕಾರ ಅವರ ಮೇಲೆ ಸಿಟ್ಟಾಯಿತು. ಹೆದರದೆ ಅರವಿಂದರು ರಾಷ್ಟ್ರನಾಯಕ ರಾದ ತಿಲಕ್, ಲಜಪತರಾಯ್ ಮುಂತಾದವರ ನೆರವು ಪಡೆದು ಸ್ವಾತಂತ್ರ ಪಡೆಯುವುದು ಕಾಂಗ್ರೆಸ್ಸಿನ ಮುಖ್ಯ ಗುರಿ ಎಂದು ತೀರ್ಮಾನಿಸಿ ಸ್ವಾತಂತ್ರ ಚಳುವಳಿಯಲ್ಲಿ ಧುಮುಕಿದರು.

ತಪಸ್ಸಿನ ಫಲದಿಂದ ಮುಕ್ತಿಯನ್ನು ಹೊಂದುವುದಾದರೆ ಅದೇ ತಪಸ್ಸಿನ ಬಲದಿಂದ ದೇಶಕ್ಕೆ ಏಕೆ ಸ್ವಾತಂತ್ರ ತಂದುಕೊಡಬಾರದು ಎನ್ನುವ ಪ್ರಯತ್ನದಲ್ಲಿ ಅರವಿಂದರು ಯೋಗಾಭ್ಯಾಸ ಪ್ರಾರಂಭಿಸಿದರು. ಮಹಾರಾಷ್ಟ್ರದ ಶ್ರೇಷ್ಠ ಯೋಗಿ ಲೇಲೆಯವರು ಅವರಿಗೆ ಯೋಗಾಭ್ಯಾಸದಲ್ಲಿ ನೆರವಾದರು. ರಾಷ್ಟ್ರೀಯ ಚಳುವಳಿ, ಸ್ವಾತಂತ್ರ್ಯ ಸಂಗ್ರಾಮ ಮತ್ತು ಯೋಗಾಭ್ಯಾಸ ಎಲ್ಲವನ್ನೂ ಅವರು ಒಟ್ಟಾಗಿ ಸಾಗಿಸಿದರು. ಅವರ ದೃಷ್ಟಿಯಲ್ಲಿ ಯೋಗಾಭ್ಯಾಸ ದಿಂದ ಕೇವಲ ಪಾರಮಾರ್ಥಿಕ ಸಿದ್ಧಿಗಳನ್ನು ಪಡೆಯುವುದು ಮಾತ್ರವಲ್ಲ, ಭಾರತಕ್ಕೆ ಸ್ವಾತಂತ್ರ್ಯ ತಂದುಕೊಡುವುದೂ ಸಾಧ್ಯ. ಯೋಗಾಭ್ಯಾಸದ ಪ್ರಥಮ ಮೆಟ್ಟಲಿಂದ ಪ್ರಾಣಾಯಾಮವನ್ನು ಅವರು ಬ್ರಹ್ಮಾನಂದರೆಂಬ ಸಾಧುಗಳ ನೇತೃತ್ವದಲ್ಲಿ ಪ್ರಾರಂಭಿಸಿದರು. ಆ ಸಾಧನೆ ಅವರನ್ನು ಆತ್ಮ

ಸಾಕ್ಷಾತ್ಕಾರದ ಕಡೆಗೆ ಕರೆದೊಯ್ಯುತ್ತಿತ್ತು. ಯೋಗಾಭ್ಯಾಸದ ಜೊತೆಗೆ ಅವರ ಕಾವ್ಯಾಭ್ಯಾಸ ಮತ್ತು ಕಾವ್ಯರಚನೆಯೂ ವೃದ್ಧಿಸಿತು. ರಾಜಕೀಯ ಚಟುವಟಿಕೆಗಳ ಸಂದರ್ಭದಲ್ಲಿ ಅವರಿಗೆ ಜಗದೀಶ ಚಂದ್ರಬೋಸ್, ನಿವೇದಿತಾ, ಠಾಕೂರ್ ಮುಂತಾದವರ ಪರಿಚಯವಾಯ್ತು. ಅರವಿಂದರ ಯೋಗಾಭ್ಯಾಸಕ್ಕೆ ನೆರವಾದ ಲೇಲೆಯವರು ಅವರಿಗೆ ರಾಜಕೀಯದಿಂದ ದೂರವಾಗೆಂದು ಸಲಹೆ ನೀಡಿದಾಗ ಅರವಿಂದರು ಲೇಲೆಯವರಿಂದಲೇ ದೂರವಾದರು. ೧೯೦೮ರಲ್ಲಿ ಕ್ರಾಂತಿಕಾರಿ ಚಳುವಳಿಯ ಮುಖಂಡರಾದ ಅರವಿಂದರನ್ನು ಬ್ರಿಟಿಷ್ ಸರ್ಕಾರ ಬಂಧಿಸಿ ಜೈಲಿನಲ್ಲಿ ಕೈದಿಯಾಗಿಟ್ಟಿತು. ಜೈಲಿನ ಏಕಾಂತತೆ ಅವರ ಆಧ್ಯಾತ್ಮಿಕ ಸಾಧನೆಗೆ ಅನುಕೂಲವಾಯಿತು. ಅಲ್ಲಿ ಅವರು ಗೀತೆ, ಉಪನಿಷತ್ತುಗಳನ್ನು ಪಠಿಸಿ, ಗೀತಾಯೋಗವನ್ನು ಸಾಧನೆಮಾಡಿ, ಉಪನಿಷತ್ತುಗಳ ಸಹಾಯದಿಂದ ತಪಸ್ಸನ್ನಾಚರಿಸಿ ಅನೇಕ ಆಧ್ಯಾತ್ಮಿಕ ಅನುಭವಗಳನ್ನು ಪಡೆದುಕೊಂಡರು. ಜೈಲಿನಲ್ಲೇ ಅವರಿಗೆ ಹಿಂದೂಧರ್ಮದ ಪರಮ ಸತ್ಯದ, ಆತ್ಮದ ಸಾಕ್ಷಾತ್ಕಾರವಾಯಿತು.

ಸೆರೆಮನೆಯಿಂದ ಬಿಡುಗಡೆ ಹೊಂದಿ ಹೊರಗೆ ಬಂದ ಮೇಲೆ ಅರವಿಂದರು 'ಧರ್ಮ' ಎಂಬ ಬಂಗಾಳಿ ಭಾಷೆಯ ಮತ್ತು 'ಕರ್ಮಯೋಗಿ' ಎಂಬ ಆಂಗ್ಲ ಭಾಷೆಯ ವಾರಪತ್ರಿಕೆಗಳನ್ನು ಪ್ರಾರಂಭಿಸಿ, 'ಬಂಗಾಳ ರಾಷ್ಟ್ರೀಯ ಸಂಘ' ಎಂಬ ಸಂಸ್ಥೆಯನ್ನು ಕಟ್ಟಿ ಬ್ರಿಟಿಷ್ ಸರ್ಕಾರದ ವಿರುದ್ಧ ಚಳುವಳಿ ಹೂಡಿದರು. ಸ್ವಾತಂತ್ರಕ್ಕಾಗಿ ಹಂಬಲಿಸುತ್ತಿದ್ದ ದೇಶಾಭಿಮಾನಿ ತರುಣ ಜನಾಂಗಕ್ಕೆ ಅವರು ಪ್ರೀತಿಯ ಮುಖಂಡರಾದರು. ಯುವಕರಿಂದಲೇ ಭಾರತದ ಸ್ವಾತಂತ್ರ ಸಾಧ್ಯ ಎಂದು ದೃಢವಾಗಿ ನಂಬಿದ್ದ ಅರವಿಂದರು ದೇಶಸೇವೆಗೆ ಯುವ ಜನಾಂಗವನ್ನು ಸಿದ್ಧಗೊಳಿಸಲು ಅವರಲ್ಲಿ ಧೈರ್ಯ, ಸಾಹಸ, ಸ್ಫೂರ್ತಿ, ಶಕ್ತಿಯನ್ನು ತುಂಬಿ ಆಧ್ಯಾತ್ಮಿಕ ಭಾವನೆಗಳನ್ನು ಹೆಚ್ಚಿಸಿದರು. ೧೯೧೦ ರಲ್ಲಿ ಅವರನ್ನು ಬ್ರಿಟಿಷ್ ಸರ್ಕಾರ ಬಂಧಿಸುವ ಸುದ್ದಿ ತಿಳಿದು ಅವರು ಏಪ್ರಿಲ್ ನಾಲ್ಕನೆಯ ತಾರೀಖು ಸಾವಿರದ ಒಂಭೈನೂರ ಹತ್ತನೆಯ ಇಸವಿಯಲ್ಲಿ ಪಾಂಡಿಚೇರಿಗೆ ಹೋದರು. ಅಲ್ಲಿಗೆ ಅವರ ರಾಜಕೀಯ ಜೀವನ ಅಂತ್ಯಗೊಂಡಿತು. ಬ್ರಿಟಿಷ್ ಸರ್ಕಾರಕ್ಕೆ ಹೆದರಿ ಅಥವಾ ನಿರಾಶೆಯಿಂದ ಅವರು ರಾಜಕೀಯ ಕ್ಷೇತ್ರದಿಂದ ನಿವೃತ್ತಿಹೊಂದಲಿಲ್ಲ. ಮನಶ್ಶಾಂತಿಗಾಗಿ, ತಮ್ಮ

ಯೋಗಾಭ್ಯಾಸ ಮತ್ತು ಆಧ್ಯಾತ್ಮಿಕ ಜೀವನಕ್ಕೆ ಅಡ್ಡಿಯಾಗಬಾರದೆಂದು ಅವರು ರಾಜಕೀಯ ಕ್ಷೇತ್ರದಿಂದ ದೂರವಾದರು. ಪಾಂಡಿಚೇರಿ ಅವರ ಪವಿತ್ರ ವಾಸಸ್ಥಳ ಹಾಗೂ ತಪಸ್ಸಿನ ಗುಹೆಯಾಗಿ ಪರಿಣಮಿಸಿತಲ್ಲದೆ ಅದು ಅವರ ಅಮೋಘ ಸಾಧನದ ಮತ್ತು ಸಿದ್ಧಿಯ ಆಶ್ರಯಸ್ಥಾನವಾಯಿತು. ಅವರ ಉಪದೇಶಾಮೃತವನ್ನು ಸ್ವೀಕರಿಸಲು ಅಸಂಖ್ಯ ಸ್ತ್ರೀ ಪುರುಷರು ಬರತೊಡಗಿ ಅದೊಂದು ಯಾತ್ರಾಸ್ಥಳವಾಯಿತು. ಈ ಸಮುದ್ರ ತೀರದ ಫ್ರೆಂಚ್ ಭಾರತದ ಪಟ್ಟಣದಲ್ಲಿ ಅರವಿಂದರು ನಲವತ್ತು ವರ್ಷ ಕಳೆದರು. ೧೯೧೪ರಲ್ಲಿ ಮಾತೆ ಯವರು ಆಶ್ರಮಕ್ಕೆ ಬಂದಮೇಲೆ ಹೆಚ್ಚು ಜನರು ಬರತೊಡಗಿದರು. ೧೯೨೬ ರಲ್ಲಿ ಎಲ್ಲ ವ್ಯವಸ್ಥೆಯನ್ನೂ ಅರವಿಂದರು ಮಾತೆಗೆ ವಹಿಸಿ ಸಂಪೂರ್ಣ ಏಕಾಂತ ವಾಸವನ್ನು ಕೈಗೊಂಡರು.

ಪಾಂಡಿಚೇರಿ ಆಗ ಭಾರತದಲ್ಲಿನ ಫ್ರೆಂಚ್ ವಸಾಹತು ಪ್ರದೇಶಗಳ ರಾಜ ಧಾನಿಯಾಗಿತ್ತು. ಅರವಿಂದರನ್ನು ಫ್ರೆಂಚ್ ಇಂಡಿಯಾ ಗಡಿಯಾಚೆ ಸಾಗಿಸಿ ದಸ್ತಗಿರಿ ಮಾಡಬೇಕೆಂದು ಬ್ರಿಟಿಷ್ ಸರ್ಕಾರ ನಡೆಸಿದ ಪ್ರಯತ್ನಗಳೆಲ್ಲ ವಿಫಲ ವಾಯಿತು. ಅವರಿಗೆ ಅನೇಕ ಕಿರುಕುಳವನ್ನು ಸಹ ಕೊಟ್ಟಿತು. ಅರವಿಂದರು ತಮ್ಮದೇ ಆದ ಆದರ್ಶವನ್ನು ಏಕಾಂತದಲ್ಲಿ ಸಾಧಿಸಿದ ಮೇಲೆ ಬಾಹ್ಯ ಪ್ರಪಂಚದೊಡನಿದ್ದ ಸಂಪರ್ಕವನ್ನು ಬಿಟ್ಟು ಜನರಿಂದ ದೂರವಾಗಿದ್ದರೂ ಪ್ರಪಂಚದ ಆಗುಹೋಗುಗಳನ್ನು ಅತ್ಯಾಸಕ್ತಿಯಿಂದ ಗಮನಿಸುತ್ತಿದ್ದರು. ಮಹಾಯೋಗಿ, ಆಧ್ಯಾತ್ಮಿಕಮೂರ್ತಿ, ದೈವಿಕಪುರುಷ ಅರವಿಂದರು ವ್ಯಾಧಿಗೆ ಸಿಕ್ಕಿ ತಮ್ಮ ೭೮ನೇ ವಯಸ್ಸಿನಲ್ಲಿ ೧೯೫೦ ಡಿಸೆಂಬರ್ ೫ನೇ ತಾರೀಖು ಜೀವನ್ಮುಕ್ತರಾದರು. ಪಾಂಡಿಚೇರಿಯ ಆಶ್ರಮದಲ್ಲೇ ಅವರ ಮಹಾ ಸಮಾಧಿಯಾಯಿತು.

ಅರವಿಂದರು ಇಂಗ್ಲೆಂಡಿನಲ್ಲಿ ವಿದ್ಯಾಭ್ಯಾಸ ಮಾಡಿ, ರಾಷ್ಟ್ರೀಯ ಕಾಲೇಜಿನ ಪ್ರಿನ್ಸಿಪಾಲರಾಗಿ, ಇಂಗ್ಲೀಷ್ ಬಂಗಾಳಿ ಪತ್ರಿಕೆಗಳ ಸಂಪಾದಕರಾಗಿ, ಸ್ವಾತಂತ್ರ್ಯ ಸಂಗ್ರಾಮದ ಮಾರ್ಗದರ್ಶಕರಾಗಿ, ಕಾಂಗ್ರೆಸ್ಸಿ ಚಳುವಳಿ ನಾಯಕರಾಗಿ, ಅನೇಕ ಗ್ರಂಥಗಳ ಲೇಖಕರಾಗಿ, ಜೈಲುವಾಸ ಅನುಭವಿಸಿ, ಕೊನೆಗೆ ಪಾಂಡಿಚೇರಿಯಲ್ಲಿ ಯೋಗಿಗಳಾಗಿ ನೆಲಸಿ, ಇಡೀ ಜಗತ್ತಿನಲ್ಲೆಲ್ಲಾ ಮಹಾಪುರುಷ, ಪ್ರಚಂಡ ಮೇಧಾವಿ, ಮಹಾಕವಿ ಮತ್ತು ಪರಿಪೂರ್ಣ

ಯೋಗಿಯೆಂದು ಖ್ಯಾತಿ ಗಳಿಸಿದರು. ಪಾಶ್ಚಾತ್ಯ ವಿಜ್ಞಾನದ ನೆಲೆಯನ್ನೆಲ್ಲ ಚೆನ್ನಾಗಿ ಅರ್ಥಮಾಡಿಕೊಂಡು, ಹಿಂದಿನವರ ತಿಳುವಳಿಕೆಯನ್ನೆಲ್ಲ ಜೀರ್ಣಿಸಿಕೊಂಡು ಹೊಸ ದರ್ಶನವನ್ನು ಪಡೆದು ಲೋಕದ ಆದರಕ್ಕೆ ಪಾತ್ರರಾದ ಅವರು ಅಸಾಧಾರಣ, ಅನುಪಮ ಮತ್ತು ಪೂಜ್ಯ ವ್ಯಕ್ತಿ. ಶುದ್ಧ ಬ್ರಹ್ಮಚಾರಿಯಂತೆ, ಸರ್ವಸ್ವವನ್ನೂ ತ್ಯಾಗ ಮಾಡಿದ ಸನ್ಯಾಸಿಯಂತೆ, ಮಹಾ ತಪಸ್ಸನ್ನು ಆಚರಿಸುವ ಋಷಿಯಂತೆ ಅವರು ರಾಜಕೀಯ ಕ್ಷೇತ್ರದಲ್ಲಿ ಶಕ್ತಿ ಮೀರಿ ದುಡಿದು ಪ್ರತಿಭಾವಂತರೆನಿಸಿಕೊಂಡು ಕಟ್ಟಕಡೆಗೆ ಆಧ್ಯಾತ್ಮಿಕ ಸಾಧನೆಯಲ್ಲಿ ತಮ್ಮ ಜೀವನವನ್ನು ಕಳೆದು ಮುಕ್ತಿ ಪಡೆದರು.

ಅರವಿಂದರು ಸ್ವಾತಂತ್ರ್ಯ ಸಂಗ್ರಾಮದ ಯೋಜನೆಯನ್ನು ರೂಪಿಸಿದ ಮಹಾಪುರುಷರು. ಅವರ ಜೀವನಚರಿತ್ರೆ ನಮ್ಮ ದೇಶದ ರಾಜಕೀಯ ಕ್ಷೇತ್ರದಲ್ಲಿ ಅವರು ಮಾಡಿದ ಅನುಪಮ ಕಾರ್ಯಗಳ ಬಗ್ಗೆ ಹೊಸ ಬೆಳಕು ಚೆಲ್ಲುವುದು. 'ಸ್ವಾತಂತ್ರ್ಯಯೋಧ' ಅರವಿಂದರ ಆದರ್ಶ ಜೀವನ, ಸಿದ್ಧಿ ಸಾಧನೆ ಉಪದೇಶಗಳು ಇಡೀ ಜಗತ್ತಿಗೇ ಅನುಕರಣೀಯ. ಕಾಂಗ್ರೆಸ್ಸಿನ ಅಧ್ಯಕ್ಷ ಸ್ಥಾನ ಸ್ವೀಕಾರಮಾಡುವಂತೆ ಗಾಂಧೀಜಿ ಮತ್ತು ಠಾಕೂರರು ಆಹ್ವಾನಿಸಿದರೂ ಅವರು ಸ್ಥಿರವಲ್ಲದ ಸ್ಥಾನಮಾನಗಳಿಗಾಗಿ ಆಶೆಪಡದೆ ಬರಲೊಪ್ಪಿಕೊಳ್ಳಲಿಲ್ಲ. ಶಾಶ್ವತವಾದ ದೈವೀಸಮಾನವಾದ ಸ್ಥಾನವನ್ನು ಅವರು ಬಯಸಿದರು. ರಾಜಕೀಯ ಸ್ವಾತಂತ್ರ್ಯ ಅವರ ದೃಷ್ಟಿಯಲ್ಲಿ ಒಂದು ಸಾಧನ ಮಾತ್ರ. ಆದ್ದರಿಂದ ಭೌತಿಕ ಸ್ವಾತಂತ್ರ್ಯಕ್ಕಾಗಿ ಅವರು ಹಂಬಲಿಸಲಿಲ್ಲ. ದೈವೀಶಕ್ತಿಯಿಂದ ಪ್ರೇರೇಪಿತವಾದ ಮಾನವ ಜನಾಂಗ ರಾಕ್ಷಸ ಶಕ್ತಿಯಿಂದ ಬಿಡುಗಡೆ ಹೊಂದಿ ಚಿರಶಾಂತಿ ಪಡೆಯಬೇಕೆಂಬುದೇ ಅವರ ಗುರಿಯಾಗಿತ್ತು. ನಮ್ಮ ದೇಶದ ಸ್ವಾತಂತ್ರ್ಯ ಚಳುವಳಿಯಲ್ಲಿ ಅವರು ಗಾಂಧಿ, ನೆಹರು, ತಿಲಕ್, ಬೋಸ್ ಮತ್ತು ಪಟೇಲ್ ಮಂತಾದ ಮಹಾವ್ಯಕ್ತಿಗಳು ಮಾಡಿದಷ್ಟೇ ಮಹತ್ತರ ಕೆಲಸ ಮಾಡಿದ್ದಲ್ಲದೆ ಸ್ವಾತಂತ್ರ್ಯ ರಕ್ಷಣೆ ಮತ್ತು ಪೋಷಣೆಗಾಗಿ ಕೂಡ ಅವರು ಚಿಂತಿಸಿದರು. 'ಸ್ವಾತಂತ್ರ್ಯ ಪ್ರತಿಯೊಂದು ಜನಾಂಗದ ಜೀವದ ಉಸಿರು, ಬಲಾತ್ಕಾರದಿಂದ ಕತ್ತು ಹಿಸುಕಿ ಉಸಿರಾಟ ನಿಲ್ಲಿಸಲು ಹವಣಿಸಿದಾಗ ಆತ್ಮರಕ್ಷಣೆಗಾಗಿ ಪಾರಾಗಲು ಎಲ್ಲ ವಿಧಾನವನ್ನೂ ಉಪಯೋಗಿಸುವುದು ನ್ಯಾಯಸಮ್ಮತ' ಎಂದು ಹೇಳಿದ ಅವರು 'ಸ್ವರಾಜ್ಯ ಜನ್ಮ

ಸಿದ್ಧ ಹಕ್ಕು' ಎಂಬ ಮಂತ್ರವನ್ನು ಭಾರತೀಯರ ಮುಂದಿಟ್ಟರು.

ಸ್ವಾತಂತ್ರ್ಯಪ್ರೀತಿ, ಸ್ವದೇಶಾಭಿಮಾನ ಅರವಿಂದರ ಅಂತರಾತ್ಮದ ಅತ್ಯಂತ ಪ್ರಬಲ ಪ್ರವೃತ್ತಿಯಾಗಿತ್ತು. ಪರಚಕ್ರಾಧಿಪತ್ಯವನ್ನು ಪ್ರಜಾಧಿಪತ್ಯವನ್ನಾಗಿ ಮಾಡಲು ಅವರು ಬಯಸಿ ಸ್ವರಾಜ್ಯವೆಂದರೇನು, ಅದರ ತತ್ತ್ವವೇನು ಎಂದೆಲ್ಲಾ ವಿವರಿಸಿ ಲೇಖನಗಳು, ಪುಸ್ತಕಗಳ ಮೂಲಕ ಜನತೆಯಲ್ಲಿ ಚೈತನ್ಯ ತುಂಬಿದರು. ಭಾರತಕ್ಕೆ ಸ್ವಾತಂತ್ರ್ಯ ತಂದುಕೊಡುವುದು ಅವರ ಗುರಿಯಾಗಿದ್ದರೂ ಕಟ್ಟಕಡೆಯ ಗುರಿ ಮಾನವಕೋಟಿಯ ಐಕ್ಯತೆ ಎಂದು ದೃಢವಾಗಿ ನಂಬಿದ್ದರು. ಅಡೆ ತಡೆ, ಕಷ್ಟ ನಷ್ಟ, ಸಾವು ನೋವುಗಳನ್ನು ತಾಳ್ಮೆಯಿಂದ ಅನುಭವಿಸಿ, ಕಾನೂನುಗಳನ್ನು ಮುರಿಯದೆ, ಹಿಂಸಾ ಕೃತ್ಯಗಳಲ್ಲಿ ತೊಡಗದೆ, ಸ್ವಾವಲಂಬನ, ಸ್ವಶಕ್ತಿ ಮತ್ತು ಸತ್ಯಾಗ್ರಹದಿಂದ ಸ್ವಾತಂತ್ರ್ಯ ಪಡೆಯಿರಿ ಎಂದು ಅವರು ಜನತೆಗೆ ಕರೆಯಿತ್ತರು. ಸಮಸ್ತವನ್ನೂ ತ್ಯಾಗಮಾಡಿದ ಅರವಿಂದರು ಸ್ವಾತಂತ್ರ್ಯ ಸಂಪಾದಿಸುವ ಹಠ ತೊಟ್ಟು ಕಾಯಾ, ವಾಚಾ, ಮನಸಾ ದುಡಿದರು. ಶುದ್ಧ ಸ್ವದೇಶಭಕ್ತಿಯ ಉಪದೇಶಕರೂ, ರಾಷ್ಟ್ರೀಯ ಪ್ರವಾದಿಗಳೂ ಆಗಿದ್ದ ಅರವಿಂದರು ಶುದ್ಧ ಸ್ವಾತಂತ್ರ್ಯವಲ್ಲದ, ಅಶ್ಲೀಲ ಹಾಗೂ ಅನಿಷ್ಟಕರವಾದ ರಾಜಕೀಯ ಧೋರಣೆಗಳ ವಿಷಯದಲ್ಲಿ ವಿಮುಖರಾದರು.

ಅರವಿಂದರು ಕೈಗೊಂಡ ಆಧ್ಯಾತ್ಮಿಕ ಸಾಹಸ ಸಾಧನೆ ಆಧುನಿಕ ಯುಗದಲ್ಲಿ ಅತ್ಯಂತ ಅದ್ಭುತವಾಗಿದೆ. ಅವರು ಸ್ವಾತಂತ್ರ್ಯೋದ್ಯಮದಲ್ಲಿ ನಾಯಕ ಸ್ಥಾನವನ್ನು ನಿರಾಕರಿಸಿ ಆಧ್ಯಾತ್ಮಿಕ ಜೀವಿತಕ್ಕಾಗಿ ತಮ್ಮ ಅಂತಃಕರಣವನ್ನು ಮುಡಿಪಾಗಿಟ್ಟ ಪವಿತ್ರವ್ಯಕ್ತಿ. ಸದಾ ಭಾರತ ಸ್ವಾತಂತ್ರ್ಯದ ಬಗ್ಗೆ ಚಿಂತಿಸುತ್ತಾ, ಪಾರಮಾರ್ಥಿಕ ವಿಚಾರಗಳಲ್ಲಿ ಮಗ್ನರಾಗಿ, ಸ್ವಾತಂತ್ರ್ಯದ ಸುದಿನಗಳ ಬಗ್ಗೆ ಕನಸು ಕಾಣುತ್ತಾ ಕಾಲ ಕಳೆದ ಮಹಾಯೋಗಿ ಅರವಿಂದರ ಕನಸು ಅವರ ಜೀವಿತದಲ್ಲೇ ನನಸಾಯಿತು. ಭಾರತಕ್ಕೆ ಸ್ವಾತಂತ್ರ್ಯ ಬಂದಾಗ ಅವರು ಹೆಮ್ಮೆಪಟ್ಟರು. ಸ್ವಾತಂತ್ರ್ಯ ಚಳುವಳಿ ಮತ್ತು ಸತತ ಆಧ್ಯಾತ್ಮಿಕ ಸಾಧನೆ ಎರಡೂ ಅವರ ಬಾಳಿನಲ್ಲಿ ಹಾಸು ಹೊಕ್ಕು ಎಂದು ಹೇಳಬಹುದು. ಆಧ್ಯಾತ್ಮಿಕ ಮೂಲಕ ಪ್ರಚಂಡ ಆತ್ಮಶಕ್ತಿಯನ್ನು ಅವರು ಸಂಪಾದಿಸಿ, ದೇಶಭಕ್ತಿಯನ್ನು ಆಧ್ಯಾತ್ಮಿಕತೆಯ ದಿವ್ಯ ಚೇತನದಲ್ಲಿ ಸೇರಿಸಿ

ಸ್ವಾತಂತ್ರ್ಯಕ್ಕಾಗಿ ಹೋರಾಡಿದರು. ಅವರದು ಆಧ್ಯಾತ್ಮನಿಷ್ಠ ರಾಜಕೀಯ ವೆನ್ನಬಹುದು. ಅವರ ಜೀವನಧಾರೆ, ವಿಚಾರಧಾರೆಯಲ್ಲಿ ಅವರ ಆಧ್ಯಾತ್ಮಿಕತೆ ಯನ್ನು ಯಾರೂ ಉದಾಸೀನ ಮಾಡುವಂತಿಲ್ಲ. ಭಾರತ ಆಧ್ಯಾತ್ಮವಿದ್ಯೆಯ ಮೂಲ, ಉತ್ಪತ್ತಿ ಸ್ಥಳ, ಅಮೂಲ್ಯ ಸ್ವಾನುಭವಗಳ ಆಗರ ಎಂದು ಅವರು ದೃಢವಾಗಿ ನಂಬಿ ಆಧ್ಯಾತ್ಮಿಕ ಸಾಧನೆಯನ್ನು ತಮ್ಮ 'ಸ್ವಂತ ಕಾರ್ಯ' ಎನ್ನು ತ್ತಿದ್ದರು. ರಾಜಕಾರಣ, ವಿಜ್ಞಾನ, ಮತ್ತು ಭೌತಿಕ ಜಗತ್ತು ಮುಂತಾದ ವಿಷಯಗಳಲ್ಲಿ ಅವರಿಗೆ ಆಧ್ಯಾತ್ಮಿಕತೆಯಷ್ಟೇ ಆಳವಾದ ಆಸಕ್ತಿಯಿದ್ದರೂ ರಾಜಕೀಯಕ್ಕೆ ಆಧ್ಯಾತ್ಮಿಕತೆಯ ಭದ್ರ ತಳಹದಿ ಹಾಕಿದರು. ಆಧ್ಯಾತ್ಮಿಕ ಸಿದ್ಧಿ ಸಾಧನೆಗಳಿಗಾಗಿ ಅವರಿತ್ತ ಕಾಣಿಕೆ ಬಹುಮುಖವಾಗಿದೆ. ಆಧ್ಯಾತ್ಮಿಕ, ರಾಜಕೀಯ ಎರಡನ್ನೂ ಸಮನ್ವಯ ಮಾಡಿಕೊಂಡು ಆಧ್ಯಾತ್ಮಿಕ ಮುಕ್ತಿ ಸ್ವಾತಂತ್ರ್ಯದ ಗುರಿಮುಟ್ಟಿದವರಲ್ಲಿ ಅರವಿಂದರು ಅದ್ವಿತೀಯರು.

ಪ್ರತಿಯೊಂದು ವಿಷಯವನ್ನೂ ಆಧ್ಯಾತ್ಮಿಕ ದೃಷ್ಟಿಯಿಂದ ವಿಚಾರ ಮಾಡಿ ನಮ್ಮ ಸಂಸ್ಕೃತಿಗೆ ಅನುಗುಣವಾಗುವಂತೆ ಜೀವನದಲ್ಲಿ ಇಳಿಸಬೇಕೆಂ ಬುದೇ ಅರವಿಂದರ ಬಯಕೆಯಾಗಿತ್ತು. ನಾಲ್ಕು ಪುರುಷಾರ್ಥಗಳಾದ ಧರ್ಮ, ಅರ್ಥ, ಕಾಮ, ಮೋಕ್ಷಗಳಲ್ಲಿ ಕೊನೆಯದನ್ನು ಹೊಂದಿ ಇಂದ್ರಿಯಜಾಲ ದಿಂದ ಮುಕ್ತನಾಗಿ ಆತ್ಮನ ನಿಜಸ್ವರೂಪವನ್ನು ಕಂಡುಹಿಡಿದ ಮಾನವ ಸಿದ್ಧಿ ಯನ್ನು ಹೊಂದುವನು. ಆಗ ಜೀವಾತ್ಮನು ಬ್ರಹ್ಮಾತ್ಮ ಅಥವಾ ಆತ್ಮನೊಂದಿಗೆ ಒಂದಾಗಿ ಅನಿರ್ವಚನೀಯವಾದ ಆನಂದ ಸ್ಥಿತಿಯನ್ನು ಹೊಂದುವನು. ಜೀವಂತವಿದ್ದಾಗಲೇ ಆತ್ಮಮುಕ್ತಿ ಹೊಂದಿದವನು 'ಜೀವ ನ್ಮುಕ್ತ.' ಭೌತ ಜೀವನವನ್ನು ಸಾಗಿಸುತ್ತಿರುವಾಗಲೇ 'ದೈವೀ ಜೀವನವನ್ನು' ಕೈಗೂಡಿಸಿಕೊಂಡು ಆತ್ಮಸಿದ್ಧಿಯ ನಂತರವೂ ಸತತವಾದ ಸಾಧನೆಯಿಂದ ಆ ಸಿದ್ಧಿಯನ್ನು ಸ್ವಾಧೀನದಲ್ಲಿರಿಸಿಕೊಳ್ಳಬೇಕೆಂದು ಅರವಿಂದರು ಉಪದೇಶಿಸಿ ದರು. ಆತ್ಮೋದ್ಧಾರದ ಜೊತೆಗೆ ಲೋಕೋದ್ಧಾರಕ್ಕೂ ಅವರು ಶ್ರಮಿಸಿದರು. ಈ ಸಿದ್ಧಿಯ ಪ್ರಾಪ್ತಿಗಾಗಿ ಬ್ರಹ್ಮಚರ್ಯ ಮತ್ತು ಯೋಗ ಇವೆರಡೂ ಅವಳಿ ಸಾಧನಗಳೆಂದು ಅವರು ಹೇಳಿದರು.

ಯೋಗಿ ಅರವಿಂದರು ಯಾವ ಗುರುವನ್ನು ಅನುಸರಿಸಲಿಲ್ಲವಾದರೂ ಯೋಗಾಭ್ಯಾಸ ಕಲಿಯಲು ಕೆಲವು ಯೋಗಿಗಳ ಸಹಾಯ ಪಡೆದರು. ಅವರು

ಬಹಿರ್ಮುಖವಾದ ಜೀವನ ಕ್ರಾಂತಿಕಾರಕ ರಾಜಕೀಯ ಚಟುವಟಿಕೆಗಳಿಂದ ಕೂಡಿದ್ದರೂ ಗುಪ್ತಗಾಮಿಯಾಗಿ ಅಂತರಿಕವಾಗಿ ಹರಿಯುತ್ತಿದ್ದ ಪ್ರಬಲ ಪ್ರವಾಹ ಅವರನ್ನು 'ಯೋಗೇಶ್ವರ' ನ ಪಂಥಕ್ಕೆ ಮುಟ್ಟಿಸಿತು. ಯೋಗ ಶಾಸ್ತ್ರವೂ ಒಂದು ಕಲೆ. ಜ್ಞಾನ, ಭಕ್ತಿ, ಕರ್ಮಗಳಿಗಾಗಿ ಭಗವಂತನೊಡನೆ ಒಂದಾಗುವುದೇ ಯೋಗ. ಕರ್ಮಗಳಲ್ಲಿ ಕಂಡುಬರುವ ಕೌಶಲವೇ ಯೋಗ. ಯೋಗದ ಸಹಾಯದಿಂದ ಮಾನವ ಒಂದು ಹೊಸ ಶಕ್ತಿಯನ್ನು, ಜ್ಯೋತಿಯನ್ನು, ಚೇತನವನ್ನು ಭೂಮಿಗಿಳಿಸುವುದು ಸಾಧ್ಯ ಎನ್ನುತ್ತಿದ್ದ ಅರವಿಂದರು ತಮ್ಮ ಯೌಗಿಕಶಕ್ತಿಯನ್ನು ಲೋಕಕಲ್ಯಾಣಕ್ಕಾಗಿ ಉಪಯೋಗಿಸಿದರು. ದೈವೀಪ್ರಜ್ಞೆಯನ್ನು ಪ್ರಪಂಚದಲ್ಲಿ ಪರಿಣಾಮಕಾರಿಯಾದ ರೀತಿಯಲ್ಲಿ ಅರಳಿಸುವುದೇ ಯೋಗದ ಗುರಿ. ಏಕಾಗ್ರತೆ, ಶ್ರದ್ಧೆ, ನಿಷ್ಠೆಯಿಂದ ಮನಸ್ಸು, ಪ್ರಾಣ, ದೇಹ ಅಂತರಾತ್ಮ ಎಲ್ಲವುಗಳಲ್ಲೂ ದೈವೀಶಕ್ತಿ ತುಂಬಿಸುವುದೇ ಪೂರ್ಣಯೋಗದ ಗುರಿ. ಆ ಗುರಿ ಮುಟ್ಟುವುದು ಸುಲಭವಲ್ಲ. ಸಾಧನೆಯಲ್ಲಿ ಎಷ್ಟು ತೊಂದರೆ, ಗಂಡಾಂತರಗಳು ಬಂದರೂ ಮಾನವ ಲೆಕ್ಕಿಸದೆ ಸಾಧಕ ಜೀವನದಲ್ಲಿ ಯೋಗ ಮಾರ್ಗದಲ್ಲಿ ಲಕ್ಷವಿಟ್ಟು ಶ್ರದ್ಧೆಯಿಟ್ಟು ದೈವೀಕೃಪೆಯಲ್ಲಿ ನಂಬಿಕೆಯಿಟ್ಟರೆ ಅವನು ಗುರಿ ಮುಟ್ಟಲು ಸಾಧ್ಯ. ಸರ್ವಸ್ವವನ್ನೂ ಅವನು ಭಗವಂತನಿಗೆ ಅರ್ಪಣೆ ಮಾಡಿಬಿಡುವುದರಿಂದ ಅವನಿಗೆ ಸಿದ್ಧಿ ಬೇಗನೆ ದೊರೆಯುವುದು. ಸಾಧಕನಿಗೆ ಶಾಂತಿ, ಪಾವಿತ್ರ್ಯ ಮತ್ತು ಸಮತೆ ಅವಶ್ಯಕ. ಪರಮಾತ್ಮನಲ್ಲಿ ನಿಷ್ಠಾವಂತನಾಗಿ ಶಾಂತ, ಆನಂದಮಯ ವಾತಾವರಣದಲ್ಲಿ, ಮನಸ್ಸಿನ ತಳಮಳವನ್ನೆಲ್ಲ ಹಿಡಿತದಲ್ಲಿಟ್ಟುಕೊಂಡು, ನಿಶ್ಚಲ ನೀರವತೆಯಿಂದ ಸರಿಯಾದ ಮಾರ್ಗದಲ್ಲಿ ನಡೆದು ಹೋಗಬೇಕು. ಬಾಹ್ಯ ಪ್ರಪಂಚದಲ್ಲಿದ್ದುಕೊಂಡೂ ಅದರ ಬಗ್ಗೆ ಅನಾಸಕ್ತನಾಗಿದ್ದು ಆಧ್ಯಾತ್ಮಿಕ ವಾತಾವರಣ ಹೊಂದಿದರೆ ಸಾಧಕನಿಗೆ ಮತ್ತೂ ಅನುಕೂಲ. ಈ ಆಧ್ಯಾತ್ಮಿಕ ಸಾಧನೆ, ಭೌತಿಕ ಸಂಪತ್ತು ಉನ್ನತಿಗಿಂತ ಶ್ರೇಷ್ಠ. ಈ ಗುರಿಯ ಸಿದ್ಧಿಗೆ ಮಹಾತ್ಯಾಗ, ತಪಸ್ಸು ಆಗತ್ಯ ಎನ್ನುತ್ತಿದ್ದ ಅರವಿಂದರು ಪ್ರತಿದಿನವೂ ತಪ್ಪದೆ ಶ್ರದ್ಧೆಯಿಂದ ಯೋಗಾಭ್ಯಾಸ ಮಾಡುತ್ತಿದ್ದರು.

ಜ್ಞಾನ, ಭಕ್ತಿ, ಕರ್ಮ ಇವು ಮೂರೂ ಪೂರ್ಣಯೋಗದ ತ್ರಿವೇಣಿ ಸಂಗಮ. ಪ್ರಾಣಾಯಾಮದ ಅಭ್ಯಾಸ ಬುದ್ಧಿಶಕ್ತಿಯನ್ನು ತೀವ್ರಗೊಳಿಸು

ತ್ತದೆ, ಮೆದುಳನ್ನು ಪಕ್ವಮಾಡಿ ಜ್ಞಾಪಕಶಕ್ತಿಯನ್ನು ಚುರುಕುಗೊಳಿಸಿ, ಮನಸ್ಸಿನ ಶಕ್ತಿ ತೇಜಸ್ಸನ್ನು ಹೆಚ್ಚಿಸುತ್ತದೆ ಎಂದು ಅರವಿಂದರು ಸಂದೇಶ ನೀಡಿದರು. ಅವರ ಯೋಗವನ್ನು ಪೂರ್ಣಯೋಗ, ಯೋಗಸಮನ್ವಯ, ಸಮರ್ಪಣಯೋಗ, ಅತಿಮಾನಸಯೋಗ ಎಂಬುದಾಗಿ ವಿವಿಧ ಹೆಸರುಗಳಿಂದ ವರ್ಣಿಸಬಹುದು. ಮಹಾಯೋಗಿ ಅರವಿಂದರು ಯೋಗಸಾಧನೆಗೆ ಸಹಕಾರಿಯಾದ ಬ್ರಹ್ಮಚರ್ಯೆಗೆ ತುಂಬ ಪ್ರಾಮುಖ್ಯತೆಯನ್ನು ಕೊಟ್ಟರು. ಬ್ರಹ್ಮಚರ್ಯೆಯ ಮಹತ್ವವನ್ನು ತಮ್ಮ ನಿದರ್ಶನದಿಂದ ಒತ್ತಿ ಒತ್ತಿ ಹೇಳಿ ದಿವ್ಯ ತೇಜಸ್ಸನ್ನು ಅವರು ಪಡೆದುಕೊಂಡರು. ಸಾಧನೆಯನ್ನು ಕುಗ್ಗಿಸಿಬಿಡುವ, ಸಾಧನೆಯ ಮಾರ್ಗದಲ್ಲಿ ಅಡ್ಡಿಯಾಗಿ ನಿಲ್ಲುವ ಕಾಮಜೀವನ ಮತ್ತು ಕಾಮುಕ ವಿಚಾರಗಳಿಂದ ದೂರವಾಗಿರಿ. ಕಾಮಚೇಷ್ಟೆ, ಕಾಮುಕ ಮಾತು ಕತೆಗಳನ್ನು ನಿಗ್ರಹಿಸುವುದೇ ಬ್ರಹ್ಮಚರ್ಯೆ. ಬ್ರಹ್ಮಚರ್ಯೆಯನ್ನು ಕಟ್ಟುನಿಟ್ಟಾಗಿ ಪಾಲಿಸುವವನಲ್ಲಿ ತೇಜಸ್ಸು, ಓಜಸ್ಸುಗಳು ಹೊರಹೊಮ್ಮುತ್ತವೆ ಮತ್ತು ಮಾನವ ಶಾರೀರಕ, ಬೌದ್ಧಿಕ, ನೈತಿಕ ಶಾಂತಿ ಸಾಮರ್ಥ್ಯಗಳನ್ನು ಪಡೆಯುತ್ತಾನೆ ಎಂದು ಅವರು ಬ್ರಹ್ಮಚರ್ಯೆಯ ಮಹತ್ವವನ್ನು ಎತ್ತಿ ಹಿಡಿದರು.

ಅರವಿಂದರು ಪ್ರಾರಂಭದಲ್ಲಿ ದೇವರೆಂಬುವನೊಬ್ಬ ಇದ್ದಾನೆ ಎಂದೇ ನಂಬಿರಲಿಲ್ಲ. ಅವರು ನಾಸ್ತಿಕರಾಗಿದ್ದರು ಮತ್ತು ಸಂಶಯವಾದಿಯಾಗಿದ್ದರು. ದೇವರಲ್ಲಿ ಅವರಿಗೆ ಸಂಪೂರ್ಣ ಶ್ರದ್ಧೆಯೂ ಇರಲಿಲ್ಲ. ಆದಾಗ್ಯೂ ವೇದ, ಭಗವದ್ಗೀತೆ ಮತ್ತು ಹಿಂದೂಧರ್ಮ ಸಾರುವ ಸತ್ಯ ಅವರ ಮನಸ್ಸನ್ನು ಆಕರ್ಷಿಸಿತು. ಕ್ರಮೇಣ ಪರಮಾತ್ಮನ ವಿಷಯದಲ್ಲಿ ಆವರಿಗೆ ನಂಬಿಕೆ ಹುಟ್ಟಿತು. ಸಿದ್ಧಿ ಸಾಧಿಸಿದ ಮೇಲೆ ಪರಮಾತ್ಮನ ಪ್ರತ್ಯಕ್ಷ ಅನುಭವವಾದ ಮೇಲೆ ಅವರ ನಂಬಿಕೆ, ಶ್ರದ್ಧೆ ಮುಗಿಲೆತ್ತರಕ್ಕೆ ಹೋಯಿತು. ದೈವಪ್ರೇರಣೆಯಿಂದ ಅವರು ಅತ್ಯಂತ ಗಂಭೀರವೂ, ವಿಶಾಲವೂ, ವ್ಯಾಪಕವೂ ಆದ ಉಪದೇಶಾಮೃತವನ್ನು ಜಗತ್ತಿಗೆ ನೀಡಿದರು. ಅವರ ಉಪದೇಶದಲ್ಲಿ ತತ್ತ್ವಜ್ಞಾನ ಮತ್ತು ಯೋಗ ಎರಡೂ ಅಡಕವಾಗಿವೆ. ಉಪನಿಷತ್ತು, ಭಗವದ್ಗೀತೆ ಗ್ರಂಥಗಳಿಂದ ಪ್ರೇರಣೆಹೊಂದಿದ ಅವರ ಉಪದೇಶದ ಮೌಲ್ಯಗಳಲ್ಲಿ ಅಂತರಂಗದ ಅನುಭವ, ಯೋಗ, ವಿಶಿಷ್ಟ ವಿಚಾರ, ತಾತ್ವಿಕ ಚಿಂತನೆ, ಬೌದ್ಧಿಕ

ವಿವೇಚನೆ ಒಟ್ಟುಗೂಡಿದೆ. ಅವರ ಜೀವನಾಮೃತದಿಂದ ಸತ್ಯ ಸತ್ತ್ವ ಜ್ಯೋತಿ ಚಿಮ್ಮಿಬರುವಂತೆ ಅವರ ಉಪದೇಶಾಮೃತ ಹೊರಹೊಮ್ಮಿದೆ.

ಮಾನವಕೋಟಿಯ ಉದ್ಧಾರಕ್ಕಾಗಿ ಅರವಿಂದರು ಪರಮಾತ್ಮನಲ್ಲಿ ತಾವಿಟ್ಟಿದ್ದ ಭಕ್ತಿ, ಶ್ರದ್ಧೆ, ನಂಬಿಕೆಯನ್ನು ಉದಾರ ಬುದ್ಧಿಯಿಂದ ವಿನಿಯೋಗಿಸಿದರು. ಅವರಲ್ಲಿ ದೈವಭಕ್ತಿ, ಆಸ್ತಿಕತೆ ಗಾಢವಾಗಿತ್ತು. 'ಪರಮಾತ್ಮನೇ ಸತ್ಯ, ಸರ್ವಸ್ವ. ನನ್ನಲ್ಲಿರುವ ಶಿಕ್ಷಣ, ಸಂಪತ್ತು, ಪ್ರತಿಭೆ, ಸೌಕರ್ಯ ಮುಂತಾದ ಸಕಲಶಕ್ತಿಯೂ ಆತನಿಂದಲೇ ಬಂದದ್ದು. ಆದ್ದರಿಂದ ಅದನ್ನೆಲ್ಲ ಮರಳಿ ಆತನಿಗೇ ಕೊಡದಿದ್ದರೆ ನಾನು ಚೋರನಾಗುತ್ತೇನೆ. ಈ ಶರೀರವೂ ದೇವರ ಅಭಿವ್ಯಕ್ತಿಯೆ. ಸಾಧಕನು ಆತ್ಮ, ಶರೀರ ಎಲ್ಲದರಲ್ಲೂ ಚೈತನ್ಯ ತುಂಬಿ ತುಳುಕುತ್ತಿರುವುದನ್ನು ಗುರುತಿಸಬೇಕು. ಎಲ್ಲವೂ ಬ್ರಹ್ಮಮಯ, ಎಲ್ಲ ಪದಾರ್ಥವೂ ವಾಸುದೇವ ಸ್ವರೂಪ' ಎಂದು ಧೃಡವಾಗಿ ನಂಬಿ ಉಪದೇಶಿಸಿದ ಅರವಿಂದರು 'ಈ ರಾಷ್ಟ್ರವನ್ನು ಮೇಲೆತ್ತುವ ನನ್ನ ಪ್ರಯತ್ನದಲ್ಲಿ ಶಕ್ತಿಯನ್ನು ಕೊಡು' ಎಂದು ದೇವರನ್ನು ಪ್ರಾರ್ಥಿಸುತ್ತಿದ್ದರು. ಕೆಲವರು ಅವರನ್ನು ದ್ವೈತಿಗಳೆಂದೂ ಮತ್ತೆ ಕೆಲವರು ಅದ್ವೈತಿಗಳೆಂದೂ ಚರ್ಚಿಸುತ್ತಾರೆ. ಆದರೆ ಅರವಿಂದರು ಶಂಕರಾಚಾರ್ಯರ ಅದ್ವೈತವಾದವನ್ನೇ ಹೊಸಧಾಟಿಯಲ್ಲಿ ಜನರ ಅನುರಾಗ, ವಿಶ್ವಾಸ ಗಳಿಸುವ ರೀತಿಯಲ್ಲಿ ಮುಂಡಿಸಿ ಜಗತ್ತಿನ ಸತ್ಯದ ತಿರುಳನ್ನು ಬಿಚ್ಚಿ ತೋರಿಸಿದರು.

ಧರ್ಮ, ಪರಂಪರೆ, ಸಂಸ್ಕೃತಿ ಶಿಥಿಲವಾಗುತ್ತಿರುವ ಆ ಕಾಲದಲ್ಲಿ ಜನಿಸಿದ ಅರವಿಂದರು ಮಾನವಕುಲದ ಪೂರ್ವ ಮತ್ತು ಪಶ್ಚಿಮ ರಾಷ್ಟ್ರಗಳ ವಿವಿಧ ಧಾರ್ಮಿಕ ಪರಂಪರೆಗಳಲ್ಲಿ ಸಾಮರಸ್ಯವನ್ನುಂಟುಮಾಡಲು ಶ್ರಮಿಸಿದರು. ಪ್ರತಿಧರ್ಮವೂ ಆತ್ಮನನ್ನು ಕಂಡುಕೊಳ್ಳಬೇಕು, ಭಗವಂತನನ್ನು ಅನುಭವಿಸಿ ಅರಿತುಕೊಳ್ಳಬೇಕು. ಸ್ವಧರ್ಮವೇ ಶ್ರೇಷ್ಠ. ಸ್ವಧರ್ಮವೇ ಪರಧರ್ಮಕ್ಕಿಂತ ಒಳ್ಳೆಯದು, ಪರಧರ್ಮದಲ್ಲಿ ಬಾಳುವುದಕ್ಕಿಂತ ಸ್ವಧರ್ಮದಲ್ಲಿ ಸಾಯುವುದು ಒಳ್ಳೆಯದು ಎನ್ನುವ ಗೀತೆಯ ಉಪದೇಶದಂತೆ ಅವರು ಏಕಾಗ್ರತೆಯಿಂದ, ಆತ್ಮವಿಶ್ವಾಸದಿಂದ ಹಿಂದೂಧರ್ಮ ತೋರಿಸಿದ ಮಾರ್ಗದಲ್ಲೇ ನಡೆದರು.

ಅಹಿಂಸಾಮಾರ್ಗವನ್ನು ಅರವಿಂದರು ಧಾರ್ಮಿಕ ಸೂತ್ರವೆಂದು ಭಾವಿಸಿರಲಿಲ್ಲ. ಭಾರತ ಸ್ವಾತಂತ್ರ್ಯ ಗಳಿಸಲು ಬಹಿರಂಗ ಅಸಹಕಾರ, ಶಾಂತಿಮಯ

ವಿರೋಧ, ಸತ್ಯಾಗ್ರಹ ಇವೆಲ್ಲಾ ಪರಿಣಾಮಕಾರಕ ಉಪಾಯಗಳೆಂದು ಅವರು ಅಭಿಪ್ರಾಯಪಟ್ಟಿದ್ದರೂ, ದಾಸ್ಯವಿಮೋಚನಾ ಸತ್ಕಾರ್ಯಕ್ಕೆ ಅವರು ಕ್ರಾಂತಿಕಾರಕ ಚಟುವಟಿಕೆಗಳನ್ನು ವಿರೋಧಿಸಲಿಲ್ಲ. ಅಹಿಂಸೆ ಎಲ್ಲ ಕಾಲ, ಪರಿಸ್ಥಿತಿಗಳಲ್ಲೂ ಪರಮಧರ್ಮ, ಹಿಂಸೆ, ದೌರ್ಜನ್ಯ ಅಪರಾಧ ಎಂದು ಖಂಡಿಸಿದರೂ, ಸ್ವಾತಂತ್ರ್ಯಕ್ಕಾಗಿ ರಕ್ತಪಾತಕ್ಕೆ ಹಿಮ್ಮೆಟ್ಟುವುದು ಹೇಡಿತನ ಎಂದು ಅವರು ಘೋಷಿಸಿದರು. 'ಯೋಧನ ಖಡ್ಗಶಕ್ತಿಯೂ ಬೇಕು. ಧರ್ಮ ಮತ್ತು ನ್ಯಾಯ ರಕ್ಷಣೆಗೆ, ಬಲಾಢ್ಯನು ನಾಶವಾಗದಂತೆ, ದುರ್ಬಲನು ದಬ್ಬಾಳಿಕೆಗೆ ಒಳಗಾಗದಂತೆ ನೋಡಿಕೊಳ್ಳುವುದು ಕ್ಷತ್ರಿಯನ ಕರ್ತವ್ಯ' ಎಂದು ಸಂದೇಶ ಸಾರಿದ ಅವರು ಸಶಸ್ತ್ರಕ್ರಾಂತಿಗೆ, ಹಿಂಸಾರೂಪದ ಪ್ರತೀಕಾರಕ್ಕೆ ಜನರನ್ನು ಪ್ರೋತ್ಸಾಹಿಸಿದರು. ಗಾಂಧಿವಾದದ ಅರ್ಥದಲ್ಲಿ ಅವರು ಶಾಂತಿಪ್ರಿಯರಲ್ಲ.

ಅರವಿಂದರು ಶ್ರೇಷ್ಠ ಸಾಹಿತ್ಯಜ್ಞರೆಂದು ಹೆಸರು ಸಂಪಾದಿಸಿದ್ದಾರೆ. ಅವರು ಲಂಡನ್ನಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗಲೇ ಭಾಷಾಶುದ್ಧಿ, ಭಾವ ಶುದ್ಧಿಯಿಂದ ಕೂಡಿದ ಉತ್ತಮಮಟ್ಟದ ಕವಿತೆಗಳನ್ನು ಬರೆದರು. ಅಣ್ಣನ ಸಾಹಿತ್ಯೋಪಾಸನೆಯೂ, ಕವಿತಾಸಾಮರ್ಥ್ಯವೂ ಅರವಿಂದರ ಸಹಜ ಶಕ್ತಿಗೆ ಸ್ಫೂರ್ತಿಕೊಟ್ಟವು. ಹದಿನೇಳನೆ ವಯಸ್ಸಿನಲ್ಲೇ ಅವರು ಗ್ರೀಕ್‌ಭಾಷೆ ಯಿಂದ ಕೆಲವು ಅನುವಾದಗಳನ್ನು ಮಾಡಿದರು. ಅವರು ೧೮೯೦-೯೨ರ ನಡುವೆ ಬರೆದ ಕವನಗಳಲ್ಲಿ ಶೇಕ್ಸ್‌ಪಿಯರ್‌ನಿಂದ ಯೇಟ್ಸ್‌ವರೆಗಿನ ವಿವಿಧ ಕವಿಗಳ ಪ್ರಭಾವ ಕಂಡುಬರುತ್ತದೆ. ೧೯೦೯ರ ನಂತರ ಅವರು ಬರೆದ ಕಾವ್ಯಗಳನ್ನು 'ಯೋಗ-ಕಾವ್ಯ' ಎಂದು ಹೆಸರಿಸಬಹುದು. 'ದೇವರು' ಕವಿತೆಯಲ್ಲಿ ದೈವೀಸಾಕ್ಷಾತ್ಕಾರದ ನಿಲುವನ್ನು ಚಿತ್ರಿಸಿದ್ದಾರೆ. 'ದಿ ಕಾಸ್ ಮಿಕ್ ಮ್ಯಾನ್' ಎಂಬ ಕವಿತೆಯಲ್ಲಿ ಅರವಿಂದರು ಇಡೀ ಮಾನವತೆಗೇ ಕವಿ ಚೇತನವನ್ನು ಹೋಲಿಸಿದ್ದಾರೆ. 'ಲಿಬರೇಷನ್' ಪದ್ಯದಲ್ಲಿ ಆತ್ಮದ ಅನಂತತೆಯ ದರ್ಶನವಿದೆ. 'ಮಾರ್ಟಿಲಾ ಗೀತಗಳು' ಭಾರತದಲ್ಲಿ ಪ್ರಕಟಗೊಂಡ ಅವರ ಪ್ರಥಮ ಕೃತಿ. ಅವರ ಅನೇಕ ಕವಿತೆಗಳಲ್ಲಿ ಭಾರತೀಯ ಪ್ರತಿಮೆಗಳೂ ಮೂಡಿಬಂದಿವೆ. ಸಾಗರದ ಗಂಭೀರತೆಯನ್ನು ಅಂತರಂಗದ ಆಳದೊಂದಿಗೆ ಅವರು ಹೋಲಿಸಿ ನೋಡಿದ್ದಾರೆ. ಅವರು ಮಹಾಕಾವ್ಯ 'ಸಾವಿತ್ರಿ'

ಯನ್ನು ರಸಮಯ ಭಾಷೆಯಲ್ಲಿ ಬರೆದಿದ್ದಾರೆ ಸ್ಫೂರ್ತಿನೀಡುವಂತಹ ಶೈಲಿ, ಅಪಾರ ವಿಚಾರ ಸಂಪತ್ತಿನ ಸಂಗ್ರಹಣೆ. 'ಸಾವಿತ್ರಿ' ಕಾವ್ಯ ಸಾಹಿತ್ಯಪ್ರಪಂಚದಲ್ಲೇ ಒಂದು ಅಪೂರ್ವ ಸಾಹಸವಾಗಿದೆ, ಶಾಶ್ವತ ಸತ್ಯಸಂಶೋಧನೆಗಾಗಿ ಹೊರಟಂತಿದೆ. ಜೀವಾತ್ಮವು ಪರಮಾತ್ಮರೂಪಕ್ಕೆ ವಿಲೀನಗೊಳ್ಳುವುದು, ಪಾಪದ ಕತ್ತಲನ್ನು ಜೀವಾತ್ಮ ಮೆಟ್ಟಿ ಮೇಲೇರುವುದು, ಮುಕ್ತಿ ಸಾಮ್ರಾಜ್ಯದ ಅನುಭವ ಇವೇ ಸಾವಿತ್ರಿ ಕಾವ್ಯದ ತಿರುಳು. ದೈವೀಜೀವನ ಮತ್ತು ಯೋಗ ಸಮನ್ವಯ ಸಂಕೇತರೂಪದಲ್ಲಿರುವ ಈ ಪುರಾಣ ಕಥೆಯಲ್ಲಿ ಕಂಡುಬಂದು ದಿವ್ಯತ್ವವನ್ನು ಪ್ರತಿಬಿಂಬಿಸುತ್ತದೆ.

ರಾಷ್ಟ್ರದ ಕಾರಣಪುರುಷರಾದ ಅರವಿಂದಘೋಷರು ತಮ್ಮ ಜೀವನದ ಆದರ್ಶ ಧ್ಯೇಯಸಾಧನೆಗಾಗಿ ತಮ್ಮ ಬತ್ತಳಿಕೆಯಲ್ಲಿ ಗ್ರಂಥಗಳು, ಪುಸ್ತಕಗಳು, ಪತ್ರಗಳು, ಸಂವಾದಗಳು, ಪ್ರವಚನಗಳು, ಭಾಷಣಗಳು, ಧ್ಯಾನ, ಪ್ರಾರ್ಥನೆ ಮುಂತಾದ ಆಯುಧಗಳನ್ನು ತುಂಬಿಕೊಂಡಿದ್ದರು. ಕಾವ್ಯವನ್ನು ಯೋಗದ ಒಂದಂಗ, ಕಾವ್ಯ ದೈವೀಸತ್ಯತೆಯನ್ನು ಅನುಭವಿಸುವ ಮಟ್ಟಕ್ಕೇರಿಸುವುದು ಎಂದು ಅವರು ನಂಬಿದ್ದರು. ಕಾವ್ಯ, ಸಂಗೀತ, ಕಲೆ ಇವೆಲ್ಲವೂ ಮಾನಸಿಕ ಮತ್ತು ದೈವಿಕ ಮೌಲ್ಯಗಳನ್ನು ನಿರ್ಮಿಸುವುವು. ಕಾವ್ಯವೂ ದೈವಸಾಕ್ಷಾತ್ಕಾರದ ಬೇರೆ ಸಾಧನಗಳಂತೆಯೇ ಒಂದು ಪ್ರಬಲ ಸಾಧನವಾಗಬಲ್ಲದು, ಆಗ ಕಾವ್ಯ ಮಂತ್ರಗಳ ಮಟ್ಟಕ್ಕೇರುವುದು ಎಂದು ಅವರು ತಿಳಿದಿದ್ದರು. ಅವರು ಬರೆದಿರುವ 'ಧರ್ಮ ಮತ್ತು ರಾಷ್ಟ್ರೀಯತ್ವ'ದ ಪುಸ್ತಕದಲ್ಲಿರುವ ವಿಚಾರಗಳು ಕ್ರಾಂತಿಯ ಕಿಡಿಗಳಿಂದ ತುಂಬಿವೆ. 'ಪೂರ್ಣಯೋಗ' 'ಅತಿಮನಸ್ಸು' ಎಂಬ ಆಧ್ಯಾತ್ಮಿಕ ಸತ್ಯಗಳನ್ನೇ ಅವರು ಜಗತ್ತಿಗೆ ನೀಡಿದರು. ಚಿತ್ರಕಲೆಯನ್ನು ಕುರಿತು 'ಭಾರತೀಯ ಸಂಸ್ಕೃತಿಯ ಬುನಾದಿ' ಎಂಬ ಉದ್ಗ್ರಂಥವನ್ನೂ ಅವರು ಬರೆದಿದ್ದಾರೆ. ಇದರಿಂದ ಅವರಿಗೆ ಲಲಿತ ಕಲೆಗಳ ಬಗ್ಗೆಯೂ ಸಾಕಷ್ಟು ಪಾಂಡಿತ್ಯವಿತ್ತು ಎಂದು ತಿಳಿಯಬಹುದು. ಅರವಿಂದರು 'ಪೂರ್ಣಯೋಗ' ಮತ್ತು ಅದರ ಸಾಧನೆಯ ಕ್ರಮ ಕುರಿತು ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಅವರು ಬರೆದಿರುವ ಪ್ರಬಂಧಗಳು ಸುಮಾರು ಮೂವತ್ತು ವರ್ಷಗಳು ಹಿಂದಿನವಾದರೂ ಈಗಿನ ಸಮಸ್ಯೆಗಳಿಗೆ ಅನ್ವಯಿಸುವುದು. ನಮ್ಮ ಧರ್ಮ, ಗೀತೆಯಧರ್ಮ, ಸಂನ್ಯಾಸ ಮತ್ತು ತ್ಯಾಗ,

ಮಾಯೆ, ಅಹಂಕಾರ, ನಿವೃತ್ತಿ, ಉಪನಿಷತ್ತುಗಳು, ಪುರಾಣ, ವಿಶ್ವರೂಪ ದರ್ಶನ, ರಾಷ್ಟ್ರೋನ್ನತಿ, ಸ್ವಾತಂತ್ರ್ಯ ಎಂದರೇನು ಮುಂತಾದ ವಿಷಯಗಳನ್ನು ಕುರಿತು ಅವರು ಬರೆದಿದ್ದಾರೆ.

ಅರವಿಂದರು ತುಲನಾತ್ಮಕ ಹಾಗೂ ವಿಚಾರಾತ್ಮಕ ದೃಷ್ಟಿಯಿಂದ ವಿವಿಧ ಐತಿಹಾಸಿಕ ಯುಗಗಳ ಭಾರತೀಯ ವಾಙ್ಮಯವನ್ನು ಇತರ ದೇಶಗಳ ಆಯಾ ಯುಗಗಳ ವಾಙ್ಮಯದೊಡನೆ ಹೋಲಿಸಿ ಅದರ ಮೌಲ್ಯದ ಘನತೆಯನ್ನು ಎತ್ತಿ ತೋರಿಸಿದ್ದಾರೆ. ರಾಮಾಯಣ, ಮಹಾಭಾರತಗಳನ್ನು ಅವರು ಭಾಷಾಂತರಿಸಿದ್ದಾರೆ. ಅನೇಕ ಬಂಗಾಲಿ ಹಾಡುಗಳನ್ನು 'ಸಾಗರ ಸಂಗೀತ' ಎಂಬ ಬಂಗಾಲಿ ಕಾವ್ಯಸಂಕಲನವನ್ನು ಅವರು ಆಂಗ್ಲಭಾಷೆಗೆ ತರ್ಜುಮೆ ಮಾಡಿದ್ದಾರೆ. ಅವರ ಗೀತೆ 'ವಂದೇ ಮಾತರಂ' ರಾಷ್ಟ್ರಗೀತೆಯಾಗುವ ಸ್ಥಾನ ಸಂಪಾದಿಸಿತು. ಉಪನಿಷತ್ತು, ಗೀತೆಗಳಿಗೆ ಅವರು ಬರೆದಿರುವ ಶುದ್ಧ ಸ್ವತಂತ್ರ ಭಾಷ್ಯಗಳು ಅರವಿಂದರ ಪಾಂಡಿತ್ಯಕ್ಕೆ, ಜ್ಞಾನಾನುಭವಗಳಿಗೆ ಸಾಕ್ಷಿಯಾಗಿವೆ. ವಿಜ್ಞಾನದ ಬೆಳವಣಿಗೆಯ ಬಗ್ಗೆ ಅವರಿಗಿದ್ದ ಜ್ಞಾನ ಅತ್ಯಾಧುನಿಕವಾಗಿತ್ತು. ಅವರು ಪತ್ರಿಕೋದ್ಯಮಿ ಮತ್ತು ಪ್ರಕಾಶಕನಂತೆಯೂ ಕೆಲಸಮಾಡಿದರು.

ದೇಶದ ವಿದ್ಯಾಶಿಕ್ಷಣದ ಬಗ್ಗೆ ಅನೇಕ ಲೇಖನಗಳನ್ನು ಪತ್ರಿಕೆಗಳಿಗೆ ಬರೆಯುತ್ತಿದ್ದ ಅರವಿಂದರು ಪುರಾತನ ತತ್ತ್ವ ಮತ್ತು ಪದ್ಧತಿಗಳನ್ನು ಬಹುವಾಗಿ ಮೆಚ್ಚಿಕೊಂಡರು. ಭಾರತದಲ್ಲಿ ಆಗ ಜಾರಿಯಲ್ಲಿದ್ದ ವಿದ್ಯಾಪದ್ಧತಿಯನ್ನು 'ಮಾನವನ ದೇಹ ಮತ್ತು ಆತ್ಮ ಎರಡನ್ನೂ ನಿಷ್ಕರುಣೆಯಿಂದ ಕೊಲ್ಲಲು ಅತಿ ಮೂರ್ಖತನದಿಂದ ಮಾನವ ಕಂಡುಹಿಡಿದ ಪರಿಪೂರ್ಣ ಯಂತ್ರ' ಎಂದು ಅವರು ಟೀಕಿಸಿದರು. ಶಿಕ್ಷಣ, ವಿಜ್ಞಾನ, ಕಲೆ, ಕೈಗಾರಿಕೆ, ವೇದಾಂತ, ಸಮಾಜವ್ಯವಸ್ಥೆ, ಆಡಳಿತ, ಆರ್ಥಿಕ ಪ್ರಗತಿ ಎಲ್ಲಕ್ಕೂ ಭಾರತದ ಸರ್ವ ಶ್ರೇಷ್ಠ ಸಂಸ್ಕೃತಿಯೇ ಅಡಿಪಾಯ ಎಂದು ಅವರು ತೀರ್ಮಾನಿಸಿದರು. ಸ್ತ್ರೀವಿದ್ಯಾಭ್ಯಾಸದ ಪ್ರಾಮುಖ್ಯತೆಯನ್ನು ಎತ್ತಿಹಿಡಿದ ಅರವಿಂದರು ನಮ್ಮ ಸ್ತ್ರೀಯರಲ್ಲಿ ಸ್ವಾರ್ಥಮಯ ಮನೋವೃತ್ತಿ ಅಸಹ್ಯವೆನಿಸುವಷ್ಟು ತುಂಬಿ ಕೊಂಡಿದೆ ಎಂದು ದುಃಖಿಸಿ ಏಕಾಗ್ರತೆಯಿಂದ ಸಾಮರ್ಥ್ಯವನ್ನು ಕಳೆದು ಕೊಳ್ಳದೆ ದೇವರಿರುವ ಮಾರ್ಗದಲ್ಲಿ ಹೆಜ್ಜೆಹಾಕಿ ಎಂದು ಸ್ತ್ರೀಜನಾಂಗಕ್ಕೆ ಎಚ್ಚರಿಕೆ ನೀಡಿದರು.

ಪಾಂಡಿಚೇರಿಯಲ್ಲಿ ಅರವಿಂದರು ಸ್ಥಾಪಿಸಿದ ಆಶ್ರಮ ಈಗಲೂ ಜಗತ್ತಿನ ಎಲ್ಲ ಕಡೆಗಳಿಂದಲೂ ಜನರನ್ನು ಆಕರ್ಷಿಸುತ್ತಿದೆ. ೧೯೧೦ಗಳಲ್ಲಿ ಫ್ರೆಂಚ್ ಮಹಿಳೆಯೊಬ್ಬರು ಪಾಂಡಿಚೇರಿಗೆ ಬಂದು ಅರವಿಂದರ ಯೋಗಶಾಲೆಯಲ್ಲಿ ಸಹಭಾಗಿಗಳಾಗಿ ಆಶ್ರಮದ ವಿಶಿಷ್ಟ ಕಾರ್ಯಭಾರವನ್ನೂ ಹೊತ್ತುಕೊಂಡರು. ಅವರೇ ಶ್ರೀಮಾತೆ. ಕೆಲವು ಸ್ತ್ರೀಪುರುಷರನ್ನು ಶಿಷ್ಯರನ್ನಾಗಿ ಪರಿಗಣಿಸಿದ ಅರವಿಂದರು ಅವರಿಗೆ ತಮ್ಮ ಮಾರ್ಗದರ್ಶನದಲ್ಲಿ ಸಿದ್ಧಿಪಡೆಯಲು ಅವಕಾಶ ಮಾಡಿಕೊಟ್ಟರು. ಶಾಂತಮಯವಾದ ಆಶ್ರಮ ಜೀವನದ ವಿಶಿಷ್ಟ ದಿನಗಳಲ್ಲಿ ಅವರು ಜನರಿಗೆ ದರ್ಶನ ಕೊಡುತ್ತಿದ್ದರು. ಆಶ್ರಮದಲ್ಲಿ ಈಗ ಸಾವಿರದ ಐನೂರಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ಜನರಿದ್ದಾರೆ. ಆಶ್ರಮದಲ್ಲಿ ಜಾತಿ, ಮತ, ಪಂಥ, ಲಿಂಗ ವಯೋಭೇದಗಳಾಗಲಿ, ದೇಶ, ಭಾಷೆ, ಪ್ರಾಂತಗಳ ಭೇದಭಾವವಾಗಲೀ ಇಲ್ಲ. ಆಶ್ರಮದ ಎಲ್ಲ ಕಾರ್ಯಕ್ಷೇತ್ರಗಳಲ್ಲೂ ಸ್ತ್ರೀಪುರುಷರಿಗೆ ಸಮಾನ ಅವಕಾಶವಿದೆ. ಸಾಧಕನ ಆಂತರಿಕ ಜೀವನವನ್ನು ರೂಪಿಸುವುದೇ ಆಶ್ರಮದ ಮುಖ್ಯ ಗುರಿ. ಐನೂರು ವಿದ್ಯಾರ್ಥಿಗಳಿಗೆ ಈಗಲೂ ಶಿಕ್ಷಣ ನೀಡಲಾಗುತ್ತಿದೆ. ಈ ಆಶ್ರಮದ ಶಿಕ್ಷಣಸಂಸ್ಥೆಯಲ್ಲಿ ಶಿಶುವಿಹಾರದಿಂದ ಸ್ನಾತಕೋತ್ತರದವರೆಗೆ ಅರವಿಂದರ ಅಪೇಕ್ಷೆಯಂತೆ ಶಿಕ್ಷಣವನ್ನು ಉಚಿತವಾಗಿ ಕೊಡಲಾಗುತ್ತಿದೆ.

ಆಶ್ರಮದಲ್ಲಿ ನೀಡಲಾಗುತ್ತಿರುವ ಶಿಕ್ಷಣ ಅರವಿಂದರ ತತ್ತ್ವೋಪದೇಶ ಮತ್ತು ಯೋಗಸಾಧನೆಯ ತಳಪಾಯದ ಮೇಲೆ ನಿಂತುಕೊಂಡು ವಿದ್ಯಾರ್ಥಿಗಳ ಮನಸ್ಸಿನ ಸರ್ವತೋಮುಖವಾದ ಬೆಳವಣಿಗೆಗೆ ಅವಕಾಶ ಕೊಡುತ್ತದೆ. ಮಾತೃಭಾಷೆಯಲ್ಲಿ ಶಿಕ್ಷಣ ನೀಡುವ ವ್ಯವಸ್ಥೆಯಿದ್ದರೂ ಇಂಗ್ಲಿಷ್ ಮತ್ತು ಫ್ರೆಂಚ್ ಭಾಷೆಗಳಿಗೂ ಅಲ್ಲಿ ಪ್ರಾಮುಖ್ಯತೆ ನೀಡಲಾಗಿದೆ. ಶಾರೀರಕ ಶಿಕ್ಷಣ, ಅಂಗಸಾಧನೆ, ಮಲ್ಲವಿದ್ಯೆ, ಬಯಲಿನಲ್ಲಿ ಆಟಗಳು, ಈಜುವುದು ಮುಂತಾದ ಮಾನವದೇಹಕ್ಕೆ ಶಿಕ್ಷಣ ನೀಡುವ ವ್ಯವಸ್ಥೆಯೂ ಅಲ್ಲಿದೆ. ಅರವಿಂದರ ಅಂತರರಾಷ್ಟ್ರೀಯ ಶಿಕ್ಷಣ ಕೇಂದ್ರದ ಜೀವನವನ್ನು ಆಧ್ಯಾತ್ಮಿಕ, ಮಾನಸಿಕ ಶಾರೀರಕ ಎಂದು ಮೂರು ಹಂತಗಳಲ್ಲಿ ಅಭ್ಯಸಿಸಬಹುದು. ಆಶ್ರಮವಾಸಿಗಳಿಗೆ ದೈಹಿಕ, ಬೌದ್ಧಿಕ, ಆಂತರಿಕ ಹಾಗೂ ಆಧ್ಯಾತ್ಮಿಕ ಶಿಕ್ಷಣ ಸಿಕ್ಕಿ ಪರಿಪೂರ್ಣತೆಯನ್ನು ಹೊಂದುವರು. ಆಶ್ರಮದ ಮಕ್ಕಳಿಗೆ ಆ ವಾತಾವರಣದಲ್ಲಿ ಸ್ವಾಭಾವಿಕವಾಗಿಯೇ ಆತ್ಮ, ಪರಮಾತ್ಮರ ಸಂಬಂಧ ತಿಳಿಯುವ ಅವಕಾಶವಿದೆ.

ಅರವಿಂದಾಶ್ರಮದಲ್ಲಿ ಒಂದು ದೊಡ್ಡ ಪುಸ್ತಕಾಲಯವಿದೆ. ಅಲ್ಲಿ ಹದಿನೈದು ಭಾಷೆಗಳ ಸುಮಾರು ನಲವತ್ತೈದು ಸಾವಿರ ಪುಸ್ತಕಗಳಿವೆ. ಈಗಲೂ ಅರವಿಂದರ ತತ್ತ್ವ ಮತ್ತು ಉಪದೇಶಗಳನ್ನು ವಿವರಿಸಲು ಅನೇಕ ಭಾಷೆಗಳಲ್ಲಿ ಪತ್ರಿಕೆಗಳನ್ನು ಪ್ರಕಟಿಸಲಾಗುತ್ತಿದೆ. ಸಾಧಕರ ಬೆಳವಣಿಗೆಗೆ, ಸಾಧನೆಗೆ ಸಾಕಷ್ಟು ಸ್ವಾತಂತ್ರ್ಯವಿದ್ದರೂ ಆಶ್ರಮದ ನಿಯಮಗಳು ರಾಜಕೀಯ, ಧೂಮಪಾನ, ಮಾದಕಪೇಯ ಮತ್ತು ಕಾಮರಂಜನೆಯನ್ನು ನಿಷೇಧಿಸಿದೆ. ಆರೋಗ್ಯಕ್ಕೆ ಆಶ್ರಮದಲ್ಲಿ ಪ್ರಮುಖಸ್ಥಾನ ನೀಡಲಾಗಿದೆ. ತನಗೆ ಇಷ್ಟವಾದ ವಿಷಯವನ್ನು ಹೆಚ್ಚು ಆಸಕ್ತಿಯಿಟ್ಟು ಕಲಿಯಲು ವಿದ್ಯಾರ್ಥಿಗೆ ಅವಕಾಶವಿದೆ. ಈ ಶಿಕ್ಷಣಕೇಂದ್ರ ಆಧುನಿಕ ಸೌಕರ್ಯಗಳನ್ನೊಳಗೊಂಡ ಗುರುಕುಲವಾಗಿದೆ. ಎಲ್ಲ ಜೀವನ ರೀತಿ ನೀತಿಗಳ ಉತ್ತಮಾಂಶಗಳನ್ನು ಈ ಆಶ್ರಮದ ಶಿಕ್ಷಣ ಒಳಗೊಂಡಿದೆ. ವ್ಯಕ್ತಿತ್ವದ ಪೂರ್ಣವಿಕಾಸ, ಸಾಧನೆಯ ಗುರಿ ಈ ಶಿಕ್ಷಣಸಂಸ್ಥೆಯ ವೈಶಿಷ್ಟ್ಯ. ಆಧ್ಯಾತ್ಮ ಸಾಧನದ ಅಪೇಕ್ಷೆ ಇದ್ದವರಿಗೆ ಸಾಧನ ಮಾರ್ಗದಲ್ಲಿ ಮಾರ್ಗದರ್ಶನವನ್ನೂ ನೀಡಲಾಗುತ್ತಿದೆ. ಆಶ್ರಮವಾಸಿಗಳು ತಮ್ಮ ಕೆಲಸಗಳನ್ನು ತಾವೇ ಮಾಡಿಕೊಳ್ಳುತ್ತಾರೆ. ಆಶ್ರಮಕ್ಕೆ ಸೇರಿದ ನೂರಾರು ಎಕರೆ ಭೂಮಿಯಲ್ಲಿ ಭತ್ತ, ಕಬ್ಬು, ಹಣ್ಣು, ತರಕಾರಿ ಬೆಳೆಯುತ್ತಾರೆ. ಭೋಜನಶಾಲೆ, ಪಾಠಶಾಲೆ, ಪೋಸ್ಟಾಫೀಸು, ಹೊಲಿಗೆ, ಔಷಧಾಲಯ ಮುಂತಾದ ಅಸಂಖ್ಯ ವಿಭಾಗಗಳನ್ನು ಈ ಆಶ್ರಮದಲ್ಲಿ ನೋಡಬಹುದು. ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಆಶ್ರಮವಾಸಿಗಳು ಆಸಕ್ತಿಯಿಂದ ಭಾಗವಹಿಸುವರು. ವ್ಯಾಪಾರಿ ದೃಷ್ಟಿಯಿಂದ ಆಶ್ರಮದ ಶಿಕ್ಷಣ ಸಂಸ್ಥೆ ಶಿಕ್ಷಣವನ್ನು ಕೊಡುವುದಿಲ್ಲ. ಈ ಶಿಕ್ಷಣ ಸಂಸ್ಥೆ ಜಗತ್ತಿಗೇ ಮಾದರಿಯಾಗಬಲ್ಲದು.

ಭಾರತ ಸಂಸ್ಕೃತಿ ಪಾಶ್ಚಾತ್ಯ ಸಂಸ್ಕೃತಿಗಿಂತ ಮೇಲೆಂದ ಅರವಿಂದರು ಭಾರತ ಸಂಸ್ಕೃತಿಯ ಪ್ರತಿರೂಪದಂತಿದ್ದರು. ಭಾರತ ಸಂಸ್ಕೃತಿಯಲ್ಲಿ ಅವರಿಗೆ ಶ್ರದ್ಧೆಯಿದ್ದರೂ, ಮೂಢ ನಂಬಿಕೆ ಮತ್ತು ಅಂಧಶ್ರದ್ಧೆಗೆ ಅವರು ದಾಸರಾಗಿರಲಿಲ್ಲ. ಭೌತಿಕ ಲಾಭಗಳೇ ಮಾನವನ ಬಾಳಿಗೆ ಅತಿ ಮುಖ್ಯವಲ್ಲ ಎನ್ನುವ ಸಂದೇಶವನ್ನು ಅವರು ನೀಡಿದ್ದಾರೆ. ಅವರು ಎಲ್ಲ ಬಗೆಯ ಬೌದ್ಧಿಕ ಆಡಂಬರ, ಅಲಂಕಾರಗಳನ್ನೂ ತ್ಯಜಿಸಿ ಆತ್ಮತತ್ತ್ವವನ್ನೇ ಸಂಧಿಸಿದರು. ಜಡತ್ವದಿಂದ,

ಅಜ್ಞಾನ, ಅವಿವೇಕದಿಂದ ಆತ್ಮವನ್ನೇ ಮರೆತಿದ್ದ ಭಾರತೀಯರಲ್ಲಿ ಜಾಗೃತಿ ಉಂಟುಮಾಡಿದರು. ಮಹಾಯೋಧ ಅರವಿಂದರು ಮಹಾಸಾಧಕರು, ಶ್ರೇಷ್ಠ ಜ್ಞಾನಿಗಳು, ಬೋಧಕರು ಮತ್ತು ತಾವು ಕೈಗೊಂಡ ದೀಕ್ಷೆಗಾಗಿ, ಆದರ್ಶಕ್ಕಾಗಿ ಇಡೀ ಬಾಳನ್ನೇ ಮುಡಿಪಾಗಿಟ್ಟು ಸಾರ್ಥಕಗೊಳಿಸಿಕೊಂಡರು. ಅವರ ನಶ್ವರ ದೇಹ ನಮ್ಮಿಂದ ಮರೆಯಾಗಿದ್ದರೂ ಅವರ ಹಿಗ್ಗಿನ ಸಂದೇಶ, ಉಪದೇಶಾಮೃತದ ವಿಜಯಧ್ವನಿ ಈಗಲೂ ಪ್ರಪಂಚದಲ್ಲೆಲ್ಲಾ ಮೊಳಗುತ್ತಿದೆ.

ಅರವಿಂದರು ಕೇವಲ ವ್ಯಕ್ತಿಯಾಗಿರದೆ ಒಂದು ಸಂಸ್ಥೆಯಾಗಿದ್ದರು. ಭಾರತೀಯ ಸಂಸ್ಕೃತಿ, ಧರ್ಮಗಳ ಪುನರುತ್ಥಾನಕ್ಕೆ ತಮ್ಮ ಇಡೀ ಆಯುಷ್ಯವನ್ನೇ ಮುಡಿಪಾಗಿಟ್ಟ ಹಿರಿಯ ಜೀವ. ಇವರ ಹೆಸರು ಭಾರತದ ಇತಿಹಾಸದಲ್ಲಿ ಒಂದು ಮುಖ್ಯ ಸ್ಥಾನ ಸಂಪಾದಿಸಿದೆ. ಯುವಜನಾಂಗದಲ್ಲಿ ದೇಶಪ್ರೇಮದ ಜ್ಞಾನೋದಯವನ್ನುಂಟುಮಾಡಿ, ಅವರಲ್ಲಿ ಶಿಸ್ತು, ಸಂಯಮ, ಸ್ಥಿರಮನಸ್ಸನ್ನು ಕೂಡಿಸಿದ ಅರವಿಂದರು ಧೀರರು, ಕ್ರಾಂತಿವೀರರು, ರಾಷ್ಟ್ರ, ದೇಶ, ಜಾತೀಯತೆ, ಪ್ರಾಂತ ಇವುಗಳಲ್ಲಿರುವ ವಿವಿಧತೆಯಲ್ಲಿ ಏಕತ್ವವನ್ನುಂಟುಮಾಡುವುದೇ ರಾಷ್ಟ್ರೀಯತ್ವ ಎಂದು ಅವರು ದೃಢವಾಗಿ ನಂಬಿದ್ದರು. ಸರ್ವಸಾಮಾನ್ಯ ರಾಜಕಾರಣಿಯಂತಲ್ಲದೆ ಅವರು ಒಬ್ಬ ಪ್ರತಿಭಾವಂತ ಕವಿಯಂತೆ, ಪ್ರವಾದಿಯಂತೆ ಮಾತನಾಡುತ್ತಿದ್ದರು, ಬರೆಯುತ್ತಿದ್ದರು. ಮೃತ್ಯುವನ್ನು ಕಡೆಗಣಿಸಿ, ದೇಹಸುಖವನ್ನು ತ್ಯಾಗಮಾಡಿ ನಿರ್ಭೀತಿಯಿಂದ ಆತ್ಮ ಬಲಿದಾನಕ್ಕೆ ಸಿದ್ಧರಾಗಿ ಎಂದು ಅವರು ಉಪದೇಶಿಸಿದರು.

ನಮ್ಮ ಯುವಜನಾಂಗ ಅರವಿಂದರ ಜೀವನಚರಿತ್ರೆಯನ್ನು ಓದಿ, ಅವರ ಉಪದೇಶ, ಸಾಧನೆ, ಸಿದ್ಧಿಗಳನ್ನು ಪರಿಶೀಲಿಸಿ, ಅವರ ನಡೆನುಡಿಗಳಿಂದ ಮಾರ್ಗದರ್ಶನ ಪಡೆಯಬೇಕು. ಅವರ ಜೀವನದ ಆದರ್ಶದಿಂದ ನಮ್ಮ ದೇಶದ ಯುವಕ ಯುವತಿಯರು ದೇಶಸೇವೆಗೆ ನಡುಕಟ್ಟಿ ಆತ್ಮಾರ್ಪಣೆಗೂ ಸಿದ್ಧರಾಗಬೇಕು ಮತ್ತು ದೇಶಕ್ಕಾಗಿ ಸರ್ವಸ್ವವನ್ನೂ ತ್ಯಾಗಮಾಡುವಂತಹ ಬುದ್ಧಿ ಅವರಲ್ಲಿ ಉದ್ದೀಪನವಾಗುವುದು ಖಂಡಿತ.

---